ಮಲಯ ಮಾರುತವು ಸುಳಿದಾಡುವುದು
ಮಲಿನ ಮಾನಸವು ತಿಳುವಾಗುವುದು
ಹೊಲದ ಪೈರು ಮನೆ ಮನೆದುಂಬಿಹುದು
ಗೆಲುವಿನ ಮಧುಮಾಸವು ಬರುತಿಹುದು ॥ ೩ ॥

ಬಿಳಿಯ ಕಮಲವಸುಗೆಯ ಪೂಗೊನೆಯು
ನಳನಳಿಸುವ ಮಾವಿನ ಕೆಂಗುಡಿಯು
ಪೊಳೆಯುವ ಜಾಜಿಯು ಕನ್ನೈದಿಲೆಯು
ಗೆಳೆಯನೆಂದು ಮಧುಗಳಿಸಿದ ಸಿರಿಯು ॥ ೪ ॥

ಮಲ್ಲಿಗೆ ಸಂಪಿಗೆ ಶಾವಂತಿಗೆಯು
ಅಲ್ಲಲ್ಲಿಗೆ ಬಕುಳದ ಪೂಗೊನೆಯು
ಎಲ್ಲೆಲ್ಲಿಯು ಗಮಗಮವಾಸನೆಯು
ಮೆಲ್ಲನೆ ಮಧುಮಾಸವು ಬರಲಣಿಯು ॥ ೫ ॥

ತರುಲತೆಗಳು ಬಲು ಚಿಗಿಯುತಲಿಹವು
ಹಿರಿನವಿಲುಗಳಂದದೆ ಕುಣಿಯುವವು
ಅರಗಿಳಿಗಳು ಹರಹರ ಎನುತಿಹವು
ಹರುಷದ ಮಧುಮಾಸದೊಳೀ ಇರುವು ॥ ೬ ॥

ಕೋಗಿಲೆ ಗಾಯಕನಾಗಿರುತಿಹುದು
ರಾಗದ ಪೆಟ್ಟಿಗೆ ಕೊರೆಬಿದಿರಹುದು
ಸೋಗಿನ ನರ್ತಕ ನವಿಲಾಗಿಹುದು
ಈಗ ವಸಂತ ನಿರೀಕ್ಷಕನಹುದು ॥ ೭ ॥

ಕಳ್ಳ ಕಾಮಗಿಳೆ ವಶವಾಗಿಹುದು
ಬಾಳ್ವಾಟವು ಬಹು ಹೆಚ್ಚಾಗಿಹುದು
ಒಳ್ಳೆಯೊಳ್ಳೆ ಜನ ಮಳ್ಳಾಗಿಹುದು
ಪೊಳ್ಳು ವಸಂತವು ಜಿಗಿದಾಡುವುದು ॥ ೮ ॥

ರಾಗಿಯ ಚಿತ್ತವು ತಳಮಳಿಸುವುದು
ರೋಗಿಯ ಚಿತ್ತವು ಕಳೆಗಳಿಸುವುದು
ಯೋಗಿಯ ಚಿತ್ತವು ಚಂಚಲವಹುದು
ಪಾಗೀಶನ ಧೃತಿ ಜಿಳಯುತಲಿಹುದು ॥ ೯ ॥

# ಹಂಬಲ

[ ಕತೆಗಾರ — ಜಿ. ಮುರಿಗೇಂದ್ರ ]



ಗರಗರನೆ ಗಾಲಿ ತಿರುಗುತಲಿದೆ. ಸರಸರನೆ ಅಚ್ಚಾದ ಕಾಗದಗಳು ಅಚ್ಚುಕಟ್ಟಾಗಿ ಬೀಳುತಲಿವೆ. ಪಟಪಟನೆ ಜೋಡಿಸುವ ಮಳೆಗಳ ಜೋಡನೆಯು ಜೋರಾಗಿ ಸಾಗಿದೆ. ಸಾಲುಸಾಲಾಗಿ ಸಿಸ್ತಿನಿಂದಿಟ್ಟ ಸಲಕರಣೆಗಳು ಸುಸಜ್ಜಿತವಾಗಿವೆ. ಮುದ್ರಣದ ಮಳೆಗಳ ಮರಗಳು ಮನಸ್ಸನ್ನೆಳೆಯುವಂತಿವೆ. ಚಟಪಟನೆ ಚಾಲಾಕಿಯಿಂದ ನಡೆಸಿರುವ ಕೆಲಸ ಚಕಮಕಿಕಟ್ಟಿದಂತಾಗಿ ನೋಡುವವರನ್ನು ಚಕಿತಗೊಳಿಸುತಲಿರುವರು ಆ ಚಾಲಕರು. ಗಡಗಡನೆ ಗದರಿಸಿ ಕಲಿಯುಗದ ಕರ್ತೃತ್ವ ಶಕ್ತಿಯನ್ನು ಕಣ್ತೆರೆದು ನೋಡುವಂತೆ ಮಾಡಿತು ಆ ಯಂತ್ರ.

ನಿಂತು ನೋಡಿದೆ, ನೋಡುತ್ತ ಒಳ ನುಗ್ಗಿದೆ.

ಸರಸರನೆ ಸಾಗುತ್ತಿರುವ ಸಂಪಾದಕರ ಲೇಖಣಿಕೆಯು ಲೋಕದ ಲಗುಬಗೆಯ ವಿಚಾರದ ವೇಗವನ್ನು ವ್ಯಕ್ತಮಾಡುತ್ತಿತ್ತು. ಬಲತ್ಕಾರದಿಂದ ಬಲಗೊಳ್ಳುವ ಬಲ ರಾಷ್ಟ್ರಗಳ ಭಯಂಕರ ಭೀಕರ ಪರಿಸ್ಥಿತಿಗೆ ಹೆದರಿ ಓಡುವಂತಿತ್ತು ಆ ಲೆಕ್ಕಣಿಕೆಯ ಓಟವು. ಸಂಗ್ರಹದಿಂದ ಸಜ್ಜಾದ ಕುದುರೆಗೆ ಸಾಹಿತ್ಯದಿಂದೊಡಗೂಡಿದ ಲೆಕ್ಕಣಿಕೆಯ ಜೀನು ಹಾಕಿ ಕೂತು, ರಾಜಕೀಯ ಕಡಿವಾಣವನ್ನು ಬಿಗಿಯಾಗಿ ಹಿಡಿದು, ಒಂದೊಂದು ಹೆಜ್ಜೆಯನ್ನು ಮುಂದೆ ಸಾಗಿಸುತ್ತಿದ್ದರು ಆ ಸಂಪಾದಕರು. ಕಥೆ-ಕಾದಂಬರಿ, ಭಾರತೀಯ ಬಿಕ್ಕಟ್ಟಿನ ಸ್ಥಿತಿ, ಬಡವರ ಬಡತನದ ಬೇಗೆ, ಸ್ಥೈವುಳ್ಳವರ ದುಂಡುಗಾರಿಕೆ, ಅಂತರ್ರಾಷ್ಟ್ರೀಯ ಅಂತರಂಗ, ಮುಖಂಡರ ಮಹಾತ್ವಾಕಾಂಕ್ಷೆ. ಮುಂತಾದ ಜಗತ್ತಿನ ಜನರಿಗೆ ಜಾಗರೂಕತೆಯಿಂದ ಜಾಗೃತಿಗೊಳಿಸುವ ಮುಖ್ಯ ಸಾಧನ ಮುದ್ರಣಾಲಯವೆಂದು ಮನಸ್ಸಿನಲ್ಲಿ ಮನದಟ್ಟಾಗಿ ಇದೇ ಮಾರ್ಗದಿಂದ ಮುಂದರಿಯಬೇಕೆಂದು ಮಾಡಿದೆ.

# ನಾಗದಮನ ಅಥವಾ ಸೀಮೆಯಕಳ್ಳಿ

**ಶ್ರೀ ಶಿವ.**



ಈವಾಗ ನಮ್ಮ ಭಾರತದೇಶದಲ್ಲಿ ಅನೇಕ ಬಗೆಯ ಮೂಲಿಕೆಗಳಿಗೆ ನಾಗದಮನವೆಂದು ಹೇಳುತ್ತಿರುವುದು ಗೊತ್ತಾಗುವುದು. ಮೈಸೂರು ಸೀಮೆಯವರು ಯಾವದೋ ಒಂದು ಬೇರಿಗೆ ನಾಗದಮನವೆಂದರೆ ಧಾರವಾಡ ಸೀಮೆಯವರು ಮತ್ತೊಂದು ಬೇರಿಗೆ ನಾಗದಮನವೆನ್ನುವರು. ಹೀಗಾಗಿ ಶಾಸ್ತ್ರಕಾರರು ಹೇಳುವ ನಾಗದಮನವು ಯಾವುದೆಂದು ತಿಳಿಯುವುದೇ ಕಷ್ಟಸಾಧ್ಯವಾಗಿದೆ. ಆದರೂ ನಾನಿಲ್ಲಿ ಉತ್ತರಹಿಂದುಸ್ತಾನದವರು ಒಪ್ಪಿಕೊಂಡಿರುವ ಮತ್ತು ವ್ಯವಹಾರದಿಂದ ಸಫಲವಾಗಿ ಕಂಡಿರುವ ನಾಗದಮನದ ಚರ್ಚೆಯನ್ನು ವಿಶದಗೊಳಿಸುವೆನು. ನಾನು ಉತ್ತರಹಿಂದುಸ್ತಾನದಲ್ಲಿ ಕಂಡಿರುವ ನಾಗದಮನಕ್ಕೆ ಮೈಸೂರುಸೀಮೆಯವರು ಸೀಮೆಯಕಳ್ಳಿಯೆಂದು ಕರೆಯುವರು.

ಇದರ ಸ್ವರೂಪ:— ಇದರ ಗಿಡವು ೩ ಅಥವಾ ೪ ಅಡಿ ಎತ್ತರವಾಗಿ ಬೆಳೆಯುತ್ತದೆ. ಆದರೆ ಇದಕ್ಕೆ ಮಗ್ಗಲು ಟೊಂಗೆಗಳು ಇರುವುದೇ ಅಪರೂಪ. ಇದು ಬುಡದಿಂದ ದಪ್ಪನಾಗಿದ್ದು ತುದಿಗೆ ಬರಬರುತ್ತ ಕಿರಿಬೆರಳಿಗಿಂತಲೂ ಸಣ್ಣನಾಗಿರುವುದು. ಈ ಗಿಡದ ಮಧ್ಯಮಧ್ಯದಲ್ಲಿ ಗಣ್ಣುಗಳೂ ಗಣ್ಣಿಗೆ ಒಂದೊಂದೇ ಎಲೆಯೂ ಇರುವವು. ಇದರ ಎಲೆಗಳನ್ನು ಮುರಿದು ಕತ್ತರಿಸಿ ಹಾಕಿದ ಗಿಡವು ಒಮ್ಮೊಮ್ಮೆ ಸಣ್ಣ ಹಸುರು ಹಾವಿನಂತೆ ಕಾಣುವುದುಂಟು. ಈ ಗಿಡವು ಬಹಳ ನುಣುಪಾಗಿಯೂ ಟೊಳ್ಳಾಗಿಯೂ ಇರುವುದು. ಗಿಡವನ್ನೋ ಅಥವಾ ಎಲೆಯನ್ನೋ ನಾವು ಉಗುರಿನಿಂದ ಕಚ್ಚುಮಾಡಿದರೆ ತಟ್ಟನೆ ಹಾಲು ಹೊರಬೀಳುವುದು. ಇದನ್ನು ಚಂದಕ್ಕಾಗಿ ಸ್ಕೂಲುಗಳ ಮುಂಭಾಗದ ಬೇಲಿಗೂ ಕಚೇರಿಗಳ ಬೇಲಿಗೂ ಹಾಕುವುದುಂಟು. ಇದರ ಎಲೆಯ ಆಕಾರವು ವೀಳೇದೆಲೆಯಂತೆಯೇ ಇರುವುದಾದರೂ ಆಳತೆಯು

ಅಷ್ಟೊಂದು ದೊಡ್ಡದಾಗಿರುವುದಿಲ್ಲ. ಎಲೆಯು ಬಹಳ ದಪ್ಪನಾಗಿರುವುದರಿಂದ ಮುಡಿಚಿದಾಕ್ಷಣವೇ ಪಟ್ಟನೇ ಮುರಿಯುವುದು. ಸಣ್ಣ ಮಕ್ಕಳು ಇದರ ಎಲೆಯನ್ನು ಮುರಿದು ವಿಶೇಷವಾಗಿ ಆಟವಾಡುತ್ತಿರುವರು. ಚೈತ್ರ ವೈಶಾಖ ಮಾಸಗಳಲ್ಲಿ ಇದು ಹೊಸ ಎಲೆಗಳನ್ನು ಬಿಡುವುದಲ್ಲದೆ ತುದಿಗೆ ಒಂದೆರಡು ಕೆಂಪು ಎಲೆಗಳಿಂದ ಕೂಡಿದ ಕುಡಿಯನ್ನು ಬಿಡುವುದು. ಆ ಕುಡಿಯ ಬಣ್ಣವು ಗುಲಾಬಿ ಹೂವಿನ ಬಣ್ಣವನ್ನೇ ಹೋಲುವುದು. ಕೆಲವರು ಇದೇ ಕುಡಿಗೆ ಹೂವೆಂದು ಭ್ರಮಿಸುವುದೂ ಉಂಟು. ಆದರೆ ಅದು ಹೂವಲ್ಲ. ಅದು ಮುಂದೆ ಬರಬರುತ್ತ ಕಪ್ಪು ಮಿಶ್ರಿತವಾದ ಹಸುರು ಬಣ್ಣದ ಎಲೆಯ ರೂಪಾಂತರಕ್ಕೆ ಬರುವುದು. ಇದಕ್ಕೆ ಹೂವಿಲ್ಲದಂತೆ ಫಲವೂ ಕೂಡ ಇರುವುದಿಲ್ಲ. ಇದರ ಬಳಿಯಲ್ಲಿ ಹಾವುಗಳು ಓಡಾಡುವುದಿಲ್ಲವೆಂದು ಹೇಳುವರು. ನಾಗದಮನ ಶಬ್ದಾರ್ಥವನ್ನು ನಾವು ವಿಚಾರಮಾಡಿದರೆ ನಾಗ ಅಂದರೆ ಹಾವನ್ನು ದಮನ ಅಂದರೆ ತಡೆಯುವುದು ಎಂದಾಗುವದರಿಂದ ಈ ಮೂಲಿಕೆಯು ಹಾವಿನ ವಿಷವನ್ನು ಹರಣಮಾಡುವುದರಲ್ಲಿ ಸಮರ್ಥವಾದುದೆಂದು ಕಂಡು ಬರುವುದು.

**ಸರ್ಪವಿಷದಮೇಲೆ:—** ಹಾವು ಕಡಿದೊಡನೆಯೇ ಇದನ್ನು ಉಪಯೋಗಮಾಡುವುದು ಸರ್ವೋತ್ತಮವೆಂದು ಕಂಡುಬಂದಿದೆ. ೨ ಮಾಸೆಯಿಂದ ೧ ತೊಲೆಯವರೆಗೆ ಇದರ ಎಲೆಗಳನ್ನು ತೆಗೆದುಕೊಂಡು ಅದರಲ್ಲಿ ೮ ಅಥವಾ ೧೦ ಮೆಣಸಿನಕಾಳನ್ನು ಹಾಕಿನೀರಿನಲ್ಲಿ ಸಣ್ಣಾಗಿ ಕಲ್ಲಿನಮೇಲೆ ಅರೆದುಕೊಂಡು ಅರಿವೆಯಲ್ಲಿ ಸೋಸಿ ಇದರ ರಸವನ್ನು ಕುಡಿಸಿ ೧೫ ನಿಮಿಷಗಳಮೇಲೆ ೫ ತೊಲೆ ತುಪ್ಪವನ್ನು ಕುಡಿಯಲಿಕ್ಕೆ ಕೊಡಬೇಕು. ಆಮೇಲೆ ೧೫ ನಿಮಿಷ ಬಿಟ್ಟು ಮತ್ತೊಮ್ಮೆ ಔಷಧಿಯನ್ನು ಕುಡಿಸಿ ಮತ್ತೆ ೧೫ ನಿಮಿಷದನಂತರ ತುಪ್ಪವನ್ನು ಕುಡಿಸಬೇಕು. ಈ ಮಧ್ಯದಲ್ಲಿ ಹಾವು ಕಡಿದವನಿಗೆ ಬೇವಿನ ಸೊಪ್ಪನ್ನು ತಿನ್ನಲು ಕೊಟ್ಟು ಬಾಯಿಗೆ ಸವಿಹತ್ತುವುದೆಂದು ಆತನಿಂದ ತಿಳಿದು ಬಂದರೆ ಔಷಧಿ ಕೊಡುವುದನ್ನು ಬಿಟ್ಟುಬಿಡಬೇಕು. ಬೇವಿನ ತಪ್ಪಲವು ವಿಷವಾಗದಿದರೆ ಮೇಲೆ ಬರೆದ ಔಷಧಿಯನ್ನೂ ಆದರಮೇಲೆ ತುಪ್ಪವನ್ನೂ ೧೫ ನಿಮಿಷಕ್ಕೊಮ್ಮೆ ಕೊಡುತ್ತಲೇ ಬರಬೇಕು.

ಚೇಳಿನ ವಿಷಪರಿಹಾರಕ:— ಇವರಲಿಗಳನ್ನು ನೀರಿನಲ್ಲಿ ಗಂಧ ದಂತೆ ಸಣ್ಣಾಗಿ ಅರೆದು ಕಡಿದ ಸ್ಥಳಕ್ಕೆ ಸರಿಯಾಗಿ ಮೆತ್ತಿ ೧೦ ನಿಮಿಷ ಗಳನಂತರ ಅದನ್ನು ತೊಳೆದು ಮತ್ತೆ ಹೊಸಲೇಪಮಾಡಬೇಕು. ಇದ ರಿಂದ ಬೇಗನೆ ವಿಷಇಳಿಯುವುದು.

---

ಉಜ್ಜಯಿನಿ ಸದ್ಧರ್ಮ ಸಿಂಹಾಸನಾಧೀಶರಾದ
ಶ್ರೀ ಜಗದ್ಗುರು ಸಿದ್ಧೇಶ್ವರ ರಾಜದೇಶಿಕೇಂದ್ರ ಶಿವಾಚಾರ್ಯ
ಮಹಾಸ್ವಾಮಿಗಳವರ ಅಧ್ಯಕ್ಷತೆಯಲ್ಲಿ
ನಡೆದ

# ೨ ನೇಯ ಬಳ್ಳಾರಿ ಜಿಲ್ಲಾ ಪಟ್ಟಚರಾಧಿಕಾರಿ ಸಮ್ಮೇಲನವೂ ಶ್ರೀ ಮರುಳಸಿದ್ಧೇಶ್ವರ ರಥೋತ್ಸ ವವೂ ಅಖಿಲ ಭಾರತೀಯ ವೀರಶೈವ ಗುರುವರ್ಗ ಮಹಾಸಮ್ಮೇಲನ ಸ್ಥಾಪನೆಯೂ

## ಉಜ್ಜಯಿನಿ

---

ತಾ. ೨೨—೪—೧೯೪೦ ರಲ್ಲಿ ಹೊರಡಿಸಿದ ಪ್ರಕಟನೆಯಂತೆ ಈಮೇಲಿನ ಸಮ್ಮೇಲನವು ತಾ ೧೩—೫—೪೦ ಸೋಮವಾರ ಮತ್ತು ತಾ ೧೪—೫—೪೦ ಮಂಗಳವಾರವೂ ಬಹಳ ಯಶಸ್ವಿಯಾಗಿ ನಡೆಯಿತು.

ತಾ ೧೨—೫—೪೦ ನೇಯ ರವಿವಾರ ಶ್ರೀ ಮರುಳಾರಾಧ್ಯರ ಜಯಂತಿ ಮಹೋತ್ಸವವೂ, ರಥೋತ್ಸವವೂ, ನಡೆದವು. ಈ ಉ ದ್ದೇಶದಿಂದಲೂ ಸಮ್ಮೇಲನದ ಉದ್ದೇಶದಿಂದಲೂ ಈ ಸಾರೆ ಯಾತ್ರಿ ಕರೂ ಹೆಚ್ಚಾಗಿ ಸೇರಿದ್ದರು.

ಸಮ್ಮೇಲನವನ್ನು ಯಶಸ್ವಿಯಾಗಿ ನಡೆಸಲೋಸುಗ ತಾ ೧೨- ೫—೪೦ ನೇ ಭಾನುವಾರ ಬೆಳಿಗ್ಗೆ ೧೦ ಘಂಟೆಗೆ ವಿಷಯನಿಯಾಮಕ ಕಮೀಟಿಯು ಸೇರಿ ೧೨ ಘಂಟೆಗೆ ಕೊನೆಗೊಂಡಿತು. ಈ ಹಿಂದೆ ನಡೆ

ದ ಸಮ್ಮೇಲನದ ಕಾರ್ಯನಿರ್ವಾಹಕ ಕಮೀಟೆಯ ಕೆಲ ಸದಸ್ಯರೂ ಪರಜಿಲ್ಲೆಗಳ ವಿದ್ವಾಂಸರೂ ಪಟ್ಟಚರಾಧಿಕಾರಿಗಳೂ ಇತರ ದೊಡ್ಡ ಮನುಷ್ಯರೂ ಈ ವರ್ಕಿಂಗ್ ಕಮೀಟಿಗೆ ಸೇರಿದ್ದರು. ಬಂದ ಅತಿಥಿಗಳಿಗೆ ಭೋಜನದ ವ್ಯವಸ್ಥೆಯು ಚನ್ನಾಗಿದ್ದಿತು. ೩ ೪ ದೊಡ್ಡ ಸಮಾರಾಧನೆಗಳೂ ನಡೆದವು. ಯಾತ್ರೆಯು ಸುಮಾರು ೧೦ ಸಾವಿರ ಜನರಿಂದ ಕಿಕ್ಕಿರಿದಿದ್ದಿತು. ರಥೋತ್ಸವಕ್ಕಾಗಿ ಗವರ್ನಮೆಂಟಿನ ಮೇಲಧಿಕಾರಿಗಳು ಆಗಮಿಸಿ ಸುವ್ಯವಸ್ಥೆಯನ್ನಿಟ್ಟಿದ್ದರು. ಒಟ್ಟಿನಮೇಲೆ ಈ ವರ್ಷದ ಯಾತ್ರೆಯು ಅವರ್ಣನೀಯವಾಗಿದ್ದಿತು.

ಸೋಮವಾರ ಬೆಳಿಗ್ಗೆ ೬ ಘಂಟೆಗೆ ಸಮ್ಮೇಲನದ ಕಾರ್ಯಗಳು ಪ್ರಾರಂಭವಾದವು. ಅಧ್ಯಕ್ಷರಾದ ಶ್ರೀ ೧೦೮ ಜಗದ್ಗುರುಗಳವರು ಸಿಂಹಾಸನದಲ್ಲಿ ಮಂಡಿಸಿದೊಡನೆಯೆ ವರಕವಿ ಶ್ರೀ ವಾಗೀಶ ಶಿವಾಚಾರ್ಯ ರಚಿತವಾದ ಸ್ವಾಗತ ಪದ್ಯವು ಸಂಗೀತ ಸಾಹಿತ್ಯದೊಡನೆ ಸಾಗಿ ಜಗದಾಚಾರ್ಯರ ಪ್ರಾರ್ಥನಾ ಪದ್ಯವೂ ನಡೆಯಿತು. ಸ್ವಾಗತಸಂಗಾಧ್ಯಕ್ಷರಾದ ವೇ ಷ ಬ್ರ ಹಿರೇಹಾಳುಮಠದ ಶ್ರೀ ವಿರೂಪಾಕ್ಷಸ್ವಾಮಿಗಳು ಮನೋಹರವಾದ ಸ್ವಾಗತಪರ ಭಾಷಣವನ್ನು ಮಾಡಿದರು. ಸೆಕ್ರೆಟರಿಯವರಾದ ಕುಡುತಿನಿ ನಯನಸ್ವಾಮಿ ಮಠಾಧೀಶರಾದ ಷ ಬ್ರ ಶ್ರೀ ನಯನಸ್ವಾಮಿಗಳವರು ಸಮ್ಮೇಲನದ ನಿರ್ವಿಘ್ನತೆಗಾಗಿ ಬಂದ ಸಂದೇಶಗಳನ್ನು ಓದಿದರು. ಈ ಸಮ್ಮೇಲನದ ಕಾರ್ಯದರ್ಶಿಗಳೂ ಸಂಚಾಲಕರೂ ಆದ ಮು॥ನು॥ ಶ್ರೀ ವಾಗೀಶಶಿವಾಚಾರ್ಯರು ಹೋದವರ್ಷದ ಸಮ್ಮೇಲನದ ರಿಪೋರ್ಟಿನ ಕೆಲ ಮುಖ್ಯ ಭಾಗಗಳನ್ನು ಓದಿಹೇಳಿದರು. ಆಮೇಲೆ ಸದರಿ ಶಿವಾಚಾರ್ಯರೇ ಹೋದಸಾರೆ ಪಾಸಾದ ಠರಾವು ಕೆಲವನ್ನು ಆಮಲಿನಲ್ಲಿ ತರುವ ಉದ್ದೇಶದಿಂದ ವ್ಯಾಖ್ಯಾನವನ್ನು ಮಾಡಿ ಪರಿಣಾಮವನ್ನುಂಟುಮಾಡಿದರು. ಬಳಿಕ ಆಸ್ಥಾನ ವಿದ್ವಾನ್ ಪಂಡಿತರತ್ನ ॥ವೇ॥ ಉಮಚಗಿ ಮಠದ ಶ್ರೀ ಶಂಕರಶಾಸ್ತ್ರಿಗಳವರು "ಗುರುಕರ್ತವ್ಯ" ಎಂಬ ವಿಷಯದಮೇಲೆ ವ್ಯಾಖ್ಯಾನವನ್ನು ಮಾಡಿದರು. ಪಂ. ಕೊಂಗವಾಡ ವೀರಭದ್ರಶಾಸ್ತ್ರಿಗಳೂ ಉಜ್ಜಯಿನಿ ಪಂ ಗುರುಸಿದ್ಧಶಾಸ್ತ್ರಿಗಳೂ ವ್ಯಾಖ್ಯಾನಮಾಡಿದರು. ಸಾಯಂಕಾಲಕ್ಕೆ ೭ ಘಂಟೆಗೆ ಮತ್ತೆ ಕೂಡುವುದಾಗಿ ಸಭೆಯ ಸಂಚಾಲಕರು ಸೂಚಿಸಿದನಂತರ ಅಷ್ಟಕ್ಕೆ ಸಮ್ಮೇಲದ ಕಾರ್ಯಗಳು ನಿಲ್ಲಿಸಲ್ಪ

ಡುವವೊಡಲು ಮಹಾ ಸಂಸ್ಥಾನದ ಪತಿಯಿಂದ ದುಃಖಪ್ರದರ್ಶನರೂಪವಾದ ಈ ಠರಾವು ಸಭೆಯಲ್ಲಿ ಪಾಸಾಯಿತು:—ಶ್ರೀ ಮದ್ಭುವರಾಜ ಪ್ರಭುಗಳು ಮತ್ತು ಹರಪನಹಳ್ಳಿ ಗುರುಪಾದ್ದೇವರಮಠದ ಪಟ್ಟದಸ್ವಾಮಿಗಳು ಸಂಗೀತ ವಿದ್ವಾನ್ ಮರಿಕೊಟ್ಟೂರಯ್ಯನವರು ಬಳ್ಳಾರಿ ಮಣ್ಣೂರು ಸ್ವಾಮಿಮಠದವರ ಅಗಲುವಿಕೆಯಿಂದಾಗಿರುವ ಅನುತಾಪವನ್ನು ತೋರ್ಪಡಿಸಿದೆ.

ಅದೇ ದಿನ ಸಂಜೆ ೭ ಘಂಟೆಗೆ ಸರಿಯಾಗಿ ಮತ್ತೆ ಶ್ರೀ ಜಗದ್ಗುರುಗಳವರ ಅಧ್ಯಕ್ಷತೆಯಲ್ಲಿ ಸಮ್ಮೇಲನದ ಕಾರ್ಯವು ಪ್ರಾರಂಭವಾಯಿತು. ಆರಂಭದಲ್ಲಿ ಆಚಾರ್ಯಪ್ರಾರ್ಥನೆಯೂ ಸಂಗೀತ ವಿದ್ವಾಂಸರ ಸಂಗೀತ ಕಛೇರಿಯೂ ನಡೆದಬಳಿಕ ಶ್ರೀ ವಾಗೀಶ ಶಿವಾಚಾರ್ಯರು ಸಮ್ಮೇಲನದ ವಿಚಾರವಾಗಿ ವ್ಯಾಖ್ಯಾನವನ್ನು ಮಾಡಿ ಸಭಿಕರೆಲ್ಲರಿಗೂ ಆನಂದವನ್ನುಂಟುಮಾಡಿದರು. ಸಮ್ಮೇಲನದ ಸೆಕ್ರೆಟರಿಯವರು ದೂರದಿಂದ ಬಂದಿರುವ ಸಂದೇಶ-ಮತ್ತು ಲೇಖನಗಳನ್ನು ಓದಿದರು. ಆಮೇಲೆ ಕೆಲವರ ವ್ಯಾಖ್ಯಾನಗಳೂ ನಡೆದವು. ಈಹಿಂದೆ ಬಳ್ಳಾರಿಯಲ್ಲಿ ನಡೆದ ಸಮ್ಮೇಲನದಲ್ಲಿ ಪಾಸಾದ ಠರಾವುಗಳನ್ನು ಜಾರಿಗೆ ತರುವ ವಿಷಯವಾಗಿ ಚರ್ಚೆಯಾಗಿ ಸಿದ್ಧಾಂತಕ್ಕೆ ಬಂದಿತು. ಕೊನೆಗೆ ಶ್ರೀ ಜಗದ್ಗುರುಗಳವರು "ಗುರುಯಾತ್ರಾ" ಎಂಬ ವಿಷಯವನ್ನವಲಂಬಿಸಿ ಮಹತ್ತರವಾದ ಮತ್ತು ಸರ್ವರಿಗೂ ಸುಬೋಧವಾದ ವ್ಯಾಖ್ಯಾನವನ್ನು ಅಪ್ಪಣೆಕೊಡಿಸಿದರು. ಸರ್ವರೂ ಚಿತ್ರಗಳಲ್ಲಿ ಬರೆದ ಬೊಂಬೆಗಳಂತಿದ್ದರು. ರಾತ್ರಿ ೧೦ ಘಂಟೆಗೆ ಸರಿಯಾಗಿ ಸಭೆಯು ವಿಸರ್ಜಿತವಾಯಿತು.

ಮರುದಿನ ೧೪—೫—೪೦ ಮಂಗಳವಾರ ಬೆಳಿಗ್ಗೆ ಮತ್ತೆ ವಿಷಯ ನಿಯಾಮಕ ಕಮಿಟಿಯು ಕೂಡಿ ಮಧ್ಯಾನ್ಹ ೩ ಘಂಟೆಯಿಂದ ಸಮ್ಮೇಲನ ಕಾರ್ಯಗಳು ಪ್ರಾರಂಭವಾದವು. ಆರಂಭದಲ್ಲಿ ಆಚಾರ್ಯ ಪ್ರಾರ್ಥನೆಯೊದನಂತರ ಸಮ್ಮೇಲನದ ಸೆಕ್ರೆಟರಿಯವರು ದಾಸಪ್ಪರದ ವೇ| ಶಾಂತವೀರ ಒಡೆಯರವರು ಓ| ಕಲಿಕ್ಕರವರು ಕಳುಹಿದ ಲೇಖವನ್ನು ವಿಶದವಾಗಿ ಓದಿದರು. ಆಬಳಿಕ ಕೆಳಗೆ ಕಾಣಿಸಿದ ಈ ಠರಾವುಗಳನ್ನು ಜಾರಿಯಲ್ಲಿತರಬೇಕೆಂದು ಸರ್ವಾನುಮತಿಯಿಂದ ತೀರ್ಮಾನವಾಯಿತು.

(೧) ಬಳ್ಳಾರಿ ಜಿಲ್ಲಾ ಪಟ್ಟಚರಾಧಿಕಾರಿ ಸಮ್ಮೇಲನದ ಕಾರ್ಯನಿರ್ವಾಹಕ ಕಮಿಟಿಯ ಸದಸ್ಯರು ಸದರಿ ಸಮ್ಮೇಲನದ ಪ್ರತಿ ಕಾರ್ಯದಲ್ಲಿಯೂ ಭಾಗವಹಿಸಬೇಕು. ಬರಲಾಗದಿದ್ದರೆ ಕಾರಣ ವನ್ನು ತೋರಿಸಿ ಟಪಾಲು ಬರೆಯಬೇಕು. ಈರೀತಿಯಿಂದ ನಡೆಯದ ಸದಸ್ಯರು ತಮ್ಮ ಸದಸ್ಯತ್ವವನ್ನು ಕಳೆದುಕೊಳ್ಳುವರು. ಹೀಗೆ ಸದಸ್ಯ ತ್ವವನ್ನು ಕಳದುಕೊಂಡವರು ಪುನಃ ಸಮ್ಮೇಲಿನಾಧ್ಯಕ್ಷರ ಅಪ್ಪಣೆಯ ನ್ನು ಹೊಂದಿ ಸಮ್ಮೇಲನದಲ್ಲಿ ಸೇರಬಹುದು.

ಸೂಚಕರು— ಹಿ। ಮ। ಶ್ರೀ ವಿರೂಪಾಕ್ಷಸ್ವಾಮಿಗಳವರು

ಅನುಮೋದಕರು— ಶ್ರೀ ನಯನಸ್ವಾಮಿಗಳವರು

ಉ. ಸೂ— ಕೊಟ್ಟೂರು ಭುಜಂಗದೇವರು

ಉ. ಸೂ— ಡೋ. ಶ್ರೀ ಚರಮೂರ್ತಿಸ್ವಾಮಿಗಳು

(೨) ಮದ್ರಾಸ ಸರ್ಕಾರದ ಎಂಡೋಮೆಂಟ್ ಆಕ್ಟನ್ನು ತಡೆ ದು ನಮ್ಮ ವೀರಶೈವ ಮಠಗಳ ಹಕ್ಕು ಬಾಧ್ಯತೆಗಳನ್ನು ಕಾಪಾಡುವುದ ಕ್ಕಾಗಿ ಬಳ್ಳಾರಿ ಜಿಲ್ಲೆಯವರಲ್ಲದೆ ಪರಪ್ರಾಂತದ ಪ್ರಮುಖರನ್ನೂ ಸದ ಸ್ಯರನ್ನಾಗಿ ಸೇರಿಸಿಕೊಳ್ಳಬೇಕು.

ಸೂಚಕರು— ದಾವಣಗೆರೆ ಗ. ಮ. ಅನ್ನದಾನಯ್ಯನವರು

ಸಂಪಾದಕ ಸನ್ಮಾರ್ಗದರ್ಶಕ

ಅನುಮೋದಕರು— ಸಾ॥ ಹೊಳಗುಂದಿ ಬಸವನಗೌಡರು

(೩) ಅಖಿಲ ಭಾರತೀಯ ವೀರಶೈವ ವಿದ್ವತ್ಸಂಗವನ್ನು ಸ್ಥಾಪಿಸಬೇಕೆಂದು ಹಿಂದಿನ ಸಮ್ಮೇಲನದಲ್ಲಿ ಪಾಸಾದ ಠರಾವನ್ನು ಅಮಲಿನಲ್ಲಿ ತರಬೇಕು. ಇದರ ಹೆಡ್ ಆಫೀಸನ್ನು ಉಜ್ಜಯಿನೀ ಸದ್ಧರ್ಮಪೀಠದ ಮಠದಲ್ಲಿಯೇ ಸ್ಥಾಪಿಸಬೇಕು.

ಸೂಚಕರು— ಶ್ರೀ ವಾಗೀಶಶಿವಾಚಾರ್ಯರು

ಅನುಮೋದಕರು—ಸತ್ತೀಗೇರಿ ಶ್ರೀ ಸಿದ್ಧಿನ[illegible]ಳು

(೪) ಹಿಂದಿನ ಸಮ್ಮೇಲನದಲ್ಲಿ ಪಾಸಾದ [illegible] ಲನದಲ್ಲಿ ಪಾಸಾದ ರಿಪೋರ್ಟಿನಲ್ಲಿ ಪ್ರಕಟಿಸಿ [illegible] ಒಂದು ಉಪದೇಶವರ್ಗವನ್ನೇರ್ಪಡಿಸಿ ಪ್ರತಿ [illegible]

ವೇ । ಷ। ಬ್ರ। ಸೂಡಿ ಪಟ್ಟದಸ್ವಾಮಿಗಳವರು
ವೇ। ಗುರುಸಿದ್ಧಯ್ಯನವರು ನರೇಂದ್ರಮಠ ಹುಬ್ಬಳ್ಳಿ.
ವೇ॥ ಹಿರೇಮಠದ ಸೋಮಯ್ಯನವರು ಹುಬ್ಬಳ್ಳಿ.
ಮ। ರಾ। ಬೆಳ್ಳುಳ್ಳಿ ತೀರ್ಥಪ್ಪನವರು ಹುಬ್ಬಳ್ಳಿ.
,, ಮಕಾಸಿ ರಾಯಪ್ಪನವರು ಧಾರವಾಡ.
ರಾ॥ ಬ॥ ಬಿ. ಎಲ್. ಪಾಟೀಲರು ಧಾರವಾಡ.
ವೇ॥ ಹೊನ್ನಾಪುರಮಠದ ವಕೀಲರು

ಬೆಳಗಾಂ ಜಿಲ್ಲಾ—

ಸತ್ತಿಗೇರಿ ಶ್ರೀ ।ಷ ।ಬ್ರ। ಪಟ್ಟದಸ್ವಾಮಿಗಳು
ಮ। ರಾ । ಕರಿಂಡಿ ಚೆನ್ನಪ್ಪನವರು

ಸೊಲ್ಲಾಪುರ—

ಮ॥ ರಾ॥ಜು। ಜೇ। ವಕೀಲರು
, ಅಬ್ದುಲ್‌ಪೂರಕರ್ ನಾಗಪ್ಪನವರು
,, ದುಮ್ಮಾ ವಕೀಲರು

ನೈಜಾಂ ಪ್ರಾಂತ—

ಚಿ। ಮ। ಪಂ॥ ವೀರಭದ್ರ ಶಾಸ್ತ್ರಿಗಳು ಸಿಕಿಂದ್ರಾಬಾದ್
ಮ। ರಾ। ಗಂಗಾವತಿ ಗುಂಜಳ್ಳಿ ಬಸಪ್ಪನವರು
,, ಸಿದ್ದಾಪುರ ಸಿದ್ದಪ್ಪನವರು

ಮೈಸೂರು ಪ್ರಾಂತ—

ವೇ॥ ರುದ್ರಾರಾಧ್ಯರು ಬೆಂಗಳೂರು
ಎಚ್. ಕೆ. ವೀರಬಸಯ್ಯನವರು ರಿ। ಜಜ್ ಬೆಂಗಳೂರು
ಶ್ರೀಮಾನ್ ಪಿ. ಮಹಾದೇವಯ್ಯನವರು ರಿ।ಜಜ್
ವೇ॥ ಎನ್. ರುದ್ರಯ್ಯನವರು ಬೆಂಗಳೂರು
ಮ। ರಾ। ಷರಾಪ್ ಬಿ ಬಸಪ್ಪನವರು
ಮ। ರಾ। ಅತ್ತೀಬೆಲೆ ಸಾ॥ ಶರಭಣ್ಣನವರು ,,
ವೇ। ಪಂಡಿತವರ್ಯ ಕಾಶೀನಾಥಶಾಸ್ತ್ರಿಗಳವರು ಮೈಸೂರು
ಮ। ರಾ। ಡಾ॥ ಚಿ। ಎಸ್। ಸಿದ್ದಪ್ಪನವರು
ವೇ॥ ಗ. ಮ. ಅನ್ನದಾನಯ್ಯನವರು ದಾವಣಗೆರೆ

ವೇ। ಚಿ। ಮ। ಮಹಾದೇವಯ್ಯನವರು ದಾವಣಗೆರೆ
ವೇ। ಕಿ। ಮ। ರುದ್ರಯ್ಯನವರು ,,
ವೇ। ಹಿ। ಮ। ಷಡಕ್ಷರಯ್ಯನವರು ,,
ಮ। ರಾ॥ ಮಾ, ಬಸಪ್ಪಶೆಟ್ಟಿನವರು ,,
,, ಜಂಬಣ್ಣನವರು ,,
,, ಮಾ। ಷಣ್ಮುಖಪ್ಪನವರು ,,
ತ್ಯಾ॥ ಸಾ॥ ಬಸೆಟ್ಟಪ್ಪನವರು ,,
ಡಿ, ಹೆಚ್. ಚಂದ್ರಶೇಖರಯ್ಯನವರು ಬಿಎ. ಬಿಎಲ್.
ಜಗಳೂರು ಸಾ। ಮಹಾಲಿಂಗಪ್ಪನವರು
,, ,, ರೇವಣ್ಣನವರು
ವೇ। ಎಂ. ವ್ಹಿ. ಮುರುಳಸಿದ್ದಯ್ಯನವರು ಶಿವಮೊಗ್ಗಾ
ಬೀರೂರು ವೇ॥ಪತ್ರಿ ಚನವೀರಪ್ಪನವರು
ಹರಿಹರ ಹೊಸಮಠದ ಚಂದ್ರಶೇಖರಯ್ಯನವರು
,, ಶಂಭುಲಿಂಗಯ್ಯನವರು
ಮ।ರಾ।ಅರಸೀಕೆರೆ ಚಿನ್ನವೀರಪ್ಪನವರು ಬ್ಯಾಡ್ಗಿ

**ಕರ್ನೂಲ್ ಜಿಲ್ಲಾ—**

ಮ॥ರಾ॥ ಸೋಮಶೆಟ್ರ ಬಸಪ್ಪ ನಂದ್ಯಾಲ್
ನಂದ್ಯಾಲ ನಾಗೂರು ಮಲ್ಲಿಕಪ್ಪಶೆಟ್ರು
,,ಉಪ್ಪು ನಾಗಸಂಗಪ್ಪನವರು
ಶಿರುವೆಳ್ಳಾ ತಾಲೂಕು ಪೋಗಾಕು ಮಲ್ಲಪ್ಪನವರು
ಅನಂತಪುರಂ ಭೋಗಸೆಟ್ಟಿ ಸಂಗಪ್ಪ ಮಲ್ಲಪ್ಪನವರು

ಇವನ್ನೆಲ್ಲಾ ಕಾರ್ಯದರ್ಶಿಗಳು ಓದಿದ ಬಳಿಕ ಕೊಟ್ಟೂರು ಕೆಂಭಾವಿಮಠದ ವೇ। ಚೆನ್ನಬಸವಶಾಸ್ತ್ರಿಗಳವರು ಗಾನವಾದನ ವಿದ್ವಾನ್ ಸಂಗೀತರತ್ನ ಇವರ ಸಂಗೀತ ಕಛೇರಿಯು ನಡೆಯಿತು. ಇವರು ಜಗದ್ಗುರು ಶ್ರೀ ಸಿದ್ಧಲಿಂಗ ಶಿವಾಚಾರ್ಯಮಹಾಸ್ವಾಮಿಗಳವರಮೇಲೆ ರಚಿಸಿ ತಂದ ಪದ್ಯವನ್ನು ಹಾಡಿ ಆನಂದಪಡಿಸಿದರು. ಸನ್ನಿಧಿಯವರು ತಂತ್ರೀವಾದನವಿಶಾರದ ಎಂಬ ಬಿರುದನ್ನು ಬಂಗಾರದ ಪದಕದೊಡನೆ ಸದರಿಯವರಿಗೆ ಆಶೀರ್ವದಿಸಿದರು.

ಆಮೇಲೆ ಶ್ರೀ ವಾಗೀಶ ಶಿವಾಚಾರ್ಯರು ವೀರಶೈವಮತ ಶಿವಭಕ್ತಿ ಇವುಗಳಮೇಲೆ ವ್ಯಾಖ್ಯಾನವನ್ನು ಮಾಡಿದರು. ಬಳಿಕ ಕೊಟ್ಟೂರು ವೇ॥ ಶಿವಪ್ರಸಾದ ಶಾಸ್ತ್ರಿಗಳು ಆಚಾರ ಎಂಬ ವಿಷಯದ ಮೇಲೆಯೂ ವೇ॥ಮುಸಗಿ ಬೃ ಮು॥ಷಡಕ್ಷರಶಿವಾಚಾರ್ಯರೂ ಜ.ಗು ಸಿದ್ಧಲಿಂಗಯೋಗಿಯ ಪುಣ್ಯತಿಥಿ ಎಂಬ ವಿಷಯದಮೇಲೆಯೂ ಹರಪನಹಳ್ಳಿ ಮಂಗಾಪುರಮಠದ ವೇ॥ ಸ್ಕೂಲ್‌ಮಾಷ್ಟರ್ ಚೆನ್ನಬಸಯ್ಯನವರು ವೀರಶೈವರ ಐಕ್ಯತೆ ಎಂಬ ವಿಷಯದಮೇಲೆಯೂ ವ್ಯಾಖ್ಯಾನಗಳನ್ನಿತ್ತರು- ಕೊನೆಗೆ ಶ್ರೀ ಜಗದ್ಗುರುಗಳವರು ಸದುಪದೇಶವನ್ನಿತ್ತಮೇಲೆ ಸ್ವಾಗತಾಧ್ಯಕ್ಷರು ಸರ್ವರ ಆಭಾರವನ್ನೂ ಮನ್ನಿಸಿದನಂತರ ಸಭೆಯು ಸಮಾಪ್ತವಾಯಿತು.

ಮರುದಿನ ತಾ. ೧೫—೫—೪೦ ಬುಧವಾರ ಸಾಯಂಕಾಲ ೬ ಘಂ.ಗೆ ಮೊದಲೇ ಪ್ರಸಿದ್ಧಿಸಿದಂತೆ ವಿದ್ಯಾಫಂಡಿನ ವಿಚಾರಕ್ಕಾಗಿ ಶ್ರೀ ಜಗದ್ಗುರುಗಳವರ ಅಧ್ಯಕ್ಷತೆಯಲ್ಲಿ ಮತ್ತೆ ಸಭೆ ಸೇರಿ ಈ ಕೆಳಗಿನಂತೆ ತೀರ್ಮಾನವಾಯಿತು.

೧. ಗತಿಸಿದ ಶ್ರೀ ಸಿದ್ಧಲಿಂಗ ಶಿವಾಚಾರ್ಯ ಮಹಾಸ್ವಾಮಿಗಳವರ ರೂಲ್ ಬುಕ್ಕಿನಂತೆ ಶ್ರೀ ಜ್ಞಾನಗುರು ಮಹಾವಿದ್ಯಾಲಯ ಸ್ಥಾಪನೆಯಾಗಬೇಕು.

ಸರ್ವಾನುಮತಿಯಿಂದ ಪಾಸಾಯಿತು.

ಇದರ ಅಂಗವಾಗಿ ಅಖಿಲ ಭಾರತೀಯ ವೀರಶೈವ ವಿದ್ವತ್ಸಂಗವನ್ನೇರ್ಪಡಿಸುವುದಲ್ಲದೆ ಲೈಬ್ರರಿಯನ್ನೂ ಸ್ಥಾಪಿಸಿಕೊಳ್ಳಬೇಕು. ವಿದ್ಯಾಲಯವು ಪ್ರಭಲಕ್ಕೆ ಬರುವಮೊದಲು ವಿದ್ವತ್ಸಂಗ ಮತ್ತು ಲೈಬ್ರರಿಗಳು ಮಠದಲ್ಲಿ ಅವಶ್ಯವಾಗಿ ನಡೆಯಲೇಬೇಕು.

ಸದ್ಯಃ ವಿದ್ಯಾಫಂಡಿನ ಹಣದ ಬಡ್ಡಿಯ ಅಂಶದಲ್ಲಿ ಲೈಬ್ರರಿಯ ಗ್ರಂಥಸಂಗ್ರಹ ಮತ್ತು ವಿದ್ವತ್ಸಂಗದ ಕಾರ್ಯಗಳನ್ನು ನಡೆಯಿಸಬೇಕು. ವಿದ್ವತ್ಸಂಗಕ್ಕೆ ಸದಸ್ಯರನ್ನು ಸೇರಿಸುವ ಉದ್ದೇಶದಿಂದ ಅರ್ಜಿಫಾರಂ ಪ್ರಿಂಟುಮಾಡಿಸಿ ಅದರಲ್ಲಿ ಭರ್ತಿಯಾಗಿ ಬಂದ ಅರ್ಜಿಗಳಿಂದ ಸಂಘದ ಸದಸ್ಯರನ್ನು ಖಾಯಂಮಾಡಿಕೊಳ್ಳಬೇಕು. ಕಾರ್ಯನಿರ್ವಾಹಕಕ್ಕಾಗಿ ಸೆಕ್ರೆಟರಿಯೊಬ್ಬರನ್ನು ನೇಮಿಸಿಕೊಳ್ಳತಕ್ಕದ್ದು. ಸದ್ಯಃ ಸಣ್ಣದಾಗಿ

ಮುಂದೆ ನೋಡಿರಿ

# ಧರ್ಮರಾಜ್ಯ

ಸಂಪುಟ ೨ | ವಿಕ್ರಮ ಸಂವತ್ಸರ ಜ್ಯೇಷ್ಠ | ಸಂಚಿಕೆ ೩

## ಉಜ್ಜಯಿನಿಯಲ್ಲಿ ನಡೆದ
## ಪಟ್ಟಚರಾಧಿಕಾರಿ ಸಮ್ಮೇಳನ

೧೭ ನೆಯ ಪುಟದಿಂದ ಮುಂದುವರಿದಿದ್ದು

ಧಾರ್ಮಿಕ ವಶಾಸ್ತ್ರದ ಶಿಕ್ಷಣವನ್ನು ಶ್ರೀ ಮಠದಲ್ಲಿಯೇ ಪ್ರಾರಂಭಿಸಬೇಕು

ವಿದ್ಯಾಸಂಬಂಧಿಸಿದ ಜವಾಬ್ದಾರಿ ಮುಂತಾದ ವಿಚಾರಕ್ಕಾಗಿ ಈ ಕೆಳಗಿನ ಜನರನ್ನು ಟ್ರಸ್ಟರನ್ನಾಗಿ ನೇಮಿಸಿಕೊಂಡಿದೆ.

೧ ಕೊಟ್ಟೂರು ವಿ॥ ಮ। ಜಾಗಟಗೇರಿ ಸಣ್ಣವೀರಪ್ಪಯ್ಯನವರು ಮತ್ತು ಚಿನ್ನವೀರಪ್ಪಯ್ಯನವರು, ೨ ಉಜ್ಜಯಿನೀ ಶಿವಸಾಲಿ ಗುರುಬಸಪ್ಪನವರು, ೩ ಬನ್ನೀಕಲ್ಲು ಕುಪ್ಪೇರಪ್ಪನವರು, ೪ ಹೊಳಗುಂದಿ ಸಾ॥ ಬಸವನಗೌಡ್ರು, ೫ ಬಳ್ಳಾರಿ ವೈ॥ ಮಹಾಬಲೇಶ್ವರಪ್ಪನವರು, ೬ ಉಚ್ಚಂಗಿದುರ್ಗದ ಸಾ। ಮರುಳಸಿದ್ಧನಗೌಡ್ರು, ೭ ಜಗಲೂರು ಸಾ॥ ಮಹಾಲಿಂಗಪ್ಪನವರು, ೮ ಜಗಲೂರು ಸಾ। ರೇವಣ್ಣನವರು, ೯ ಹರಪನಹಳ್ಳಿ ಗೊಂಗಡಿ ಮಹಾದೇವಪ್ಪನವರು, ಕೊಟ್ರಪ್ಪನವರು, ೧೦ ಹೊಳಗುಂದಿ ಪಾಟೀಲ್ ಗುರುಬಸನಗೌಡರು

ವಿದ್ವತ್ಸಂಘ, ಮತ್ತು ಲೈಬ್ರರಿ, ಮತ್ತು ವಿದ್ಯಾಲಯ ಇವುಗಳ ಕಾರ್ಯಗಳನ್ನು ತೂಗಿಸುವುದಕ್ಕಾಗಿ ಒಬ್ಬ ಸೆಕ್ರೆಟರಿ ಒಬ್ಬ ಜಾಯಿಂಟ್

ಸೆಕ್ರೆಟರಿಗಳನ್ನು ನೇಮಿಸಿಕೊಳ್ಳತಕ್ಕದ್ದು. ಸದಃ ೧ ವರ್ಷದಮಟ್ಟಿಗೆ ಮು॥ಮ। ಶ್ರೀ ವಾಗೀಶ ಶಿವಾಚಾರ್ಯರು ಸೆಕ್ರೆಟರಿಗಳಾಗಿಯೂ ಉಜ್ಜಯಿನೀ ಮ॥ರಾ॥ ಶಿವಸಾಲಿ ಗುರು.ಬಸಪ್ಪನವರು ಜಾಯಿಂಟ್ ಸೆಕ್ರೆಟರಿಗಳಾಗಿಯೂ ಚುನಾಯಿಸಲ್ಪಟ್ಟಿದ್ದಾರೆ.

ಸಮ್ಮೇಲನದ ಸೆಕ್ರೆಟರಿಗಳು—ನಯನಸ್ವಾಮಿಗಳು ಕುಡುಶಸ

ಸ್ವಾ ಅಧ್ಯಕ್ಷರು— ಹಿರೇ[illegible]ಮಠದ ಶ್ರೀ ವಿರೂಪಾಕ್ಷಸ್ವಾಮಿಗಳು

———

# ಕೊಟ್ಟೂರಲ್ಲಿ
# ವಿವಾಹಮಹೋತ್ಸವವೂ
# ಸ್ತುತ್ಯ ದಾನವೂ

ಕೊಟ್ಟೂರಲ್ಲಿ ತಾ ೧೭—೫—೧೯೪೦ ನೆಯದಿನ ಪ್ರಶಂಸಾರ್ಹವಾದ ವಿವಾಹಕಾರ್ಯವು ನಡೆಯಿತು- ಈ ಕಾರ್ಯದಿಂದ ಮುಂದೆ ಕಾರ್ಯಮಾಡುವವರು ಅನೇಕ ವಿಷಯಗಳನ್ನು ಅನುಕರಣಮಾಡುವಂತಿದೆ. ಸದರಿ ಗ್ರಾಮದ ಚಾನುಕೋಟಿಮಠದ ವೇ॥ ಬಾಡದ ವೀರಪ್ಪಯ್ಯನವರೆಂಬುವವರೇ ಕಾರ್ಯಕರ್ತರು, ಇವರ ಅಣ್ಣನವರಾದ ವೇ। ಕೊಟ್ರಯ್ಯನವರ ಪುತ್ರ ಚಿ॥ ಚೆನ್ನಬಸಯ್ಯನೆಂಬ ವರಶ್ರೇಷ್ಠನಿಗೂ ಚೆನ್ನಪಟ್ಟಣದ ಕಾಲುವೆಹಳ್ಳಿಮಠದ ವೇ॥ ಸದಾಶಿವಪ್ಪಯ್ಯನವರ ಸುಪುತ್ರಿ ಚಿ। ಕುಂ॥ ಸೌ॥ ಜಯದೇವಮ್ಮ ಎಂಬ ಕನ್ಯಾಮಣಿಗೂ ವಿವಾಹವು ನಡೆಯಿತು.

ಅತಿಥಿ ಅಭ್ಯಾಗತರಿಗೆ ಅನೇಕ ವಿಧವಾದ ಭಕ್ಷ್ಯ ಭೋಜನವು ತಡೆಯಿಲ್ಲದೆ ಪೂರ್ಣ ೧ ವಾರದವರೆಗೂ ನಡೆಯಿತು. ಇದರಲ್ಲಿ ವಿಶೇಷವೆಂದರೆ....ಸದರಿ ವೇ॥ವೀರಪ್ಪಯ್ಯನವರು ತಮ್ಮ ಗ್ರಾಮದ ಹಾಸ್ಟೆಲ್ಲಿಗಾಗಿ ಕೂಡಿದ ಸಭೆಯಲ್ಲಿ ೫೦೦ ರೂ.ಗಳ ವಾಗ್ದಾನವನ್ನು ಸಲ್ಲಿಸಿ ಅದರಲ್ಲಿ ಆಗಲೇ ೧೦೦. ರೂ. ಹೈಸ್ಕೂಲ್ ಹೆಡ್‌ಮಾಸ್ಟರ ಹಾಗೂ ಹಾಸ್ಟೆಲ್ ಸೆಕ್ರೆಟರಿಯವರ ವಶಕ್ಕೆ ಕೊಟ್ಟರು. ವಧೂವರರಿಗೆ ಅಕ್ಷತಾರೋಪಣವಾದನಂತರ ಈ ವಿಚಾರವಾಗಿ ಶ್ರೀ ವಾಗೀಶಶಿವಾಚಾರ್ಯರು ಸರಸವಾಗಿ ವ್ಯಾಖ್ಯಾನಮಾಡಿದರು. ಈ ಸಂದರ್ಭವನ್ನನುಸರಿಸಿ ಹೈಸ್ಕೂಲ್ ಹೆಡ್‌ಮಾಸ್ಟರವರು ಸ್ವಲ್ಪ ಹೊತ್ತು ಮಾತನಾಡಿ ಸಭಿಕರನ್ನು ಆನಂದಗೊಳಿಸಿದರು

ಶಾ. ೧೯--೫--೪೦ ನೆಯ ರವಿವಾರ ಶ್ರೀ ಮದುಜ್ಜಯಿನೀ ಸದ್ಧರ್ಮ ಸಿಂಹಾಸನಾಧೀಶ ಶ್ರೀ ಜಗದ್ಗುರು ಸಿದ್ಧೇಶ್ವರ ರಾಜದೇಶಿಕೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳವರನ್ನು ಬಿಸ್ತಹನಾಡಿ ಈ ಮಹೋತ್ಸವಕ್ಕೆ ವಿಜಯಮಾಡಿಕೊಂಡರು. ಅವಿಸ ಕೊಟ್ಟೂರು ಉಜ್ಜಯಿನೀ ಶಾಖಾಮಠದಿಂದ ಬಿರುದಾವಳಿ ಸಹಿತ ಜಗದ್ಗುರುಗಳವರ ಉತ್ಸವವು ಹೊರಟು ಮುಖ್ಯ ಬೀದಿಯಲ್ಲಿ ಹಾಯ್ದು ವೇ|| ವೀರಪ್ಪಯ್ಯನವರ ಮನೆಗೆ ೧೨ ಘಂ.ಗೆ ತಲುಪಿತು.

ಶ್ರೀ ವಾಗೀಶಶಿವಾಚಾರ್ಯರು ಗುರುಭಕ್ತಿ ಎಂಬ ವಿಷಯವನ್ನವಲಂಬಿಸಿ ವ್ಯಾಖ್ಯಾನವನ್ನು ಮಾಡಿದರು. ಶ್ರೀ ಜಗದ್ಗುರುಗಳವರು ಸರ್ವರಿಗೂ ಉಪದೇಶ ರೂಪವಾಗಿ ಸದಾಚರಣೆಗಳನ್ನು ಬೋಧಿಸಿದರು. ವಧೂ ವರರನ್ನು ಆಶೀರ್ವದಿಸಿದರು.

ಇವರ ಭಕ್ತಿಯನ್ನು ಕೈಕೊಂಡು ಶಾ, ೨೨--೫--೪೦ ನೆಯ ಬೆಳಿಗ್ಗೆ ಶ್ರೀಜಗದ್ಗುರುಗಳವರು ಪುನಃ ಉಜ್ಜಯಿನೀ ಪೀಠಕ್ಕೆ ದಯಮಾಡಿಸಿದರು.

ವಿವಾಹಗಳಲ್ಲಿ ದುಂದು ವೆಚ್ಚನ್ನು ತಡೆದು ಅದೇ ಧನವನ್ನೇ ಧಾರ್ಮಿಕ ಕಾರ್ಯಗಳಲ್ಲಿಸವೆಸುವುದನು ಸದರಿ ವೇ|| ವೀರಪ್ಪಯ್ಯನವರಿಂದ ಗ್ರಹಿಸುವಂತಿದೆ. ಶ್ರೀ ಜಗದ್ಗುರು ಪಂಚಾಚಾರ್ಯರುವಧೂವರರಿಗೆ ಚಿರಾಯುರಾರೋಗ್ಯಗಳನ್ನಿತ್ತು ಕಾಪಾಡಲಿ (ಓರ್ವ ಉತ್ಸವಭಾಗಿ)

---

# ಧರ್ಮರಾಜ್ಯದ ವಾಚಕರಲ್ಲಿ ನಮ್ರ ನಿವೇದನ

---

ವಾಚಕಮಹೋದಯರೇ! ಧಾರವಾಡದಿಂದ ನಮ್ಮ ಧರ್ಮರಾಜ್ಯವು ೧೧ ತಿಂಗಳು ಹೊರಟಿತು. ಚಂದಾದಾರರಿಗೆ ಬಹುಮಟ್ಟಿಗೆ ಸಾಧ್ಯವಿದ್ದಷ್ಟುಮಟ್ಟಿಗೆ ಪತ್ರಿಕೆಗಳನ್ನು ಮುಟ್ಟಿಸಲು ಯತ್ನಿಸಿದ್ದಾಗಿದೆ. ಆದರೂ ಅನೇಕರು ನಮಗೆ ಕೆಲತಿಂಗಳ ಪತ್ರಿಕೆಗಳು ಮುಟ್ಟಿಲ್ಲವಾಗಿಯೂ ಕೆಲವರು ಎಲ್ಲಾ ಪತ್ರಿಕೆಗಳು ಮುಟ್ಟಿರುವುದಾಗಿಯೂ ನಮ್ಮ ಆಫೀಸಿಗೆ ಬರೆದಿರುವರು.

ಚಂದಾದಾರರೆಲ್ಲರಿಗೂ ಕೊಡುವುದಕ್ಕಾಗಿಯೇ ಧರ್ಮರಾಜ್ಯವನ್ನು ಅಚ್ಚುಮಾಡಿಸುತ್ತಿದೆಯೇ ಹೊರತು ಅವನ್ನು ಸುಮ್ಮನೇ ಇಡುವದಕ್ಕಲ್ಲ. ಹೀಗಿದ್ದು ಮುಟ್ಟದಿರುವುದಕ್ಕೆ ಕಾರಣಗಳು ಅನೇಕವಾಗಿರಬಹುದು.

ಯಾರಿಗೆ ಎಷ್ಟನೆಯ ಸಂಚಿಕೆ ಮುಟ್ಟಿಲ್ಲವೆಂಬ ವಿಷಯವನ್ನು ನಮ್ಮ ಆಫೀಸಿಗೆ ಕೂಡಲೇ ಬರೆಯಬೇಕು. ಶೀಘ್ರವಾಗಿ ಆ ಸಂಚಿಕೆಗಳನ್ನು ಉಚಿತ (ಫುಕ್ಕಟೆ)ವಾಗಿ ಕಳುಹುತ್ತೇವೆ.

ಹೋದ ಆಶ್ವಯುಜಕ್ಕೆ ೧೧ ತಿಂಗಳ ಕಾಪಿಗಳು ಹೊರಟಿವೆ. ಅಲ್ಲಿಂದೀಚೆಗೆ ಪ್ರೆಸ್ಸಿನ ಅನಾನುಕೂಲತೆಯಿಂದ ಧರ್ಮರಾಜ್ಯವು ಪ್ರಕಟವಾಗಿಲ್ಲ. ಮೊನ್ನೆ ಯುಗಾದಿಗೆ ಪ್ರೆಸ್ಸು ಸರಿಯಾದಮೇಲೆ ಫಾಲ್ಗುಣ ಚೈತ್ರಮಾಸಗಳ ಸಂಚಿಕೆ ಎರಡನ್ನು ಕೂಡಿಸಿ ಅಚ್ಚುಹಾಕಿಸಿ ಪ್ರಕಟಿಸಿದ್ದೇವೆ. ಈ ಸಂಚಿಕೆಯನ್ನು ನಮ್ಮ ಚಂದಾದಾರರೆಲ್ಲರಿಗೂ ಕಳುಹಿಸಿದೆ. ಹೂವಿನಹಡಗಲಿ—ಹೊಸಪೇಟೆ—ಹರಪನಹಳ್ಳಿ—ಕೊಟ್ಟೂರು ಈ ಗ್ರಾಮಗಳ ಚಂದಾದಾರರಿಗೆ ಸ್ವತಃ ನಮ್ಮ ಸಂಸ್ಥೆಯ ಅಧ್ಯಕ್ಷರಾದ ಶ್ರೀ ವಾಗೀಶಶಿವಾಚಾರ್ಯರೇ ತಮ್ಮ ಸರ್ಕೀಟಿನಕಾಲದಲ್ಲಿ ತಲುಪಿಸಿದ್ದಾರೆ.

ಚೈತ್ರ ಸಂಚಿಕೆಯಿಂದ ೨ ನೆಯ ವರ್ಷವು ಆರಂಭವಾಯಿತು. ವೈಶಾಖ ಜೇಷ್ಠ ಸಂಚಿಕೆಗಳು ಇದರಲ್ಲಿವೆ. ಹೋದಸಾರೆ ಸಹಾಯಕರಾದವರೆಲ್ಲರೂ ಈ ಸಾರೆ ಕೇವಲ ಚಂದಾಹಣ ೧—೪—೦ ಮಾತ್ರ ಕಳುಹಿಸಬೇಕು. ಈ ಉದ್ದೇಶದಿಂದ ಸರ್ವರೂ ತಮ್ಮ ಮಿತ್ರಮಂಡಲಿಯಲ್ಲಿ ಪ್ರಚಾರಿಸಿ ಧರ್ಮರಾಜ್ಯವನ್ನು ಸ್ಥಿರಗೊಳಿಸಬೇಕೆಂದು ಸೂಚನೆ

ಇನ್ನು ಮುಂದೆ ಧರ್ಮರಾಜ್ಯವು ಏಜಂಟರ ಮುಖಾಂತರವಾಗಿ ವಾಚಕರಿಗೆ ತಲುಪುವುದು. ದೂರದವರಿಗೆ ಪೋಷ್ಟದ್ವಾರಾ ರವಾನೆಯಾಗುತ್ತದೆ. ಆದ್ದರಿಂದ ಸರ್ವರೂ ಹಿಂದಿನ ಪ್ರೇಮ-ಸಾಹಿತ್ಯ ಪ್ರಚಾರವೃತ್ತಿಯನ್ನು ಮನವಂದು ಚಂದಾಹಣವನ್ನು ಶೀಘ್ರವಾಗಿ ರವಾನಿಸುವುದಲ್ಲದೆ ತಮ್ಮ ಅಪೇಕ್ಷೆಗಳೇನಿದ್ದರೂ ನಿಶ್ಶಂಕೆಯಿಂದ ಬರೆಯಬೇಕಾಗಿ ಕೋರಿದೆ.

———

**ಧರ್ಮರಾಜ್ಯಕ್ಕೆ ಚಂದಾದಾರರಾಗಿರಿ**

# ಹಂಪಸಾಗರದಲ್ಲಿ ಶ್ರೀ ಜಗದ್ಗುರು ಏಕೋರಾಮರ ಮತ್ತು ಶ್ರೀ ಬಸವಣ್ಣನವರ ಜಯಂತಿ

—·—○——

ಇಲ್ಲಿಯ ಜನಸೇವಾಸಂಘದವರು ನಿರ್ಣಯಿಸಿದಂತೆ ಮೇಲ್ಕಂಡ ಉಭಯ ಮಹಿಮರ ಜಯಂತಿ ಉತ್ಸವವು ತಾ. ೧೦—೫—೪೦ ನೆಯ ಶುಕ್ರವಾರ ಬಹಳ ವಿಜೃಂಭಣೆಯಿಂದ ನಡೆಯಿತು. ಈ ಉತ್ಸವನಿಮಿತ್ತವಾಗಿ ಬುಧವಾರದಿಂದಲೇ ಕಾರ್ಯಕ್ರಮಗಳನ್ನೇರ್ಪಡಿಸಿದ್ದರು. ಹರಿಹರದ ಶ್ರೀ ವೀರಶೈವ ಧರ್ಮಾಲಯದ ಅಧ್ಯಕ್ಷರೂ ಧರ್ಮರಾಜ್ಯ ಮಾಸಪತ್ರಿಕೆಯ ಸಂಚಾಲಕರೂ ಆದ ವರಕವಿ ಶ್ರೀ ವಾಗೀಶ ಶಿವಾಚಾರ್ಯರನ್ನು ವ್ಯಾಖ್ಯಾನಕ್ಕಾಗಿ ಬರಮಾಡಿಕೊಂಡಿದ್ದರು.

ಶ್ರೀ ವಾಗೀಶ ಶಿವಾಚಾರ್ಯರು ಬುಧವಾರ ಮಧ್ಯಾಹ್ನ ೧ ಘಂ.ಗೆ ಇಲ್ಲಿಗೆ ದಯಮಾಡಿಸಿದರು. ಸಂಘದ ಸೆಕ್ರೆಟರಿ ಮುಂತಾದ ಪುರಪ್ರಮುಖರು ಶ್ರೀಗಳವರನ್ನು ಎದುರುಗೊಂಡು ಶ್ರೀಮಾನ್ ಶೆಟ್ರ ಶರಣಪ್ಪನವರ ಮನೆಗೆ ಕರೆತಂದರು. ಶ್ರೀಗಳವರ ಮಧ್ಯಾಹ್ನ ಶಿವಾರ್ಚನೆಯು ಶ್ರೀಮಾನ್ ಯಾತಗಿರಿ ಸಿದ್ದಲಿಂಗಪ್ಪನವರ ಮನೆಯಲ್ಲಿಯೂ ಆಮೇಲೆ ಎರಡು ದಿನ ಅರಳೀಕಟ್ಟಿ ಮಠದಲ್ಲಿಯೂ ನಡೆಯಿತು. ಶ್ರೀಗಳವರ ವ್ಯಾಖ್ಯಾನಕ್ಕಾಗಿ ಜನಸೇವಾಸಂಘದ ವಾಚನಾಲಯದ ಮುಂಗಡೆ ಭವ್ಯವಾದ ಮಂಟಪವನ್ನು ರಚಿಸಿದ್ದರು. ಆದಿನ ಸಂಜೆ ೫ ಘಂ.ಗೆ ಕಾರ್ಯಕ್ರಮಗಳು ಪ್ರಾರಂಭವಾದವು. ಆದಿನದ ಸಭಾಧ್ಯಕ್ಷತೆಯನ್ನು ಮಿ॥ ಹುಂಡೇಕಾರ ವಕೀಲರು ಬಿ. ಎ. ಎಲ್‌ಎಲ್ ಬಿ. ಅವರು ವಹಿಸಿದ್ದರು. ಆರಂಭದಲ್ಲಿ ಕೆಲವು ಸ್ತೋತ್ರ ಪದ್ಯಗಳೂ ಲಾವಣೀ ಹಾಡುಗಳೂ ನಡೆದವು. ಅನಂತರ ಅಧ್ಯಕ್ಷರು ಪ್ರಾಸ್ತಾವಿಕ ಭಾಷಣ ಮಾಡಿ ಹೊಸಪೇಟೆಯ ಮಾಷ್ಟರರಿಗೆ ವ್ಯಾಖ್ಯಾನಮಾಡಲು ಸೂಚಿಸಿದರು. ಅದರಂತೆ ಮಾಷ್ಟರರವರು ಸರ್ವರಿಗೂ ಸುಬೋಧಕರವಾಗು

ವಂತೆ ಜಯಂತಿಯನ್ನು ಮಾಡುವುದರಿಂದ ಉಂಟಾಗಬೇಕಾಗಿರುವ ಲಾಭಗಳನ್ನು ಕುರಿತು ವ್ಯಾಖ್ಯಾನಮಾಡಿದರು. ಆಬಳಿಕ ಶ್ರೀ ವಾಗೀಶಶಿವಾಚಾರ್ಯರು "ಜನಸೇವೆಯೇ ಈಶಸೇವೆ" ಎಂಬ ವಿಷಯವನ್ನವಲಂಬಿಸಿ ಅವಿಚ್ಛಿನ್ನವಾಗಿ ೨ ಘಂಟೆ ಕಾಲ ವ್ಯಾಖ್ಯಾನಮಾಡಿ ಕೂಡಿದ ಜನಸ್ತೋಮಕ್ಕೆ ಸಂತೋಷವನ್ನುಂಟುಮಾಡಿದರು. ಜನರು ಶಿವಾಚಾರ್ಯರ ವ್ಯಾಖ್ಯಾನವು ಇನ್ನೂ ಸಾಗಲಿ ಎಂತಲೇ ಕುತೂಹಲಪಡುತ್ತಿದ್ದರು- ಆದರೂ ಮುಂದಿನ ಕಾರ್ಯಗಳಿಗೆ ತೊಂದರೆಯಾಗಬಾರದೆಂದ, ಶ್ರೀಗಳವರು ವ್ಯಾಖ್ಯಾನವನ್ನು ಮುಗಿಸಿದರು. ಇವರ ವ್ಯಾಖ್ಯಾನದಲ್ಲಿಸತ್ಯ–ಅಹಿಂಸೆ–ಬ್ರಹ್ಮಚರ್ಯಾದಿ ಅಕ್ರ-ಮುಸ್ಥಿತಿ ಆಧುನಿಕ ಪುರುಷರ ಅವನತಿ—ಮದ್ಯ-ಮಾಂಸ-ಚಹಾ–ತಂಬಾಕು ಮುಂತಾದ ದುಷ್ಟಪದಾರ್ಥಗಳ ತ್ಯಾಗ- ಸ್ವದೇಶಪ್ರೇಮ–ಕ್ಷೀಣತೆಯೂ ವ್ಯಾಯಾಮವೂ ಇತ್ಯಾದಿ ಮಹತ್ತರವಾದ ವಿಷಯಗಳು ಅಡಕವಾಗಿದ್ದವು.

ಅಧ್ಯಕ್ಷರು ಉಪಸಂಹಾರ ಭಾಷಣಮಾಡಲು ಪ್ರಾರಂಭಿಸಿ ಶ್ರೀಗಳವರ ಸಂಪೂರ್ಣ ಭಾಷಣಕ್ಕೆ ಭಾಷಣವನ್ನೇ ಸಂಹಾರಮಾಡಿಬಿಟ್ಟರು. ಸದರಿ ವಕೀಲರು ತಮ್ಮ ಎದುರುಪಾರ್ಟಿ ವಕೀಲರೊಡನೆ ವಿಪಕ್ಷವನ್ನು ಸಾಧಿಸುವ ಪದ್ಧತಿಯನ್ನು ಇಲ್ಲಿಯೂ ಅನುಸರಿಸಹತ್ತಿದರು. ಸಭೆಯಲ್ಲಿ ಸುಧಾಪಾನ ಸದೃಶವಾದ ಶಿವಾಚಾರ್ಯರ ವ್ಯಾಖ್ಯಾನದಿಂದ ತೃಪ್ತರಾದ ಜನರಿಗೆ ವಕೀಲರ ವ್ಯಾಖ್ಯಾನವು ವಿಷವಾಗಿ ಪರಿಣಮಿಸಿ ಒಬ್ಬೊಬ್ಬರೇ ಸಭೆಯಿಂದೆದ್ದು ಹೋದರು. ವಕೀಲರು ತಮ್ಮ ಉಪ-ಸಂಹಾರ ಭಾಷಣವನ್ನು ಮುಗಿಸುವುದರೊಳಗಾಗಿ ಎಂಕ–ನೊಣಸೀನ ಎಂಬಂತೆಅಲ್ಲಲ್ಲಿ ಕೆಲಜನ ಮಾತ್ರ ಕುಳಿತಿದ್ದರು

ವಕೀಲರು ಸಂಹಾರ ಭಾಷಣದಲ್ಲಿ ಸೇರಿಸಿದ ಸ್ಪಷ್ಟ ವಿಷಯಗಳು ಈ ಕೆಳಕಂಡಂತಿದ್ದವು. ಪ್ರಾಣಿವಧೆ ತಪ್ಪಿಸಲು ಸಾಧ್ಯವಿಲ್ಲ. ಜಗತ್ತಿನಲ್ಲಿ ಒಬ್ಬ ಜೀವಿಯು ಒಬ್ಬ ಜೀವಿಯನ್ನು ಕೊಂದು ಬದುಕಬೇಕಾಗುತ್ತದೆ. ಮದ್ಯಮಾಂಸ ಸೇವನೆಯು ಎಂದಿನಿಂದಲೂ ಸಾಗಿಬಂದಂತೆ ಮುಂದಾದರೂ ಸಾಗಲೇಬೇಕಾದ್ದು. ಸತ್ಯ-ಬ್ರಹ್ಮಚರ್ಯಾದಿಗಳಿಗೆ ತಳಬುಡವಿಲ್ಲ. ಮನುಷ್ಯನು ಎಂದೂ ಶಕ್ತನೂ ಪುಷ್ಟನೂ ಆಗಬಾರದು. ಬುದ್ಧಿಮಂದವಾಗುತ್ತದೆ. ಆದಷ್ಟು ಕ್ಷೀಣವಾಗುತ್ತ ಬಂದರೇನೇ

ಬುದ್ಧಿ ವಿಕಾಸವಾಗುತ್ತದೆ. ನಾನು ನೋಡಿದ್ದರಲ್ಲಿ ಬಹುಕಾಲದಿಂದ ಪ್ರಾಚೀನಕಾಲದಿಂದ ದಪ್ಪವಾಗಿದ್ದವರಾದೂ ಬುದ್ಧಿವಂತರಾಗಿರದೆ ಕೇವಲ ತೆಳ್ಳಗಿದ್ದವರೇ ಬುದ್ಧಿವಂತರೆಂಬುದನ್ನು ಕಂಡುಹಿಡಿದಿದ್ದೇನೆ. ಚಹಾಪಾನ ಮುಂತಾದ್ದೂ ಬಿಡಲಿಕ್ಕೆ ಸಾಧ್ಯವಿಲ್ಲ. ಅದರಲ್ಲಿಯೇ ಸುಧಾರಿಸಿ ಜನರಿಗೆ ಶುದ್ಧವಾದ ಚಹಾದಿಗಳು ಸಿಗುವಂತೆ ಅಂಗಡಿಯವರು ವ್ಯವಸ್ಥೆಯಿಡಬೇಕು. ಹೀಗೆ ಏಕತ್ರ ಕೂಡಿ ಚಹಾ ಮುಂತಾದ ಪಾನಮಾಡುವುದರಿಂದ ಮೈತ್ರಿಬೆಳೆಯುತ್ತದೆ. ಆದ್ದರಿಂದ ಇಂತಹ ಕಾರ್ಯಗಳಿಗೆ ಹೆಚ್ಚು ಉತ್ತೇಜನಕೊಡಬೇಕು. ಇವನ್ನು ಶ್ರೀಗಳು ಹಳಿದರು. ಒಟ್ಟಿನಮೇಲೆ ಶ್ರೀಗಳು ಹೇಳಿದ ವಿಷಯಗಳು ಈ ಸಮಯಕ್ಕೆ ಸರಿಯಾದವಲ್ಲ. ಇವರು ಹಾಗೆ ಹೇಳಬಾರದಾಗಿತ್ತು, ಹೀಗೆ ಹೇಳಬಾರದಾಗಿತ್ತು ಮುಂತಾಗಿ ಮುಗಿಸಿದರು.

ಇಲ್ಲಿಯ ಜನಸೇವಾಸಂಘದವರಲ್ಲೊಬ್ಬರಾದ ಇಂಗ್ಲೀಷ ಪ್ರಾಯ್ವೇಟ್ ಶಾಲಾಮಾಷ್ಟರವರು ಸರ್ವರ ಆಭಾರವನ್ನು ಮನ್ನಿಸಿದರು. ವಕೀಲರು ಶ್ರೀಗಳಿಗೆವಂದಿಸಿ ಮನೆಗೆ ತೆರಳಿದರು ಊರತುಂಬಾ ಎಲ್ಲೆಲ್ಲಿಯೂ ವಕೀಲರ ಖಂಡನೆಯೇ ಖಂಡನೆಯು, ಕೇಳಿ ಕೇಳಿ ಸಾಕಾಗಿಹೋಯಿತು. ವಕೀಲರನ್ನು ಸಭೆಯಲ್ಲಿ ಏಕೆ ಖಂಡಿಸಲಿಲ್ಲವೆಂದು ಕೆಲವರು ಶ್ರೀಗಳವರನ್ನು ಕೇಳಿದರು. ಶ್ರೀಗಳವರು ಅದಕ್ಕುತ್ತರವಾಗಿ ನಾವು ಅಹಿಂಸಾವಾದಿಗಳು ಖಂಡಿಸು ಎಂದರೆ ತುಂಡುಮಾಡು ಎಂದರ್ಥವಾಗುತ್ತದೆ. ಆ ಕಾರ್ಯವನ್ನು ಇನ್ನೊಮ್ಮೆ ವಕೀಲರೇ ಮಾಡಲಿ ಎಂದು ಉತ್ತರವಿತ್ತರು. ಆದರೂ ಶ್ರೀಗಳವರು ಎಷ್ಟು ಹೇಳಿದರೂ ವಕೀಲರ ವಿಷಯದಲ್ಲಿ ಜನರು ಅಲ್ಲಗಳೆದು ಮಾತನಾಡುವುದು ತಪ್ಪಲಿಲ್ಲ. ಕೆಲವರಂತೂ ಕಾಗಿ ಕೈಯ್ಯಾಗ ಕಚೇರಿ ಕೊಟ್ಟರೆ ............ ಮುಂತಾಗಿ ಇವರು ಅಧ್ಯಕ್ಷತೆಗೆ ಅಯೋಗ್ಯರು. ಯಾವ ಮಹಾನುಭಾವರು ಸತ್ಯ, ಅಹಿಂಸೆ ಮುಂತಾದವುಗಳಿಂದ ಜಗದ್ವಂದ್ಯರಾಗಿರುವರೋ ಅಂಥವರ ಜಯಂತ್ಯುತ್ಸವದಲ್ಲಿ ಇಂತಹ ಕುಲಬೆರಕೆಯೇ ? ಶ್ರೀಗಳು ಮನನೊಂದುಕೊಂಡರೋ ಹೇಗೋ ? ಎಂದರು. ಶ್ರೀಗಳ ಸ್ವಭಾವವು ಧೀರೋದಾತ್ತವಾದುದು, ಅವರು ಸಣ್ಣಪುಟ್ಟವರನ್ನು ಸ್ವಲ್ಪವೂ ಲಕ್ಷ್ಯ

ಸರು. ಅವರನ್ನು ಸ್ವತಃ ಕಂಡು ವಿಚಾರಿಸಿದಾಗ ಪಾಪ! ಅವರನ್ನೇಕೆ ಹಳಿಯುತ್ತೀರಿ ಅವರು ಕೇವಲ ವಕೀಲರು, ಮಾತನಾಡುವಾಗ ಧಾರ್ಮಿಕ ಸಭೆಯು ಅವರಿಗೆ ಕೋರ್ಟಿನಂತೆ ಕಂಡು ನಾವು ಅವರಿಗೆ ಒಬ್ಬ ಪ್ರತಿವಾದಿ ವಕೀಲರೆಂದು ತಿಳಿದಿರಬೇಕು. ಅಂತೆಯೇ ಅವರು ವೈಮನ ರೆತು ಕೋರ್ಟಿನ ಪದ್ಧತಿಯನ್ನು ಆರಂಭಿಸಿರಬಹುದು. ತಪ್ಪೇನು? ನಿಮಗೆ ಯಾರಿಂದ ಲಾಭವೋ ಅವರಮಾತನ್ನು ಮತ್ತೆ ಮತ್ತೆ ಕೇಳಿದ ರಾಯಿತು? ಎಂದಪ್ಪಣೆಯಿತ್ತರು.

ಗುರುವಾರ ದಿನದ ಸಭೆಗೆ ಸದರಿ ವಕೀಲರನ್ನು ಎಷ್ಟು ಜನರು ಕರೆದರೂ ಬರಲೇ ಇಲ್ಲ. ಯಾಕಪ್ಪಾ ಯಾರೇನು ಮಾಡಿದ್ದರು? ತಮ್ಮ ಬಾಯಿಯಿಂದ ತಾವೇ ಅಂದುಕೊಂಡು ಬಾಯಿತಿಂಡಿ ತೀರಿಸಿಕೊಂಡು ಮತ್ತೆ ತಾವೇ ನೊಂದುಕೊಂಡರೆ ಯಾರು ಮಾಡುವುದೇನು? ಇದೇನೇ ಶ್ರೀಗಳ ಆತ್ಮಸಂಯಮನದ ಪ್ರಭಾವ! ನಮ್ಮ ಹಿಂದಿನ ಆಚಾರ್ಯ-ಶರಣರ ಸಂಯಮಗಳನ್ನು ಪುರಾಣದಲ್ಲಿ ಓದಿದರೆ ಅದನ್ನು ಆಚರಿಸಿದರೆ ಫಲವೇನೆಂಬುದು ನಮಗೆ ಪ್ರತ್ಯಕ್ಷವಾಗಿ ಇಲ್ಲಿ ಕಂಡು ಬಂದಿತು.

ತಾ.೯—೫—೪೦ ನೆಯ ಗುರುವಾರ ಪದ್ಧತಿಯಂತೆ ಸಂಜೆ ೫ ಘಂಟೆಗೆ ಸರಿಯಾಗಿಕಾರ್ಯಕ್ರಮಗಳು ಪ್ರಾರಂಭವಾದವು. ಆ ದಿನ ಶ್ರೀ ವಾಗೀಶ ಶಿವಾಚಾರ್ಯಗುರುಗಳವರು ಶ್ರೀ ಜಗದ್ಗುರು ಏಕೋರಾಮ ಹಾಗೂ ಶ್ರೀ ಬಸವಣ್ಣ ಇವರ ಚರಿತ್ರೆ, ಮತ್ತು ಮತಪ್ರಚಾರ ಎಂಬ ವಿಷಯವನ್ನವಲಂಬಿಸಿ ಅತ್ಯುತ್ತಮವಾಗಿ ಜನಪರಿಣಾಮಕರ ವಾಗುವಂತೆ ವ್ಯಾಖ್ಯಾನವನ್ನು ಮಾಡಿದರು. ಜನಗಳು ಮೊದಲಿನ ದಿನಕ್ಕಿಂತಲೂ ಹೆಚ್ಚಾಗಿ ಸೇರಿದ್ದರು. ಸಭೆಯಲ್ಲಿ ಗಲಭೆಯಾಗಬಾರದೆಂದು ಆದಾಯೋ ಪೋಲೀಸ್ ಸಿಬ್ಬಂದಿಯನ್ನು ಕಳಿಸಿದ್ದರು. ಶಾಂತಿ ಸಮಯದಲ್ಲಿ ನುರಿತವರಾದ ಶ್ರೀ ವಾಗೀಶ ಶಿವಾಚಾರ್ಯರು ಸರ್ವರಿಗೂ ಶಾಂತಿಪಾಠವನ್ನೇ ಚನ್ನಾಗಿ ಅಧ್ಯಯನಮಾಡಿಸಿದರು. ಶ್ರೀಗಳ ವ್ಯಾಖ್ಯಾನವು ಮುಗಿದ ಬಳಿಕ ಹುಬ್ಬಳ್ಳಿಯಿಂದ ಕೀರ್ತನಕ್ಕಾಗಿ ಆಗಮಿಸಿದ್ದ ಶ್ರೀಮಾನ್ ಕರಿಗುಡರಿಯವರು "ಮಾರ್ಖಂಡೇಯ"ಕಥೆಯನ್ನು

ಕೀರ್ತನಮಾಡಿದರು. ಸದರಿಯವರು ಸತ್ಯಾಗ್ರಹ ಸಮಿತದಲ್ಲಿ ನುರಿತವರಾದುದರಿಂದ ಜನಸಾಧಾರಣ ವಿಷಯಗಳನ್ನೂ ಬಹಳ ಸಪ್ರಸ್ತಾರ್ಪಕವಾಗಿ ಮಧ್ಯದಲ್ಲಿ ತೆಗೆದುಕೊಳ್ಳುತ್ತಿದ್ದರು. ಇವರ ಕೀರ್ತನೆಯಿಂದ ಸರ್ವರಿಗೂ ಆತ್ಯಾನಂದವಾಯಿತು.

ತಾ. ೧೦—೫—೪೦ ನೆಯ ಮಧ್ಯಾಹ್ನ ೩ ಘಂಟೆಯಿಂದ ಜಯಂತೀ ರಥೋತ್ಸವವು ಪ್ರಾರಂಭಿಸಲ್ಪಟ್ಟಿತು. ಶ್ರೀ|| ಜ| ಗು|| ಏಕೋರಾಮರಾಧ್ಯರ ಹಾಗೂ ಶ್ರೀ ಬಸವಣ್ಣನವರ ಭಾವಚಿತ್ರಗಳನ್ನು ರಥದಲ್ಲಿ ಅಲಂಕರಿಸಿ ವಾದ್ಯ ವೈಭವ ಜಯಘೋಷ ಭಜನಾಮೇಳಗಳೊಡನೆ ಊರ ಮುಖ್ಯ ಬೀದಿಗಳಲ್ಲಿ ಉತ್ಸವಮಾಡಿಕೊಂಡು ಸಭಾ ಮಂಟಪಕ್ಕೆ ಬಂದರು.

ಆದಿನ ಶ್ರೀಗಳವರು ೧೦ ಘಟಿವರೆಗೂ ಸುಮನೋಹರವಾದ ಸರಣಿಯಿಂದ "ನಾವಾರು ನಮ್ಮ ಮತವಾವುದು?,, ಎಂಬ ವಿಷಯದಮೇಲೆ ಅಮೋಘವಾದ ವ್ಯಾಖ್ಯಾನಮಾಡಿದ್ದರು. ಸಭಿಕರ ಆನಂದಕ್ಕೆ ಪಾರವೇ ಇರಲಿಲ್ಲ. ಕೊನೆಗೆ ಶ್ರೀಗಳವರ ಆಭಾರ ಮನ್ನಣೆಯನ್ನು ಸ್ಕೂಲ್ ಮಾಸ್ಟರ್ ರವರು ಬಹಳ ಸಮರ್ಪಕವಾಗಿ ಮಾಡಿದರು. ಶ್ರೀಗಳವರು ಸಂಘವು ಉನ್ನತಾವಸ್ಥೆಯನ್ನು ಹೊಂದಲೆಂದು ಹರಸಿದರು. ಸರ್ವರಿಗೂ ಫಲಾಹಾರವು ಕೊಡಲ್ಪಟ್ಟನಂತರ ಸಭೆಯು ಕೊನೆಗಂಡಿತು.

ನಮ್ಮ ಗ್ರಾಮದವರು ಇಂತಹ ಬಿಸಿ ವಾತಾವರಣದಲ್ಲಿ ದೂರ ದೂರ ಸಿಡಿಯಬಹುದಾದ ಕಾರ್ಯಗಳನ್ನು ಸಫಲಕ್ಕೆ ತಂದುದು ನೋಡಿದರೆ ಹಂಪಸಾಗರದ ಜನಸೇವಾ ಸಂಘವು ಇನ್ನು ಸ್ವಲ್ಪ ದಿನಗಳಲ್ಲಿಯೇ ಮಹತ್ತರ ಕಾರ್ಯಗಳನ್ನು ಮಾಡಲು ಸಮರ್ಥವಾಗಬಹುದೆಂದು ಭಾವಿಸುವೆವು. ಅಹರ್ನಿಶಿಯೂ ಈ ಸಂಘದ ಕಾರ್ಯಗಳಿಗೆ ಟೊಂಕಕಟ್ಟಿರುವ ತರುಣರು ಸ್ತೋತ್ರಾರ್ಹರು ಇವರನ್ನು ದಾರಿಗೆ ಹಚ್ಚಿರುವ ವೃದ್ಧರಂತೂ ಸರ್ವದಾ ವಂದ್ಯರು. ಶ್ರೀ ವಾಗೀಶ ಶಿವಾಚಾರ್ಯರಂತಹ ಗುರುಗಳು ಸರಿಯಾದ ದಾರಿಯನ್ನು ತೋರಿಸುತ್ತ

ಸಮಾಜ ಶಾಂತಿಯೆನ್ನು ಗೈಯ್ಯುವುದಂತೂ ಎಲ್ಲದಕ್ಕೂ ಮೂಲ ಸೂತ್ರವಾಗಿದೆ.

ಹಂಪಸಾಗರ ಗ್ರಾಮವಾಸಿ

ಓರ್ವ ವಿಧೇಯ



## ಸಾದರ ಸ್ವೀಕಾರ

(೧) — ಹುಬ್ಬಳ್ಳಿ ಗೆಜೀಟ್ —

ಇಂದು "ಧರ್ಮರಾಜ್ಯ"ಕ್ಕೆ ಬಂದು ತಲುಪಿತು. ಸಾದರ ದಿಂದ ಸ್ವಿಕರಿಸಿದ್ದೇವೆ.

ರಾಜಕೀಯ ರಂಗದಲ್ಲಿ ಅದರಲ್ಲಿಯೂ ದೇಶೀಯಸ್ವರಾಜ್ಯ ಸೀಮಾಂತರಂಗದಲ್ಲಿ ಚನ್ನಾಗಿ ನುರಿತ ನೇತೃಗಳಿಬ್ಬರ ಸಂಪಾದ ಕತ್ವದಲ್ಲಿ ಈ ಗೆಜೀಟ್ ಹೊರಟಿರುವಾಗ ಇದರ ಯೋಗ್ಯತೆಯ ವಿಷಯವಾಗಿ ಪ್ರಶಂಸಿಸುವುದನಾವಶ್ಯಕ

ನಿಷ್ಪಕ್ಷಪಾತವಾಗಿ ಸದ್ಯಃ ಪರಿಸ್ಥಿತಿಯಲ್ಲಿ ರಾಜಕೀಯ ನೈತಿಕಾದಿ ವಿಷಯವಿಮರ್ಶಗಳನ್ನು ಮುದ್ದಾಗಿ ಬಿಡಿಸುವಲ್ಲಿಯೂ ಸರ್ವರಿಗೂ ಒಂದು ನೇರವಾದ ದಾರಿಯಿಂದ ಹೋಗುವಂತೆ ಬೋಧಿಸುವಲ್ಲಿಯೂ ಈ ಗೆಜೀಟ್ ಸಮರ್ಥವಾದ ಹಿತೈಷಿಯೆಂಬುವಲ್ಲಿ ಸಂದೇಹವಿಲ್ಲ ಸಹಸ್ರಾಯುಷಿಯಾಗಿ ಕರ್ನಾಟಕದಲ್ಲೆಲ್ಲಾ ಈ ಗೆಜಿಟ್ ಹರಡಿ ಬೆಳಗಲಿ.

ಸಂಪಾದಕಃ— ಧರ್ಮರಾಜ್ಯ. ಹರಿಹರ;

## (೨) ಸಂಕ್ಷಿಪ್ತ ಲಿಂಗಪೂಜಾವಿಧಿಃ—

ಸಂಗ್ರಾಹಕರುಃ— ಶ್ರೀ ವೀರೇಶ್ವರ ಬೆಂಗಳೂರು ನಗರ

ಪ್ರಕಾಶಕರು —- ಮಾ. ನಂ. ಶಿವಪ್ಪಸಹೋದರರು ಬೆಲೆ ೦—೧—೬

(ಇದರ ವಿಮರ್ಶೆ ಸ್ಥಲಾಭಾವದಿಂದ ಮುಂದಿನ ಸಂಚಿಕೆಯಲ್ಲಿ ಪ್ರಕಟವಾಗುವುದು.)

## (೩) ಬ್ರಹ್ಮೋಪದೇಶವಿಧಿ:—

ಲೇಖಕರು—ಶ್ರೀ ಶಂಕರಶಾಸ್ತ್ರಿಗಳು ಹರಿಹರ. ಪ್ರಕಾಶಕರು:—ಕುಡುತಿನಿ ಶ್ರೀ ನಯನಸ್ವಾಮಿಗಳವರು ಪೋ. ಮು. ಕುಡುತಿನಿ ಜಿ. ಬಳ್ಳಾರಿ ಶ್ರೀವಾಗೀಶ ಶಿವಾಚಾರ್ಯರು ಮುನ್ನುಡಿ ಬರೆದಿದ್ದಾರೆ. ಸರ್ವರಿಗೂ ಉಪಯುಕ್ತವಾಗುವಂತೆ ಪಂಡಿತರು ಕನ್ನಡ ತಾತ್ಪರ್ಯವನ್ನು ಬರೆದಿರುವರು. ಉಪದೇಶ ಅಥವಾ ಅನುಗ್ರಹ—ಪ್ರಸಾದೀಕರಾಗುವಿಕೆ ಎಂಬುದು ಸಶಾಸ್ತ್ರೀಯವೆಂಬುದನ್ನೇ ಈ ಗ್ರಂಥದಲ್ಲಿ ವಿವರಿಸಿ ಇದು ವರೆಗೂ ಸಮಾಜದಲ್ಲಿ ರೂಢಮೂಲವಾಗಿರುವ ಅಕ್ರಮಗಳನ್ನು ಸರಿಪಡಿಸಿದ್ದಾರೆ. ಅಚ್ಚು ಮುದ್ದಾಗಿದೆ. ಗ್ರಂಥ ಸುಂದರವಾಗಿದೆ. ಕ್ರೌನ್ ಸೈಜು ೧೦೦ ಪುಟಗಳಿಗೂ ಹೆಚ್ಚಾಗಿರುವ ದಿವ್ಯ ಗ್ರಂಥಕ್ಕೆ ಕೇವಲ ೧೨ ಆಣೆ ಬೆಲೆ ಕಡಿಮೆಯೆಂತಲೇ ಹೇಳಬಹುದು. ಈ ದೃಷ್ಟಿಯಿಂದಲೇ ಗ್ರಂಥಗಳು ಪ್ರಕಾಶವಾಗುವುದು ಶ್ರೇಯಸ್ಕರ. ಗ್ರಂಥಗಳು ಲೇಖಕರಲ್ಲಿಯೂ ಪ್ರಕಾಶಕರಲ್ಲಿಯೂ ಬೆಲೆಗೆ ದೊರೆಯು ಯುವವು. ಸರ್ವರೂ ಅವಶ್ಯವಾಗಿ ಸಂಗ್ರಹಿಸುವ ಗ್ರಂಥವು.

## (೪) ವಚನ ಸಂಗೀತ

ಲೇ॥ ಗಾನರತ್ನ ಇತ್ಯಾದಿ ಬಿರುದಾಂಕಿತರಾದ ಕರೂರು ಹಿರೇಮಠದ ವೇ॥ಗುರುಬಸವ ಗವಾಯಿಗಳು ಬೆಲೆ ೦—೨—೧ ಪೋ. ಮು. ಕರೂರು ತಾ॥ ರಾಣೇಬೆನ್ನೂರು ಜಿ. ಧಾರವಾಡ

ಸದರಿ ಲೇಖಕರು ಶ್ರೀ ಬಸವಾದಿ ಶಿವಶರಣರ ಹಾಗೂ ಶ್ರೀ ಮರುಳ ಸಿದ್ಧಾದಿ ಆಚಾರ್ಯರ ಶಿಷ್ಯರಾದ ಜಕ್ಕಣಾಚಾರ್ಯರ ಅಚ್ಚಗನ್ನಡದ ವಚನಗಳಿಗೆ ಸಂಗೀತ ಸಾಹಿತ್ಯಗಳನ್ನು ಜೋಡಿಸಿ ಬಹು ಮನೋಹರ ವಾಗಿ ಹಾಡಲು ಬರುವಂತೆ ಮಾಡಿದ್ದಾರೆ. ಈ ನೂತನ ವಿಧಾನದಿಂದ ವಚನಪ್ರಚಾರವು ಬಹು ಶೀಘ್ರವಾಗಿ ಆಗುವುದಲ್ಲದೆ ಕನ್ನಡದಲ್ಲಿ ಒಂದು ವಿಧವಾಗಿ ತತ್ವಪ್ರಚಾರವೂ ಆದಂತಾಗುವುದು.

ವರಕವಿ ಶ್ರೀ ವಾಗೀಶ ಶಿವಾಚಾರ್ಯರು ಈ ಗ್ರಂಥಕ್ಕೆ

ಮೂಲ್ಯವಾದ ಮುನ್ನುಡಿಯನ್ನು ಬರೆದಿದ್ದಾರೆ. ಈ ಗ್ರಂಥದಲ್ಲಿ ಅಲ್ಲಲ್ಲಿಯೇ ಮುದ್ರಣದೋಷವುಂಟಾಗಿದೆ.

ಶ್ರೀ ಮರುಳಸಿದ್ಧೇಶ್ವರಾಂಕಿತವಾಗಿ ಜಕ್ಕಣಾಚಾರ್ಯರು ರಚಿಸಿರುವ ಒಂದು ವಚನವು ಇಲ್ಲಿ ಉದ್ಧೃತವಾಗಿದೆ.

" ಗಂಧದ ಮರವು ಕೊರೆದು ತೇದವರೆಂದು, ನೊಂದು ಸುಗಂಧವ ಬಿಟ್ಟೀತೇನಯ್ಯಾ! ಚಂದ ಸುವರ್ಣ ಕಾಸಿಬಡಿದರೆಂದು, ನೊಂದು ಕಲಂಕವ ಹಿಡಿದೀತೇನಯ್ಯಾ! ಸಂಪುಸಂದುಗೆ ಕಡಿದು ಗಾಣದಿ ಹಿಂಡಿ ಕಾಸೆ, ನೊಂದೆನೆಂದೂ ಕಬ್ಬು ಸಿಹಿ ಬಿಟ್ಟೀತೇನಯ್ಯಾ! ತಂದು ತಂದೂ ಭವದ ಕಟ್ಟಲು ನಿಮ್ಮ ನೀವ, ನೊಂದೆನೆಂದೂ ಭಕ್ತ ಬಿಡುವನೇನಯ್ಯಾ! ತಂದೆ ಮರುಳಸಿದ್ಧ! ಕಂದನ ಉದ್ಧಾರಕೆಂದು ಕೈಗಳ ನೀ ಚಾಚೋ ನಮ್ಮಯ್ಯಾ!! "

ಇವರಂತೆ ಬಸವಾದಿ ಶಿವಶರಣರ ವಚನಗಳೂ ಅತ್ಯಂತ ಮನೋಹರಗಳಾಗಿವೆ. ಸಂಗೀತ ಪ್ರೇಮಿಗಳು ಅತ್ಯವಶ್ಯವಾಗಿ ಸಂಗ್ರಹಿಸಬೇಕಾದ ಗ್ರಂಥ. ಲೇಖಕರಲ್ಲಿ ಗ್ರಂಥಗಳು ಬೆಲೆಗೆ ದೊರೆವವು.

ಸವರಿ ಗುರುಬಸವ ಗವಾಯಿಗಳು ಈಗಾಗಲೇ ಕರ್ನಾಟಕದಲ್ಲೂ ನೈಜಾಮ ಪ್ರಾಂತದಲ್ಲೂ ತಮ್ಮ ಸಂಗೀತದಿಂದ ಹೆಸರುವಾಸಿಗಳಾಗಿದ್ದಾರೆ. ಇವರಲ್ಲಿ ವಿಶೇಷವೆಂದರೆ ತಮಗೆ ತಿಳಿದಿರುವ ಸಂಗೀತ ಮರ್ಮವನ್ನು ಗ್ರಂಥರೂಪವಾಗಿ ರಚಿಸಿರುವ ಅದ್ಭುತ ಶಕ್ತಿ. ಈ ಶಕ್ತಿಯು ದಿನೇ ದಿನೇ ಹೆಚ್ಚಿ, ಇವರಿಂದ ಅನೇಕ ಕೃತಿಗಳು ಹೊರಬೀಳಲೆಂದೂ ಶ್ರೀ ಸಾಮಗಾನಲೋಲನಾದ ಸಾಂಬನು ಸವರಿಯವರಿಗೆ ದೀರ್ಘಾಯುರಾರೋಗ್ಯಗಳನ್ನು ಕರುಣಿಸಲೆಂದೂ ಹಾರೈಸುವೆ.

(ಶ್ರೀ ಶಿವ)

# ಕರ್ನಾಟಕ - ಆಂಧ್ರ - ತಮಿಳು - ಮಹಾರಾಷ್ಟ್ರ - ಹಿಂದೀ ಮುಂತಾದ ನಾನಾಭಾಷೆಯ ಪ್ರಾಂತದ ಸಕಲ ವೀರಶೈವ ವಿದ್ವಾಂಸರಲ್ಲಿ ವಿಜ್ಞಾಪನೆ

(ಪ್ರಕಟನೆಯ ನಂ. ೧)

ಅ। ಭಾ। ವೀ। ವಿ। ಸಂಘದ ಸೆಕ್ರೆಟರಿ:-ಶ್ರೀ ವಾಗೀಶ ಶಿವಾಚಾರ್ಯರಿಂದ

ಅಖಿಲ ಭಾರತ ವೀರಶೈವ ವಿದ್ವಾಂಸರೇ ! ಇತ್ತ ಲಕ್ಷಕೊಡಿರಿ !! ನಮ್ಮ ಪವಿತ್ರವಾದ ವೀರಶೈವ ಸಿದ್ಧಾಂತವು ಸೇತು ಸೀತಾಚಲ ಪರ್ಯಂತವಾಗಿ ಹರಡಿರುವುದೆಂಬುದನ್ನು ನೀವು ಬಹುಕಾಲದಿಂದ ಒಪ್ಪುತ್ತ ಬಂದಿದ್ದೀರಿ. ಆದರೆ ಕಾಲಚಕ್ರದ ವಿಷಮವಾತಾವರಣದಲ್ಲಿ ಈಗ ಈ ಸಿದ್ಧಾಂತವು ಎಷ್ಟು ಅವನತಿಗೆ ಬಂದಿದೆ ಎಂಬುದನ್ನು ಈಗ ನೀವೆಲ್ಲರೂ ತಿಳಿದಿದ್ದೀರಿ. ಆ ಎಲ್ಲಾ ಲೋಪಗಳನ್ನು ಸುಧಾರಿಸಿಕೊಳ್ಳಬೇಕಾದರೆ ನಮ್ಮಲ್ಲಿ ಐಕ್ಯತೆ ಬೇಕಷ್ಟೇ! ಆ ಐಕ್ಯತೆಗಾಗಿ ಅಖಿಲ ಭಾರತ ವೀರಶೈವ ವಿದ್ವಾಂಸರೆಲ್ಲರೂ ಏಕತ್ರ ಸೇರಿ ಪರಸ್ಪರ ಪ್ರೇಮ ಮೈತ್ರಿಯಿಂದ ನಿರ್ಣಯಗಳನ್ನು ಮಾಡಿಕೊಂಡು ಅದರಂತೆ ಪ್ರಚಾರಿಸಿ ನಡೆಯಬೇಕಾಗುವುದು. ಅದಕ್ಕಾಗಿ ಅಖಿಲ ಭಾರತ ವೀರಶೈವ ವಿದ್ವತ್ಸಂಘದ ಸ್ಥಾಪನೆಯು ಬಹುದಿನಗಳ ಹಿಂದೆಯೇ ಆಗಬೇಕಾಗಿದ್ದಿತು. ಇದೀಗ ಅಂತಹ ಸುಸಮಯವೊದಗಿದೆ. ಮತೋದ್ಧಾರ ಕಾರ್ಯದಲ್ಲಿ ತತ್ಪರರಾದ ಉಜ್ಜಯಿನೀ ಸದ್ಧರ್ಮ ಸಿಂಹಾಸನಾಧಿಪತಿಗಳಾದ ಶ್ರೀ ೧೦೮ ಜಗದ್ಗುರು ಸಿದ್ಧೇಶ್ವರ ರಾಜದೇಶಿಕೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳವರು ಈ ವಿದ್ವತ್ಸಂಘವನ್ನು ಪೋಷಿಸುವುದಾಗಿ ಅಭಿವಚನವಿತ್ತು ಈಗ ತಮ್ಮ ಸಿಂಹಾಸನದ ಮಠದಲ್ಲಿ ಆಶ್ರಯವನ್ನೂ ಕೊಟ್ಟಿರುವುದು ಸರ್ವರಿಗೂ ಸಂತೋಷವನ್ನುಂಟು ಮಾಡುವ ವಿಷಯವಾಗಿದೆ.

ಈ ವಿದ್ವತ್ಸಂಘದಲ್ಲಿ ಸದಸ್ಯರೆಂತಲೂ ಸನ್ಮಾನ್ಯ ಸಭಾಸದರೆಂತಲೂ ೨ ವರ್ಗಗಳನ್ನೇರ್ಪಡಿಸಿದೆ. ನಮ್ಮ ಸೆಕ್ರೆಟರಿ ಆಫೀಸಿನಲ್ಲಿ ಪ್ರಿಂಟಾದ ಅರ್ಜಿ ಫಾರಂಗಳು ದೊರೆಯುವವು. ಸದಸ್ಯರಾಗಬಯಸುವವರು ಪಂಡಿತರೇ ಇರಲಿ ಪಂಡಿತರಲ್ಲದವರೇ ಇರಲಿ- ಸರ್ವರೂ ಸದಸ್ಯರಾಗಲು ಬರುತ್ತದೆ- ಇಂಥವರು ಇಲ್ಲಿಗೆ ಪತ್ರ ಬರೆದು ಅರ್ಜಿ ಫಾರಂ ತರಿಸಿಕೊಂಡು ಅವುಗಳನ್ನು ಭರ್ತಿಮಾಡಿ ನಾಲ್ಕಾಣೆ ಸ್ಟಾಂಪಿನೊಡನೆ ನಮ್ಮ ಆಫೀಸಿಗೆ ಕಳುಹಿಸಬೇಕು. ಆ ಮೇಲೆ ಅವರಿಗೆ ರಸೀತಿಯನ್ನು ಕಳುಹಿಸಲಾಗುವುದು

ಸನ್ಮಾನ್ಯ ಸಭಾಸದರಾಗಬಯಸುವವರಿಗೆ ಕೆಲವು ನಿರ್ಬಂಧಗಳುಂಟು. ಆ ಅರ್ಜಿಗಳಿಗೆ ಬರೆದುಕೊಳ್ಳುವವರು ಯಾವುದಾದರೊಂದು ಶಾಸ್ತ್ರದಲ್ಲಿ ಪಂಡಿತರಾದವರಿರಬೇಕು. ಪರೀಕ್ಷೆಗಳಲ್ಲಿ ತೇರ್ಗಡೆಹೊಂದಿರಲಿ ಅಥವಾ ಅಲ್ಲಿಯವರೆಗೆ ಓದಿರಲಿ ಅಥವಾ ಫೇಲಾಗಿರಲಿ ಇವರೆಲ್ಲರೂ ಸನ್ಮಾನ್ಯ ಸದಸ್ಯರಾಗಲು ಬರುವುದು. ಈ ಎಲ್ಲಾ ವಿಚಾರಗಳನ್ನೂ ಅರ್ಜಿಫಾರಂನಲ್ಲಿ ಕೇಳಿರುತ್ತದೆ. ಆ ಪ್ರಕಾರ ಅವನ್ನು ತುಂಬಿ ಕಳುಹುವಾಗ ಇವರೂ ಕೂಡ ನಾಲ್ಕಾಣೆ ಸ್ಟಾಂಪ್ ಕಳುಹಬೇಕಾಗುವುದು. ಇವರ ಅರ್ಜಿ ಮುಟ್ಟಿದೊಡನೆಯೇ ಸದಸ್ಯರಿಗೆ ಕಳುಹುವಂತೆ ಇವರಿಗೂ ರಸೀದಿಯನ್ನು ಕಳುಹಲಾಗುವುದು. ಸನ್ಮಾನ್ಯಸಭಾಸದರಾಗುವವರು ಪುನಃ ಸದಸ್ಯರಾಗುವ ಆವಶ್ಯಕತೆ ಏನೂ ಇಲ್ಲ.

ಪತ್ರವ್ಯವಹಾರವನ್ನು ಮಾಡುವಾಗ ತಮ್ಮ ಗ್ರಾಮದ ಪೋಸ್ಟು ಮುಂತಾದವನ್ನು ಸ್ಪಷ್ಟವಾಗಿ ಬರೆಯಬೇಕು.

ನೀವು ಸದಸ್ಯರೋ ಸನ್ಮಾನ್ಯ ಸದಸ್ಯರೋ ಆಗುವುದಕ್ಕಾಗಿ ಕಳುಹುವ ನಾಲ್ಕಾಣೆ ಪ್ರತಿವರ್ಷವೂ ಕೊಡಬೇಕಾಗುವುದು, ಆ ಹಣದಲ್ಲಿ ನಿಮಗೆ ಪ್ರತಿವರ್ಷದ ಸಂಘದ ರಿಪೋರ್ಟು ನಿಯಮಾವಲಿ ಅರ್ಜಿಫಾರಂ ಮುಂತಾದವುಗಳನ್ನು ಕಳುಹುವುದಾಗುತ್ತದೆ.

ಈ ವಿದ್ವತ್ಸಂಘದ ಸದಸ್ಯರೋ ಸಭಾಸದರೋ ಆಗುವ ವಿಷಯದಲ್ಲಿ ಯಾವ ಪಾಕ್ಷಿಕ ಭೇದವೂ ಪಂಗಡಭೇದವೂ ಭಕ್ತ ಮಹೇಶ್ವರರ ಭೇದವೂ ಗಣನೀಯವಾಗುವುದಿಲ್ಲ. ಈ ವಿಚಾರದಲ್ಲಿ ಸರ್ವ ವೀರಶೈವರೂ ಹಕ್ಕುದಾರರಾಗುವರೆಂಬಂಶವನ್ನು ಇಲ್ಲಿ ಸ್ಪಷ್ಟಪಡಿಸಿದೆ.

ನಾಲ್ಕಾಣೆ ಸ್ಟಾಂಪಿನೊಡನೆ ಅರ್ಜಿ ಫಾರಂಗಾಗಿ ಬೇಗನೇ ಪತ್ರ ಬರೆಯಿರಿ. ನಿಯಮಾವಲಿಯು ಅದರ ಜೊತೆಯಲ್ಲಿ ಕಳುಹಿಸಲ್ಪಡುವುದು,

ಕನ್ನಡ ತೆಲಗು ಮರಾಠಿ ಹಿಂದೀ ಪತ್ರಿಕೆಯವರು ಈ ಲೇಖವನ್ನು ತಮ್ಮ ಪತ್ರಿಕೆಗಳಲ್ಲಿ ಪ್ರಕಟಿಸುವಮೂಲಕ ವಿದ್ವತ್ಸಂಘದ ಉನ್ನತಿಗೆ ಕಾರಣರಾಗಬೇಕಾಗಿ ಕೋರಿದೆ. ಈ ಕೆಳಗಿನ ಅಡ್ರಸ್ಸಿಗೆ ಬರೆಯಿರಿ

ಅಡ್ರೆಸ್ :—

ಸೆಕ್ರೆಟರಿ
ಅಖಿಲ ಭಾರತ ವೀರಶೈವ ವಿದ್ವತ್ಸಂಘ
ಆಫೀಸ್
ಶ್ರೀ ವೀರಶೈವ ಧರ್ಮಾಲಯ, ಧರ್ಮರಾಜ್ಯ ಪ್ರಿಂಟಿಂಗ್ ಪ್ರೆಸ್
ಹರಿಹರ

—( ಶ್ರೀ )—

# ಶಂಭುದೇವಾಂಗ ಪುರಾಣ

## 'ಗದ್ಯ'

[ಸ್ಕಂದ ಪುರಾಣಶಾಖಾಂತರ್ಗತ]



ಸುಶೋಧಕರು:—

ಕಾವ್ಯತೀರ್ಥ, ಸಾಹಿತ್ಯಾಚಾರ್ಯ,

ವೇದಾಂತಾಚಾರ್ಯ, ವರಕವಿ,

ಮು॥ ಮ॥ ಶ್ರೀ ವಾಗೀಶ ಶಿವಾಚಾರ್ಯರು.



ಪ್ರಕಾಶಕರು:—

ಯಂ. ವ್ಹಿ. ಹಿರೇಮಠ. ಸಂಪಾದಕ:-

'ಧರ್ಮರಾಜ್ಯ' ಧರ್ಮರಾಜ್ಯ ಪ್ರೆಸ್,

ಹರಿಹರ.

1940.

॥ ಶ್ರೀ ಗಣೇಶಾಯ ನಮಃ ॥

# ಪ್ರ ಸ್ತಾ ವ ನೆ.

ಕರ್ನಾಟಕ ಸಾಹಿತ್ಯದೃಷ್ಟಿಯಿಂದ ಪ್ರಾಚೀನಚರಿತ್ರೆಯು ಬಹಳ ಹಿಂದುಳಿದಿದೆ. ಇದಕ್ಕೆ ಮೂಲ ಕಾರಣವೆಂದರೆ ಸಂಸ್ಕೃತ ಭಾಷೆಯಕಡೆಗೆ ಕನ್ನಡಿಗರು ಲಕ್ಷ್ಯಕೊಡದಿರುವುದು ಮತ್ತು ಆಭಾಷೆಯಪ್ರಾಚೀನ ಲಿಪಿಗಳನ್ನು ಶೋಧಮಾಡದಿರುವುದು ಮುಂತಾಗಿದೆ. ಸಕಲ ಭಾಷೆಗಳಿಗೂ ಸಂಸ್ಕೃತ ಭಾಷೆಯು ತಾಯಿಯೆಂಬುದನ್ನು ಸಂಸ್ಕೃತವನ್ನರಿಯದ ಇನ್ನೂ ಅನೇಕ ಕನ್ನಡಿಗರು ತಿಳಿದುಕೊಂಡಿಲ್ಲ. ಇದಕ್ಕೆ ಅವರ ಅಸಂಸ್ಕೃತಿಯು ಬಲವಾದ ಪರಂಪರೆಯೇ ಕಾರಣವಾಗಿದೆ ಎಂದು ಬೇರೆ ಹೇಳಬೇಕಾಗಿಲ್ಲ.

ನಾವು ಕರ್ನಾಟಕ ಇತಿಹಾಸವನ್ನು ಮತ್ತು ಚರಿತ್ರೆಗಳನ್ನು ಕಟ್ಟಬೇಕಾದರೆ ಪ್ರಾಚೀನ ಸಂಸ್ಕೃತ ಗ್ರಂಥಗಳ ಅಧ್ಯಯನವು ಆವಶ್ಯಕವಾದುದು. ಕನ್ನಡಿಗರ ದೃಷ್ಟಿಯು ಇತ್ತೀಚೆಗೆ ಆಭಾಷೆಯಕಡೆಗೆ ಹೊರಳುತ್ತಿರುವುದು ಪ್ರಶಂಸಾರ್ಹವಾದ ಸಂಗತಿಯಾಗಿದೆ. ಹಿಂದಿನ ಐತಿಹಾಸಿಕ ಶೋಧನೆಗೂ, ಇಂದಿನ ಶೋಧನೆಗೂ ಮಹದಂತರವಿದೆ ಉದಾಹರಣಾರ್ಥವಾಗಿ ಪ್ರಾಚೀನ ಕವಿಗಳ ಯಾವುದೋ ಒಂದು ಕಾವ್ಯವನ್ನು ತೆಗೆದುಕೊಂಡರೂ ಚರಿತ್ರಭಾಗಕ್ಕಿಂತಲೂ ಅದರಲ್ಲಿ ವರ್ಣನಾಭಾಗವೇ ಹೆಚ್ಚಾಗಿರುವುದು ಸ್ವಾಭಾವಿಕವಾಗಿದೆ. ಆದರೆ ಈಚಿನವರು ವರ್ಣನಾಭಾಗವು ವಿಶೇಷವಾಗಿರುವ ಆಕಾವ್ಯಕ್ಕೆ ಕಟ್ಟುಕಥೆಯೆಂದು ಊಹಿಸಿ ಸಾಹಿತ್ಯಕ್ಕೆ ಬಹಳ ಅಪಕಾರವನ್ನು ಮಾಡಿದ್ದಾರೆ. ಇತ್ತೀಚಿನ ಕುಶಲಮತಿಗಳಾದ ಕೆಲವು ಪಂಡಿತರು ಪುರಾಣಾಂಶಗಳಲ್ಲಿಯೂ ಕೂಡ ಚಾರಿತ್ರಕ ಭಾಗಗಳನ್ನು ಕಂಡುಹಿಡಿದು ಮಹೋಪಕಾರವನ್ನು ಮಾಡುತ್ತಿದ್ದಾರೆ. ಮದ್ರಾಸ್, ಮೈಸೂರು ಮುಂತಾದ ಕೆಲವು ಪಟ್ಟಣಗಳಲ್ಲಿ ಸರ್ಕಾರದವರು ದೊಡ್ಡ ದೊಡ್ಡ ಲೈಬ್ರರಿಗಳನ್ನು ಸ್ಥಾಪಿಸುವುದರಮೂಲಕ ಅನೇಕ ಪ್ರಾಚೀನ ಗ್ರಂಥಗಳನ್ನು ಸಂಗ್ರಹಿಸಿದ್ದಾರೆ. ವ್ಯಾಸಮಹರ್ಷಿಗಳು ರಚಿಸಿರುವ ಸ್ಕಂದಪುರಾಣವು ಅನೇಕ ಚರಿತ್ರಾಂಶಗಳಿಂದ ಕೂಡಿದುದಾಗಿದೆ. ಆ ಸ್ಕಂದಪುರಾಣದ ಶಾಖೆಯೆಂಬ ಹೆಸರಿನಿಂದ ಕೆಲವು ಉಪಪುರಾಣಗಳುಂಟು

ನಮಗೆ ಇತ್ತೀಚೆಗೆ ದೊರೆತ ಐತಿಹಾಸಿಕ ಅಂಶಗಳನ್ನೇ ಹೇಳುವ ಕೆಲ ಗ್ರಂಥಗಳಲ್ಲಿ ಸ್ಕಂದಪುರಾಣಶಾಖಾಶಂಭುದೇವಾಂಗಪುರಾಣವೆಂಬುದು ಒಂದಾ

ಗಿದೆ. ಈ ಪುರಾಣದ ಮೂಲವು ಅನುಷ್ಟುಪ್ ಶ್ಲೋಕಗಳ ಸಂಸ್ಕೃತಭಾಷೆಯಲ್ಲಿದೆ ಕೆಳಗೆ ಮುದ್ದಾದ ಕನ್ನಡ ಟೀಕೆಯೂ ಇದೆ ಕನ್ನಡಸಾಹಿತ್ಯದ ಉನ್ನತಿ ಹಾಗೂ ಚರಿತ್ರೆಗಳ ಪ್ರಚಾರ ಈ ದೃಷ್ಟಿಯನ್ನಿಟ್ಟುಕೊಂಡರೆ ನಮಗೆ ಸದ್ಯಃ ಈ ಪುರಾಣದ ಕನ್ನಡಟೀಕೆಯನ್ನು ಪ್ರಕಾಶನಗೊಳಿಸುವುದು ಯೋಗ್ಯವೆಂದು ಕಂಡುಬರುವುದು,

ಪ್ರಾಚೀನ ಚರಿತ್ರೆಯ ವಿಮರ್ಶಕರೊಬ್ಬರು ಈ ಪುರಾಣಕ್ಕೆ ವಿಶಾಲವಾದ ಮುನ್ನುಡಿಯನ್ನು ಬರೆದುಕೊಡಲಿಕ್ಕೆ ಒಪ್ಪಿದ್ದಾರೆ. ಈ ಗ್ರಂಥವಲ್ಲಿ ಸಕಲ ಕನ್ನಡಿಗರಿಗೂ, ಉಪಯೋಗಬೀಳುವ ಅನೇಕ ವಿಷಯಗಳಿರುವುದರಿಂದ ಹರಿಹರನಿವಾಸಿಗಳಾದ ಓದಾನವರ ಸಿದ್ಧಲಿಂಗಪ್ಪನವರ ಮಕ್ಕಳು ಶ್ರೀ ವೀರಭದ್ರಪ್ಪನವರು ಇದರ ಪ್ರಕಾಶಕ್ಕೆ ಸಹಾಯಮಾಡಿದ್ದಾರೆ. ಈ ಪುರಾಣದ ಮೂಲ ಶ್ಲೋಕಗಳ ಅಭಿಪ್ರಾಯಕ್ಕೂ ಕೆಳಗಿನ ಕನ್ನಡ ಟೀಕೆಯಅಭಿಪ್ರಾಯಕ್ಕೂ ಸಂದರ್ಭವು ಅನುಕೂಲವಾಗಿರಲೆಂಬ ಉದ್ದೇಶದಿಂದ ಪ್ರಾಮಾಣಿಕ ಪಂಡಿತರಾದ ವರಕವಿ ಶ್ರೀ ವಾಗೀಶ ಶಿವಾಚಾರ್ಯರಿಗೆ ಈ ಕಾರ್ಯವನ್ನು ಒಪ್ಪಿಸಿದ್ದಾರೆ.

ನಮ್ಮ ಧರ್ಮರಾಜ್ಯಮಾಸಪತ್ರಿಕೆಯಲ್ಲಿ ಜನಸಾಮಾನ್ಯಕ್ಕೂ ಲಾಭವಾಗಲೆಂಬ ದೃಷ್ಟಿಯಿಂದ ಸದರಿ ಶ್ರೀ ವೀರಭದ್ರಪ್ಪನವರು ಪ್ರತಿತಿಂಗಳು ತಮ್ಮ ಪತ್ರಿಕೆಯಲ್ಲಿ ಪ್ರಕಟಿಸಬೇಕೆಂಬುದಾಗಿ ಹೇಳಿದ್ದರಿಂದ ನಮ್ಮ ಧರ್ಮರಾಜ್ಯದಿಂದ ಈ ಶಂಭುದೇವಾಂಗ ಪುರಾಣವನ್ನು ವಾಚಕರಿಗೆಲ್ಲಾ ಹಂಚಲಾಗಿದೆ. ಇನ್ನು ೫೦೦ ಪ್ರತಿಗಳುಮಾತ್ರ ಬೈಂಡಾಗಿಉಳಿದಿವೆ. ವಾಚಕರೆಲ್ಲರೂ ಈ ಸಾಹಿತ್ಯ ಸೇವೆಯಲ್ಲಿ ಹೆಚ್ಚಾಗಿ ಪ್ರೋತ್ಸಾಹ ಕೊಡುವುದಲ್ಲದೆಈ ಪುರಾಣದಪ್ರತಿಗಳನ್ನು ಸಂಗ್ರಹಿಸುವುದಕ್ಕೆ ಮರೆಯಬಾರದೆಂದು ಸವಿನಯ ಪ್ರಾರ್ಥನೆ.

ತಾ॥ 18—6—40.
ಶ್ರೀ ವೀರಶೈವ ಧರ್ಮಾಲಯ
ಹರಿಹರ.

ತಮ್ಮ
ಸಂಪಾದಕ:— ಧರ್ಮರಾಜ್ಯ,
ಧರ್ಮರಾಜ್ಯ ಪ್ರಿಂಟಿಂಗ್ ಪ್ರೆಸ್,
ಹರಿಹರ.

# DHARMARAJ.

# ಧರ್ಮರಾಜ್ಯ

ಆಷಾಢ — ಶ್ರಾವಣ

ಈ ಎರಡೂ ಸಂಚಿಕೆ ಸೇರಿವೆ.

ಕೃತದೊಳಾ ತ್ರೇತೆಯೊಳು ದ್ವಾಪಾರದೊಳುಂ ಕ್ರಮದೆ ।
ಮತಿಯುಕ್ತ " ನಲ-ರಾಮ-ಧರ್ಮ " ನೃಪರಿಂ ॥
ಅತಿಯಶವನಾಂತು ಬಾಳಿದ ಕಲಿಯೊಳಿಂ " ಕೃಷ್ಣ - ।
ಕ್ಷಿತಿಪಾಲನಿಂ " ಬಾಳುಗೆ ಧರ್ಮರಾಜ್ಯ " ! ॥

" ಅಹಿಂಸೆಯಿಲ್ಲದ [illegible] ಪಾಪಕರ.
ನಾನು ಐಕ್ಯವನ್ನು ಸ್ಥಾಪಿಸಿಕೊಳ್ಳುವುದು ಅತ್ಯಾವಶ್ಯಕವಿದೆ.
ಸಹಾಯ ಶೂನ್ಯರ ಸೇವೆ ಮಾಡುವದೇ ಧರ್ಮವು. "

[ ಗಾಂಧಿಜಿ. ]

## ವಿಷಯಾನುಕ್ರಮಣಿಕೆ



## ಇತ್ತ ಲಕ್ಷ್ಯಿಸಿರಿ!

ನಮ್ಮೀ ಧರ್ಮರಾಜ್ಯದಲ್ಲಿ ಇನ್ನು ಮುಂದೆ ಅಮೂಲ್ಯವಾದ ನಾನಾ ವಿಷಯ ಪ್ರತಿಪಾದಕಗಳಾದ ಗ್ರಂಥಗಳು ಕ್ರಮವಾಗಿ ಪ್ರಕಟವಾಗುವವು ಈ ತಿಂಗಳಲ್ಲಿ ಚತುರಾಚಾರ್ಯ ಪುರಾಣವು ಪ್ರಾರಂಭವಾಗಿದೆ. ಆದುದರಿಂದ ಚಂದಾದಾರರೆಲ್ಲರೂ ಎಲ್ಲಾ ಸಂಚಿಕೆಗಳನ್ನು ಕಾದಿಟ್ಟು ಕೊನೆಗೆ ಆಯಾಗ್ರಂಥಗಳ ಪುಟಸಂಖ್ಯೆಯಂತೆ ಜೋಡಿಸಿ ಬೈಂಡುಮಾಡಿಸಿದರೆ ಗ್ರಂಥವು ಸಿದ್ಧವಾಗುವುದು, ಸಂಚಿಕೆಯನ್ನು ಕಳಕೊಂಡರೆ ಮತ್ತೆ ಸಂಗ್ರಹಿಸುವುದು ಕಷ್ಟವಾಗುವುದು. ಅಲ್ಪ ವ್ಯಯದಲ್ಲಿ ಬೆಲೆಬಾಳುವ ಉದ್ಗ್ರಂಥಗಳನ್ನು ಸಂಗ್ರಹಿಸುವುದನ್ನು ಯಾರು ಬಯಸುವುದಿಲ್ಲ?

ಆದುದರಿಂದ ಸರ್ವರೂ ತಮ್ಮ ತಮ್ಮ ಮಿತ್ರರಲ್ಲಿ ಪ್ರೋತ್ಸಾಹಿಸಿ ಈ ಪತ್ರಿಕೆಗೆ ಚಂದಾದಾರರನ್ನೂ ಮಾಡಿಸುವಿರಾಗಿ ಆಶಿಸುತ್ತೇವೆ.

# ಧರ್ಮರಾಜ್ಯ

| ಸಂಪುಟ ೨. | ವಿಕ್ರಮ ಸಂವತ್ಸರ ಆಷಾಢ | ಸಂಚಿಕೆ ೪. |
|---|---|---|

## ಶ್ರೀಶೈಲ ಸೂರ್ಯಸಿಂಹಾಸನದ ನೂತನಜಗದ್ಗುರು ಮಹಾಸ್ವಾಮಿಗಳವರು, ತಮ್ಮ ಅಧಿಕಾರಸಮಯದಲ್ಲಿ ಅಪ್ಪಣೆಕೊಡಿಸಿದ ಸಂದೇಶ.

ಶ್ರೀಶೈಲಮಲ್ಲಿಕಾರ್ಜುನ ಸ್ವಾಮಿಯ ಅಘಟಿತ ಘಟನೆಯು ಅವರ್ಣನೀಯವಾದುದು. ಶ್ರೀಪಂಡಿತಾರಾಧ್ಯ ಜಗದ್ಗುರುವಿನ ಮಹಿಮೆಯು ಅಗಾಧವಾದುದು. ದೈವಬಲವು ತೆರೆಯಮರೆಯಲ್ಲಿರುವ ಸೂತ್ರಧಾರಿಯಂತೆ ಗೋಪ್ಯವಾಗಿದ್ದು, ಒಮ್ಮೆಲೇ ಹೊರಬಿದ್ದು ಸರ್ವರಿಗೂ ಅತ್ಯಾಶ್ಚರ್ಯವನ್ನುಂಟುಮಾಡುವುದು. ಅದರ ಆಗು ಹೋಗುಗಳು ಹೀಗೆಯೆ ಎಂದು ನಿರ್ಣಯಿಸಲು ಯಾರಿಗೂ ಸಾಧ್ಯವಿಲ್ಲ. ಅಂತಹ ಯೋಗವೇ ಈಗ ನಮ್ಮನ್ನು ಆವರಿಸಿದೆ.

೧೯೩೩ ನೇ ಇಸ್ವಿಯಲ್ಲಿ ಈ ಪೀಠಾರೋಹಣಕ್ಕಾಗಿ ಜಗದ್ವಿಖ್ಯಾತ ಯೋಗೀಶ್ವರರಾದ ಉಜ್ಜಯಿನಿ ಸದ್ಧರ್ಮಸಿಂಹಾಸನಾಧೀಶ ಶ್ರೀ ೧೦೮ ಜಗದ್ಗುರು ಸಿದ್ಧಲಿಂಗ ಶಿವಾಚಾರ್ಯ ಮಹಾಸ್ವಾಮಿಗಳವರು ನಮ್ಮ ನಾಮನಿರ್ದೇಶವನ್ನು ಮಾಡಿ ಆಗಲೇ ಅಧಿಕಾರ ನಡೆಯಿಸಬೇಕೆಂದು ಬಹಳವಾಗಿ ಯತ್ನಿಸಿದರು. ಆದರೆ ನಾವು

ಅವ್ಯಾಗ ಕೇವಲ ಸಾಹಿತ್ಯ ಮಧ್ಯಮ ಪರೀಕ್ಷೆಯಲ್ಲಿ ಸೊತ್ತ, ತೀರ್ಗಡೆ ಯನ್ನಾಗಿದ್ದರಿಂದ ಪಂಡಿತಾರಾಧ್ಯ ಪೀಠಕ್ಕೆ ಬೇಕಾಗುವ ಪಾಂಡಿತ್ಯವು ನಮ್ಮಲ್ಲಿಲ್ಲವೆಂದು ಅಧಿಕಾರಕ್ಕೆ ನಾವು ಒಪ್ಪಲಿಲ್ಲ. ಈ ವಿಷಯ ಶ್ರೀಮುಖರಿಗೆ ಒಪ್ಪಿಗೆಯಾಗಲಿಲ್ಲ. ಆದುದರಿಂದ ಮುಂದೆ ಪಂಡಿತರಾದ ಮೇಲಾದರೂ ತಮ್ಮ ವಚನವನ್ನು ಪಾಲಿಸುವಂತೆ ಒಪ್ಪಿಸಿಕೊಂಡರು. ಇದು ಪಂ|| ಶ್ರೀ ಕಾಶೀನಾಥ ಶಾಸ್ತ್ರಿಗಳವರ ಸಮಕ್ಷಮ ಬಾಶಿ ಮೋಕ್ಷಾಪುರದಲ್ಲಿ ನಡೆದವಿಷಯ. ಆ ಮಹಿಮರ ಕೃಪಾವಿಶೇಷದಿಂದ ನಮ್ಮ ಈ ಪಂಡಿತ ಪರೀಕ್ಷೆಗಳು ನಿರಾಯಾಸವಾಗಿ ತೀರ್ಗಡೆಯಾದು ವಲ್ಲದೆ ನಮಗೇನೇ ಆಶ್ಚರ್ಯವನ್ನುಂಟುಮಾಡುವ ಕಾವ್ಯಲೇಖನ ಕರ್ತೃತ್ವಶಕ್ತಿಯು ಶೀಘ್ರವಾಗಿ ಉಂಟಾದವು. ೧೯೩೫ನೇ ಇಸ್ವಿಯ ಭಾದ್ರಪದ ಗಣೇಶಚತುರ್ಥಿಗೆ ಸರಿಯಾಗಿ ಕಾಶಿಯಿಂದ ಹುಬ್ಬಳ್ಳಿಗೆ ಬಂದು ಮುಟ್ಟಿದೆವು. ದೇಶಕ್ಕೆ ಬಂದು ಮುಟ್ಟಿದಮೇಲೆ ನಮ್ಮ ಕಾರ್ಯಕ್ರಮಗಳನ್ನು ಬೇರೆ ವಿಧವಾಗಿ ಜರುಗಿಸಬೇಕಾಗಿಬಂದಿತು. ಆ ಕಾರ್ಯವು ಅಖಂಡ ವೀರಶೈವ ಸಮಾಜದ ಉನ್ನತಿ ಹಾಗು ಕರ್ನಾಟಕಸಾಹಿತ್ಯಸೇವೆಗೆ ಸಂಬಂಧಪಟ್ಟದ್ದು ಆ ಕಾರ್ಯದ ಫಲ ಸ್ವರೂಪವಾಗಿ ಹರಿಹರದಲ್ಲಿ "ಶ್ರೀ ವೀರಶೈವ ಧರ್ಮಾಲಯ" ವೆಂಬ ಸಂಸ್ಥೆಯು ಏರ್ಪಟ್ಟಿತು. ಅಲ್ಲಿಯೇ "ಧರ್ಮರಾಜ್ಯ ಪ್ರಿಂಟಿಂಗ್ ಪ್ರೆಸ್" ಸ್ಥಾಪಿತವಾಯಿತು. ಇದು ತಾ|| ೨೨-೧೧-೧೯೩೬ನೇ ಇಸ್ವಿಯಲ್ಲಿ ಪ್ರಾರಂಭವಾಯಿತು.

"ಧರ್ಮರಾಜ್ಯ"ವೆಂಬ ಮಾಸಪತ್ರಿಕೆಯು ಈ ಸಂಸ್ಥೆಯಿಂದಲೇ ಹೊರಡುತ್ತಿದೆ ಈ ಕಾರ್ಯದಲ್ಲಿ ತತ್ಪರರಾಗಿದುವುದರಿಂದ ಶ್ರೀಶೈಲ ಸಿಂಹಾಸನವು ನಮ್ಮನ್ನು ವಿಶ್ರಾಂತಿಗೋಸುಗ ಬಿಡಬಹುದೆಂದೂ ಬೇರೆ ಪಟ್ಟವನ್ನು ಸ್ವೀಕರಿಸಬಹುದೆಂದೂ ಪೂರ್ಣವಾಗಿನಂಬಿದ್ದೆವು ಆದರೆ ಆಸಂಬಿಗೆಯು ಗತಿಸಿದ ಉಜ್ಜಯಿನಿ ಶ್ರೀ ಜಗದ್ಗುರುಗಳವರಿಗೂ ಶ್ರೀಶೈಲಮಲ್ಲಿಕಾರ್ಜುನನಿಗೂ ಜಗದ್ಗುರು ಪಂಡಿತಾರಾಧ್ಯನಿಗೂ ಒಪ್ಪಿಗೆಯಾಗಲಿಲ್ಲವೆಂದು ತೋರುತ್ತದೆ.

ಗತಿಸಿದ ಉಜ್ಜಯಿನಿ ಜಗದ್ಗುರುಗಳವರೇ ಪಂಡಿತನಿಪ್ಪಿ ಅವತಾರದಿಂದ ಬಂದು ಈ ಅಧಿಕಾರವನ್ನು ನಮಗೆ ವಹಿಸಬೇಕೆಂದು ಸಂಕಲ್ಪಿಸಿದ್ದರೋ ಎಂಬಂತೆ ಅವರ ಉತ್ತರಾಧಿಕಾರವನ್ನು ವಹಿಸಿದ್ದಿಪ್ಪ ನಿಮ್ಮೆಲ್ಲರಿಗೆ ಪ್ರತ್ಯುಪಕಾರಿಗಳಾದ ಉಜ್ಜಯಿನಿ ಶ್ರೀ ಗಂಗಾಧರಲಿಂಗ

ಪ್ಪಗಳು ಸಿದ್ಧೇಶ್ವರ ರಾಜದೇಶಿಕೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳವರು ಈ ಕಾರ್ಯಭಾರವನ್ನು ವಹಿಸಿ ನಮಗೆ ನಮ್ಮ ಪೀಠಾಚಾರ್ಯರಾದ ಶ್ರೀ ೧೦೮ ಜಗದ್ಗುರು ನಾಗಲೋಟಿ ಶಿವಶಕ್ತಿ ಶಿವಾಚಾರ್ಯರಿಂದ ಅಧಿಕಾರವನ್ನು ಕೊಡಿಸಿ ನಮ್ಮ ಮೇರೆ ಸನ್ನಾಹದ ದೊಡ್ಡ ಭಾರವನ್ನೇ ಹೊರಿಸಿದರೆಂಬುದು ನಮಗೂ ನಿಮಗೂ ವೇದ್ಯವಾದ ಅಂಶವೇ ಆಗಿರುತ್ತದೆ.

ಕನ್ನಡನಾಡಿನಲ್ಲಿ ಈ ಪೀಠದ ವಿಷಯವಾಗಿ 'ಪರ್ವತದ ವಿಪತ್ತು' ಎಂದು ಪ್ರತೀತಿಯಿದೆ. ಈ ಪ್ರತೀತಿಯು ಬಹುಭಾಗದಿಂದ ಸತ್ಯವೆಂತಲೇ ತೋರುವುದು. ಹೀಗಾಗಲು ಕಾರಣವೇನೆಂದು ಹುಡುಕಲು ಹೋದರೆ ಅದರ ಮೂಲವೇ ತೋರದಂತಾದರೂ ಇಷ್ಟನ್ನು ಮಾತ್ರ ಹೇಳಬಹುದು. ಈ ಪೀಠವು ಸಕಲಭಾಷಾವಾರ ಪ್ರಾಂತದವರೊಡನೆ ಕೆಲಕಾಲದಿಂದೀಚೆಗೆ ಸಮರಸವಾಗಿ ನಡೆಯುತ್ತಿಲ್ಲ. ಪ್ರಯುಕ್ತ ಪವಿತ್ರಭಾವನೆ ಇನ್ನೊಂದುಮಾತ್ರವಲ್ಲದೆ ತೋರುವುದು "ಪರ್ವತದ ವಿಪತ್ತು" ಎಂಬ ಪ್ರಚಾರವು ಎಂದಿನಿಂದ ಈ ಪೀಠಕ್ಕೆ ಸಂದಿತೋ ತಿಳಿಯದಾಗಿದೆ. ಶ್ರೀಶೈಲ ಮಲ್ಲಿಕಾರ್ಜುನನ ಭಕ್ತರು ತಮ್ಮ ಪೀಠಕ್ಕೆ ಬಂದಿರುವ ಈ ಅಪವಾದವನ್ನು ಕಾರ್ಯತಃ ಅಡಗಿಸಲು ಸಮರ್ಥರಾಗಿದ್ದಾರೆಂಬುದು ಜಗತ್ಪ್ರಸಿದ್ಧವಾಗಿದೆ. ಈ ಪ್ರಯತ್ನದಲ್ಲಿ ಪ್ರಾಮುಖ್ಯವಾಗಿ ಭಾಗ ವಹಿಸಲೋಸುಗ ನೀವೆಲ್ಲರೂ ಸೇರಿ ಇಂದು ಕಂಕಣಧಾರಣಮಾಡಿದ್ದೀರಿ. ಇಂದಿನಿಂದ ಅಹೋರಾತ್ರಿ ಪೀಠದ ಕೀರ್ತಿಗೆ ಸಮಾಜದ ಸೇವೆಗೆ, ದುಡಿಯಬೇಕಾಗುವುದೆಂಬುದನ್ನು ಪೂರ್ಣವಾಗಿ ತಿಳಿದುಕೊಂಡಿದ್ದೇವೆ. ಈ ಪೀಠಾಧಿಕಾರವನ್ನು ವಹಿಸುವ ವಿಚಾರವಾಗಿ ಇಷ್ಟು ಅವಸರವಾಗುವುದೆಂದು ಯಾರೂ ಭಾವಿಸಿದ್ದಿಲ್ಲ. ಶ್ರೀ ಜಗದ್ಗುರುಗಳವರಿಗೆ ಅಧಿಕವಾದ ಕಾಹಿಲೆಯುಂಟಾಗಿರುವುದೇ ಇಷ್ಟು ಅವಸರಕ್ಕೆ ಕಾರಣವಾಯಿತೆಂಬುದು ತಮ್ಮೆಲ್ಲರಿಗೂ ಗೊತ್ತಿದೆ. ಶ್ರೀ ಗಿರಿಮಲ್ಲಿಕಾರ್ಜುನನು ನಮ್ಮ ಜಗದ್ಗುರುಗಳವರಿಗೆ ಶೀಘ್ರವಾಗಿ ಆರೋಗ್ಯವನ್ನಿತ್ತು ಇನ್ನು ಕೆಲವು ಕಾಲ ಜೀವಿಸುವಂತೆ ಮಾಡಿ ಶ್ರೀ ಸಂಸ್ಥಾನದ ಅನೇಕ ವಿಷಯಗಳ ಅನುಭವವು ಅವರಿಂದ ದೊರೆಯುವಂತಾಗಲೆಂದು ಆ ಪರಮಾತ್ಮನನ್ನು ಮೊರೆಹೊಕ್ಕು ಬೇಡಿಕೊಳ್ಳುತ್ತೇವೆ.

ಪಂಚ ಪೀಠಗಳಲ್ಲಿ ನಮ್ಮ ಈ ಶ್ರೀಶೈಲ ಪೀಠವು ಬಹಳ ಹಿಂದುಳಿದಿದೆ ಎಂಬುದನ್ನು, ಇತರ ಪೀಠಗಳಂತೆ ಶೀಘ್ರವಾಗಿ ಮುಂದಕ್ಕೆ ತರಬೇಕೆಂದು ಈ ಪೀಠದ ಮೇಲೆ ಭಕ್ತಿಯುಳ್ಳ ಮಲ್ಲಿಕಾರ್ಜುನನ ಭಕ್ತ

ರನೇಕರು ಅಪೇಕ್ಷಿಸುತ್ತಿರುವುದು ಸರಿಯಷ್ಟೇ ಹಾಗೆಯೇ ನಾಲ್ಕು ಪೀಠಾಚಾರ್ಯರು ಅಪೇಕ್ಷಿಸುತ್ತಿದ್ದರು. ಈಗ ಪೀಠದಮೇಲೆ ನೂತನಾಧಿಕಾರಿಗಳು ಬಂದು ಅಲಂಕರಿಸಿದರೆಂದಮಾತ್ರಕ್ಕೆ ಅವರ ಬಯಕೆಯು ಫಲಿಸಿದಂತಾಗಲಿಲ್ಲ. ಈ ನಮ್ಮ ಪೀಠಕ್ಕೆ ಇರತಕ್ಕ ಕುಂದು ಕೊರತೆಗಳೇನು, ವಾರ್ಷಿಕ ಆದಾಯ ವ್ಯಯಗಳೇನು, ಚರ ಸ್ಥಿರ ಆಸ್ತಿಗಳ ವಿಚಾರ ಮುಂತಾದವುಗಳೆಲ್ಲವನ್ನೂ ಕೂಲಂಕಷವಾಗಿ ತಿಳಿದು ಸರ್ವವಿಧದಲ್ಲಿಯೂ ಚಿಕ್ಕವರಾದ ನಮಗೆ ಸಹಾಯಕರಾಗಿ ನಿಂತು ಬೆಂಬಲವಿತ್ತರೆ ಮಾತ್ರ ಶ್ರೀಶೈಲ ಪೀಠೋದ್ಧಾರ ವಿಷಯದಲ್ಲಿ ಇವರುಗಳು ಬಹುದಿನಗಳಿಂದ ತೋರಿಸುತ್ತಿರುವ ಅಪೇಕ್ಷೆಯು ಫಲಿಸಬಹುದೆಂದು ನಾವು ಭಾವಿಸುತ್ತೇವೆ. ಈ ವಿಚಾರವಾಗಿ ಚತುರಾಚಾರ್ಯರು ಬಹಳವಾಗಿ ಕಷ್ಟಪಡುವ ಕಾರಣವಿಲ್ಲ. ಕೇವಲ ಇವರುಗಳು ದೊಡ್ಡ ಮನಸ್ಸುಮಾಡಿ ಸಹಾಯಕರಾದರೆ ಸಾಕು. ಇದರ ನಿದರ್ಶನವಾಗಿ ಈಗ ಉಜ್ಜಯಿನಿ ಪೀಠದ ಜಗದ್ಗುರುಗಳವರು ತಮ್ಮ ಕಷ್ಟನಷ್ಟಗಳನ್ನೆಲ್ಲಾ ಸಹಿಸಿಕೊಂಡು ಇಲ್ಲಿಗೆ ಆಗಮಿಸಿ ಬದ್ಧಕಂಕಣರಾಗಿ ಮಹಾಕಾರ್ಯವನ್ನು ಪೂರೈಸಿ ಮಹತ್ಕೀರ್ತಿಯನ್ನು ಸಂಪಾದಿಸಿರುವರೆಂದು ಬೇರೆ ಹೇಳಬೇಕಾಗಿಲ್ಲ. ರಂಭಾಪುರಿ ಶ್ರೀಜಗದ್ಗುರುಗಳವರು ಶುಭಾಶೀರ್ವಾದವನ್ನು ಕಾಶಿ ಕೇದಾರ ಪೀಠಗಳ ಜಗದ್ಗುರುಗಳವರು ಇಲ್ಲಿಗೆ ದೂರಾಗಿರುವುದರಿಂದ ಅವರುಗಳು ದಯಮಾಡಿಸಲು ಸಾಧ್ಯವಾಗಿಲ್ಲವೆಂಬದನ್ನು ನಾವು ನೀವೆಲ್ಲರು ಸುಲಭವಾಗಿ ಕಂಡುಹಿಡಿಯಬಹುದಾಗಿದೆ. ಅಖಿಲ ಭಾರತ ಶೈವ-ವೀರಶೈವ ಧರ್ಮರಾಜ್ಯಕ್ಕೆ ಪಂಚಪೀಠಾಧಿಪತಿಗಳು ಸಾರ್ವಭೌಮರಾಗಿದ್ದಾರೆ. ಇವರ ತತ್ವಗಳೆಲ್ಲಾ ಎಂದಿಗೂ ಒಂದೇ ವಿಧವಾಗಿದೆ. ಧರ್ಮರಾಜ್ಯದ ಸಾರ್ವಭೌಮರಾದ ಪಂಚಾಚಾರ್ಯರು ಎಂದಿಗೂ ಏಕಾಭಿಪ್ರಾಯದಿಂದಲಾಗಿ ಕಾರ್ಯಗಳನ್ನು ನಡೆಯಿಸಬೇಕಾಗಿದೆ. ಅದಕ್ಕಾಗಿ ಆಗಾಗಲೇ ಇವರುಗಳು ಒಂದೊಂದು ಉದ್ದೇಶವನ್ನಿಟ್ಟುಕೊಂಡು ಒಂದುಕಡೆ ಸೇರಬೇಕಲ್ಲದೆ ತಮ್ಮ ತಮ್ಮ ವಿಚಾರ ವಿಮರ್ಶೆಗಳನ್ನು ಏಕಾಭಿಪ್ರಾಯದಿಂದ ಬಳಸಿಕೊಳ್ಳಬೇಕು. ಇದರಿಂದ ಸಮಾಜೋದ್ಧಾರ ಕಾರ್ಯದಲ್ಲಿ ಬಹಳ ಸರಲತೆಯುಂಟಾಗುವುದು. ಈ ಹಿಂದೆ ಪಂಚಾಚಾರ್ಯ ಸಮ್ಮೇಲನವನ್ನು ನಡೆಯಿಸಿದುದು ಅದಕ್ಕಾಗಿಯೆಂಬುದು ಸರ್ವರಿಗೂ ತಿಳಿದವಿಷಯವಾಗಿದೆ.

ಗತಿಸಿದ ಉಜ್ಜಯಿನಿ ಜಗದ್ಗುರುಗಳವರು ಸವರ ಪೀಠದಲ್ಲಿ ಈ
ಸಮ್ಮೇಲನವನ್ನು ಮತ್ತೂ ಕೂಡಿಸಬೇಕೆಂದು ಸಂಕಲ್ಪಿಸಿದ್ದರು ದೈವಗತಿ
ಯು ಅದಕ್ಕೆ ಸಹಾನುಭೂತಿಯನ್ನು ಕೊಡಲಿಲ್ಲ. ಆ ಸಂಕಲ್ಪವನ್ನು
ಈಗಿನ ಜಗದ್ಗುರುಗಳಾದ ಸಿದ್ಧೇಶ್ವರರಾಜದೇಶಿಕೇಂದ್ರ ಮಹಾಸ್ವಾಮಿ
ಗಳವರು ಪೂರ್ಣಗೊಳಿಸಬೇಕೆಂದು ಯತ್ನಿಸುತ್ತಿದ್ದಾರೆ. ಪೀಠಾಧಿಪತ್ಯ
ವನ್ನು ವಹಿಸುವುದು ಆರಂಭದಲ್ಲಿ ಬಹುಸುಲಭವೆಂದುತೋರಿದರೂ ಆ
ಅಧಿಪತ್ಯದವುಪಯೋಗವನ್ನು ಕಾರ್ಯತಃಮಾಡಿತೋರಿಸುವಾಗ ಬಹಳ
ಕಠಿಣವೆನಿಸುವುದು ಆಚಾರ್ಯನ ಸತ್ವಪರೀಕ್ಷೆಕಾಲವು ಅದೇ ಎಂದು
ಹೇಳಬಹುದು. ಹೀಗೆ ಅತ್ಯಂತ ಜವಾಬುದಾರಿಯುಳ್ಳ ಪದವಿಗೆ
ಉಭಯ ಜಗದ್ಗುರುಗಳವರು ನಮ್ಮನ್ನು ಏಕಕಾಲದಲ್ಲಿ ಏರಿಸಿದ್ದಾರೆ
'ಲೋಕವಾಣಿಯೇ ದೇವವಾಣಿ' ಎಂಬುದು ನಮಗೀಗ ಪ್ರತ್ಯಕ್ಷವಾಗಿದೆ.
ಕಾಶಿಯಲ್ಲಿ ನಾವು ವಿದ್ಯಾಭ್ಯಾಸಮಾಡುತ್ತಿರುವಾಗಲೇ ಸ್ನೇಹಿತರು ಕೆಲ
ವರು ನಿಮ್ಮವು ಕಮಲಪಾದ ಕಮಲಹಸ್ತ ಜಗದ್ಗುರುಪೀಠವನ್ನೇರು
ವುದು ಖಂಡಿತವೆಂದು ಭವಿಷ್ಯವನ್ನು ನುಡಿಯುತ್ತಿದ್ದರು ನಮಗೆ ಅವರ
ಮಾತು ಎಷ್ಟೂಪ್ರಿಯಕರನಾಗುತ್ತಿದ್ದಿಲ್ಲ. ಈ ಸಭೆಯಲ್ಲಿ ಮಂಡಿಸಿರುವ
ಪಂಡಿತವರ್ಯ ಚಿ॥ ಮ॥ ವೀರಭದ್ರ ಶಾಸ್ತ್ರಿಗಳವರು ಶ್ರೀಶೈಲಪೀಠಕ್ಕೆ
ಸಿದ್ಧರಾಗಿರೆಂದು ಪದೇ ಪದೇ ಹೇಳುತ್ತಿದ್ದರು ಕೊನೆ ಕೊನೆಗೆ ಎಲ್ಲಿ
ಹೋದರೂ ಈ ಹೇಳಿಕೆಯು ಬಲವಾಗುತ್ತಾಬಂದಿತು ಆ ಬಳಿಕ ಅನ್ನುವ
ವರಬಾಯನ್ನು ತಡೆಯಲಾರದೆಹೋಗಿ ನಾವೇತಟಸ್ಥರಾಗಬೇಕಾಯಿತು
ನಾವು ದೇಶಕ್ಕೆಬಂದಬಳಿಕ ಸಾಮಾಜಿಕ ಕಾರ್ಯರಂಗದಲ್ಲಿಳಿದು ಈ
ಕಾರ್ಯವನ್ನು ಮರೆಸಬೇಕೆಂದು ಬಹಳವಾಗಿ ಯತ್ನಿಸಿದೆವು. ಪಾದ
ವನ್ನೋ ಹಸ್ತವನ್ನೋ ದೂರದಲ್ಲಿನೋಡಿದ ಸಾಮುದ್ರಿಕಜ್ಞರು ಕೂಡ
ಬಲಪಾದದಲ್ಲಿ ಕಮಲವಿದೆ ಎಡಪಾದದಲ್ಲಿ ಪಲ್ಲಕ್ಕಿ ರೇಖೆಯಿದೆ ನೀಳ
ವಾದ ತೋಳುಗಳು ಈ ವ್ಯಕ್ತಿಯು ಯಾವುದೋ ಒಂದು ದೊಡ್ಡಪದ
ವಿಗೆಏರುವುದೆಂದು ಕೇಳದೇ ಹೇಳಿಬಿಡುತ್ತಿದ್ದರು ಇದಾದಮೇಲೆ ವೇಷಾಂ
ತರಮಾಡಿನೋಡೋಣ ಅನ್ನುವುದುತಪ್ಪಲೆಂದುಬಾವಿಸಿ ಸಾದಾ ಪಂಚೆ
ಉಟ್ಟು ಸಾದಾಪಂಚೆ ಹೊತ್ತು ಬರಿಗಾಲಿನಿಂದ ಸಹ ನಡೆದುನೋಡಿ
ದೆವು ಆ ವೇಷದಲ್ಲಿಯೂ ಭವಿಷ್ಯವಾದಿಗಳು ಭವಿಷ್ಯವನ್ನು ಹೇಳುವುದು
ಬಿಡಲಿಲ್ಲ. ಸಾಮಾಜಿಕಸೇವೆಗೆ ತೊಂದರೆಯಾಗಬಹುದೆಂದು ಈ ಪೀಠಾಧಿ
ಕಾರವನ್ನು ತೀರ ಮೈಮೇಲೆ ಬಂದರೂ ವಹಿಸಬಾರದೆಂದು ಎರಡುಸಾರಿ

ಶಕ್ತಿಮಾಯೆಯು ಗುರುವಿನುಕ್ತಿಯಿಂಪರಿದೋಡೆ ।
ಭಕ್ತ ಜೀವನೆ ಶಿವನು ಆಪುದೆಂಬುದ ।
ಶಕ್ತ ತನದಿಂದರಿದು ಆಶೆಯಿಂಬಿಟ್ಟು ಶಿವ ।
ಸಕ್ತ ವಾಗೀಶನೊಡನಾಂ ತುಡುಕಿದೆ ॥ ೭ ॥



# ಶ್ರೀಜಗದ್ಗುರು ಶ್ರೀಶೈಲ ಸೂರ್ಯಸಿಂಹಾಸನದ ನೂತನ ಪಟ್ಟಾಭಿಷೇಕಮಹೋತ್ಸವ

## ** ಗುಂತಕಲ್ಲು. **



ತಾ॥ ೭—೭—೪೦ ನೆಯ ಭಾನುವಾರ ಪ್ರಾತಃಕಾಲ ೯॥ ಘಂಟೆಗೆ ಶ್ರೀಶೈಲಜಗದ್ಗುರು ಪೀಠದಮೇಲೆ ನೂತನಾಧಿಕಾರಿಗಳು ಮೆರೆದರು. ಶ್ರೀ ಜಗದ್ಗುರು ನಾಗಲೂಟಿ ಭಿಕ್ಷಾವೃತ್ತಿ ಶಿವಾಚಾರ್ಯ ಮಹಾಸ್ವಾಮಿಗಳವರು ವಿಶೇಷವಾದ ಕಾಯಿಲೆಯಿಂದ ಆವರಿಸಲ್ಪಟ್ಟವರಾಗಿ ಶೀರ್ವವಾಗಿ ಈ ಕಾರ್ಯಕ್ರಮವನ್ನು ಕೈಕೊಂಡು ಸಾಂಗಗೊಳಿಸಿದರು.

ಈ ಮಹಾಕಾರ್ಯಕ್ಕೆ, ಹಾವೇರಿ, ಬ್ಯಾಡಿಗಿ,ಬೆಂಗಳೂರು, ಬೀರೂರು ದಾವಣಗೆರೆ, ಹರಿಹರ, ಹುಬ್ಬಳ್ಳಿ, ಬಾರ್ಸಿ, ಸಿಕಿಂದ್ರಾಬಾದ್, ಬಳ್ಳಾರಿ ಹೊಸಪೇಟೆ, ಆದವಾನಿ, ಸೊಂಡೂರು, ಕಡಕೋಳ, ಸತ್ತೀಗೇರಿ, ಹಿರೇಹಾಳು, ಹೊಳಲಗುಂದಿ, ವೋಕಿ, ಮೊದಲಾದ ಗ್ರಾಮಗಳ ಪ್ರಮುಖರೂ, ಪಂಡಿತರೂ, ಸ್ವಾಮಿಗಳವರು ಆಗಮಿಸಿದ್ದರು. ಸಮೀಪದ ಗ್ರಾಮಾನು ಗ್ರಾಮಗಳಿಂದಲೂ ಜನಗಳು ಅಧಿಕವಾಗಿ ಸೇರಿದ್ದರು. ದೂರದಿಂದ ಬರಲಾಗದಿದ್ದ ಪ್ರಮುಖರನೇಕರು ತಂತೀ ಮೂಲಕವೂ, ಪತ್ರಗಳಮೂಲಕವೂ, ತಮ್ಮ ಸಂತೋಷವನ್ನು ಪ್ರಕಟಿಸಿದ್ದರು.

ಮನಸ್ಸಿನಲ್ಲಿ ಮಾಡಿಕೊಂಡಿದ್ದೆವು. ಆಗ ನಾನಾಪ್ರಕಾರವಾದ ದುಸ್ವಪ್ನ
ಜ್ವರಾದಿಗಳು ಬಾಧಿಸಿ ಬಲವನ್ನು ಕುಗ್ಗಿಸಿದವು ಅಂತಹಸಮಯದಲ್ಲಿ
ಈ ಬಾಧೆಯಿಂದ ನಿವೃತ್ತರಾದರೆ ಶ್ರೀಶೈಲ ಮಲ್ಲಿಕಾರ್ಜುನನ ಸೇವೆಗೆ
ತನುವನ್ನೊಪ್ಪಿಸುವೆವೆಂದು ಆಡಿಬಿಡುತ್ತಿದ್ದೆವು ಆಗಲೇ ಎಲ್ಲಾ ಉಪದ್ರ
ಗಳು ಕಳೆದುಹೋಗುತ್ತಿದ್ದವು ಹೀಗಾಗಿ ನಮ್ಮ ಸೇವೆಯನ್ನು ತೆಗೆದುಕೊಳ್ಳು
ವುದು ಶ್ರೀ ಗಿರಿಮಲ್ಲಿಕಾರ್ಜುನನಿಗೂ ಜಗದ್ಗುರು ಪಂಡಿತಾರಾಧ್ಯನಿಗೂ
ಇಚ್ಛೆಯಿರುವುದೆಂದು ನಿಶ್ಚಯವಾಗಿ ಹೊಳೆಯಿತು. ಅದಕ್ಕನುಕೂಲ
ವಾಗಿ ಆಚಾರ್ಯ ಪರಂಪರೆಗಳಾಗಿ ಜನಿಸಿರುವ ಉಜ್ಜಯಿನಿ ಪೀಠದ
ಜಗದ್ಗುರು ಮಹಾಸ್ವಾಮಿಗಳವರ ಶುಭಾಶೀರ್ವಾದವು ಕೂಡಿ ಈ
ಪಂಡಿತಾರಾಧ್ಯ ಪೀಠವನ್ನು ಅಯಿತ್ಮಕವಾಗಿ ಅರೋಹಿಸಬೇಕಾಯಿತು.
ಏಕಾಏಕಿಸಂಘಟಿಸಿದ ಈ ಯೋಗದಿಂದ ಅನೇಕರು ಚಕಿತರಾಗಿ ನಾನಾ
ಬಗೆಯಾದ ಭಾವನೆಯಿಂದ ಸಂಶಯಗ್ರಸ್ತರಾಗಿರಬಹುದು. ಹಾಗೆ
ಭಿನ್ನಾಭಿಪ್ರಾಯವನ್ನಾರೂ ತಾಳಬಾರದು. ನಮ್ಮ ಪೂರ್ವಾಶ್ರಮದ
ಮುದೇನೂರು ಮಠ ಹಾಗೂ ಅದಕ್ಕೆ ಸೇರಿದ ಎಲ್ಲಾ ಮಠಗಳವರ
ಮತ್ತು ನಮ್ಮಿಂದ ಸ್ಥಾಪಿತವಾಗಿರುವ ಹರಿಹರದ ವೀರಶೈವ ಧರ್ಮಾ
ಲಯದ ಪ್ರಿಂಟಿಂಗ್‌ಪ್ರೆಸ್ ಮುಂತಾದವುಗಳ ವಿಚಾರವಾಗಿ ಈಮೊದಲೇ
ಆಲೋಚಿಸಿದ್ದಾಗಿದೆ. ಮಹಾಪೀಠಕ್ಕೆ ಶಾಖಾಮಠಗಳಾಗಿ ಲಕ್ಷೋಪ
ಲಕ್ಷ ಮಠಗಳಿರುವುದು ಸಹಜವಾಗಿರುವಂತೆ ನಮ್ಮ ಮುದೇನೂರು
ಮಠ ಮತ್ತು ಆ ಮಠಕ್ಕೆ ಸೇರಿದ ೧೩ ಮಠಗಳು ಹಾಗು ಹರಿಹರದ
ವೀರಶೈವ ಧರ್ಮಾಲಯ ಇವೆಲ್ಲವುಗಳು ನಮ್ಮ ಜಗದ್ಗುರು ಪೀಠದ
ಶಾಖಾಮಠ ಸಂಸ್ಥೆಗಳಾಗಿಯೇ ನಮ್ಮ ಉಪಯೋಗದಲ್ಲಿದ್ದು ನಮ್ಮ
ತರುವಾಯ ಆಮಠ ಸಂಸ್ಥೆಗಳಿಗೆ ಪೂರ್ವಪದ್ಧತಿಯಂತೆ ವಿದ್ಯಾವಂತ
ರೆಂದು ನಮ್ಮಮನಸ್ಸಿಗೆಬಂದ ಆ ಮಠದ ವಂಶೀಯ ವಟುವನ್ನು ಅಧಿ
ಕಾರಿಯನ್ನಾಗಿ ಚುನಾಯಿಸುವುದಾಗುವುದು ಮುದೇನೂರುಮಠ ಹಾಗು
ಹರಿಹರ ವೀರಶೈವ ಧರ್ಮಾಲಯ ಸಂಸ್ಥೆಗಳಉನ್ನತಿಯನ್ನು
ಈ ಮಹಾಧಿಕಾರದಲ್ಲಿದ್ದು ನಾವೇ ನಿರ್ವಹಿಸುವೆವಲ್ಲದೆ ನಮ್ಮ ನೇತೃತ್ವ
ದಲ್ಲಿ ಹೊರಡುತ್ತಿದ್ದ "ಧರ್ಮರಾಜ್ಯ ಹರಿಹರ" ಮಾಸಪತ್ರಿಕೆಯನ್ನು
ಅಖಿಲಭಾರತವೀರಶೈವವಿದ್ವತ್ಸಂಘದ ಮುಖಪತ್ರಿಕೆಯನ್ನಾಗಿ ಮಾಡ
ಬೇಕೆಂದು ಯೋಚಿಸಿದ್ದೇವೆ ಅಲ್ಲದೆ ಆದಷ್ಟು ಶೀಘ್ರವಾಗಿ ಶ್ರೀ ವೀರಶೈವ
ಧರ್ಮಾಲಯದಲ್ಲಿ ವಿದ್ಯಾವಿಭಾಗ ಆಯುರ್ವೇದವಿಭಾಗ ಏರ್ಪಡಿಸಿ

ಆ ಪ್ರಾಂತೀಯ ವೀರಶೈವರನ್ನು ಸರ್ವರೀತಿಯಿಂದಲೂ ಮುಂದುವರಿಸಬೇಕೆಂದು ಸಂಕಲ್ಪಿಸಿದ್ದೇವೆ. ಈ ವಿಷಯವನ್ನು ಆಯಾಗ್ರಾಮಗಳ ಪಾಟೀಲರು ಮೊದಲಾದ ಪ್ರಮುಖ ಜನರಿಗೆ ಈ ಶುಭಸಮಯದಲ್ಲಿ ಸೂಚಿಸಲು ಆನಂದವೆನಿಸುವುದು ನಮ್ಮ ಪೀಠವಾದ ಆಂಧ್ರ ಪ್ರಾಂತವು ಕೂಡ ಬಹುರೀತಿಯಿಂದ ಹಿಂದುಳಿದಿದೆ. ಇಲ್ಲಿಯೂ ವಿದ್ಯಾ ಪ್ರಚಾರವನ್ನು ಮೊಟ್ಟಮೊದಲು ಕೈಕೊಳ್ಳಬೇಕಾಗುವುದು. ಆರಂಭಿಕವಾಗಿ ಸಾಗುವ ಕಾರ್ಯವು ವಿದ್ಯಾ ರೂಪವಾಗಿದ್ದರೂ ಇದರಮೂಲಕ ಯತ್ನಿಸಬೇಕಾದ ಮಹತ್ಕಾರ್ಯಗಳನಂತವಾಗಿವೆಯೆಂಬುವುದನ್ನು ತಾವೆಲ್ಲರೂ ತಿಳಿದಿದ್ದೀರಿ ಈ ಮಹೋತ್ಸವದಲ್ಲಿ ನಾವೆಲ್ಲರು ಏಕೀಭಾವಿಸಿ ಕಾರ್ಯಗಳನ್ನು ಹೂಡಿ ಪಂಚಪೀಠಗಳ ಹಾಗು ಅವುಗಳಿಗೆ ಸಂಬಂಧಿಸಿರುವ ಮುಖ್ಯ ಕ್ಷೇತ್ರಗಳ ಕೀರ್ತಿಯನ್ನು ಆಚಂದ್ರಾರ್ಕವಾಗಿ ನೆಲೆಗೊಳ್ಳುವಂತೆ ಯತ್ನಿಸಿ ಧರ್ಮ, ರಾಷ್ಟ್ರಭಾಷೆ, ಇವುಗಳ ಸೇವೆಯನ್ನು ಮಾಡಲು ಸಿದ್ಧರಾಗೋಣ. ಈ ಶುಭ ಸಮಯದಲ್ಲಿ ನಮ್ಮ ಚಕ್ರವರ್ತಿ ಸಾರ್ವಭೌಮರಿಗೂ, ಮೈಸೂರು ಶ್ರೀಮನ್ಮಹಾರಾಜರಿಗೂ, ನೈಜಾಂ ಮಹಾರಾಜರಿಗೂ, ಕಾಶಿ ಮಹಾರಾಜರಿಗೂ, ಸೊಂಡೂರು ಮಹಾರಾಜರಿಗೂ, ಉಳಿದ ಪೀಠಾಚಾರ್ಯರಿಗೂ, ಕೊನೆಗೆ ಸಕಲ ಪ್ರಜೆಗಳಿಗೂ ಶ್ರೇಯಸ್ಸನ್ನು ಪ್ರಾರ್ಥಿಸಿ ಶ್ರೀ ಮಲ್ಲಿಕಾರ್ಜುನನನ್ನು ಶ್ರೀ ಪಂಡಿತಾರಾಧ್ಯನನ್ನು ಧ್ಯಾನಿಸಿ ನಮ್ಮ ಸಂದೇಶವನ್ನು ಮುಗಿಸುವೆವು.

# ಹುಡುಕಿದೆ.

ಕವಿ:— ಕಮಲಾಪುರದ ಕೆ. ಕೊಟ್ರಪ್ಪ
ಸ್ಕೂಲ್ಮಾಸ್ತರ್ ಹನಗವಾಡಿ.



ಎಲ್ಲಿನೋಡಿದಡಲ್ಲಿ ದೇವ ನಿಹಬಂದೆನು ।
ನಲ್ಲಿಂದ ಲಲ್ಲಿಹುದು ಇದರಮೂಲ ॥
ಬಲ್ಲೆನಾದೊಡೆ ನಾನು ಶಿವಶಕ್ತಿಯರ ಮರ್ಮ ।
ವಲ್ಲೆ ಜೀವಿಸೆನೆಂದು ನಾ ಹುಡುಕಿದೆ ॥ ೧ ॥

ಇರುಳು ಹಗಲುಗಳಿರಲಿ ಸೂರ್ಯ ಚಂದ್ರಮರಿರಲಿ ।
ಧರೆಯಾದಿ ಪಂಚ ಭೂತಂಗಳಿರಲಿ ॥
ಗುರುಪಾದವಿಡಿದೊಡನೆ ಅರಿವೆಂಬಶಕ್ತಿ ತಾ ।
ಸುರಿವ ಹರನನು ತೋರ್ಪುದಾಂ ಹುಡುಕಿದೆ ॥ ೨ ॥

ಚಲನವಿಲ್ಲದ ಬೊಮ್ಮನೊಳು ಶಕ್ತಿ ಚಲಿಸಾಡೆ ।
ಹಲವು ಲೋಕಗಳುದಯ ತಾನಾಯಿತು ॥
ಕೆಲವುದಿನ ಗುರುಸೇವೆಯಿಂದಿದರ ವಿವರವನು ।
ಒಲವಿನಿಂದರಿದವನು ನಾ ಹುಡುಕಿದೆ ॥ ೩ ॥

ದೇವಜೀವನ ಅಂಶವೆಲ್ಲ ಬೆಳಕಿನೊಳಿಹುದು ।
ಸಾವು ಜನನಗಳಿರವ ತಿಳಿದೊಡನೆಯೇ ॥
ನಾವು ನೀವೆಂಬುದರ ಭಿನ್ನಭೇದವನಳಿದ ।
ಭಾವದಿಂದಲಿ ಶಿವನ ನಾ ಹುಡುಕಿದೆ ॥ ೪ ॥

ಹಸನಮನದಲಿ ಈಗ ಪಶುಪತಿಯ ಭಕುತಿಯಿಂ ।
ನಿಶಿ ಹಗಲುಮೆನ್ನದಲೆ ಗುರುಮುಖದೊಳು ॥
ತುಸು ತುಸುವೆಯರಿಯುತ್ತ ಆನಂದವಾವಗುಂ ।
ನಸಿಸದಂದದಿ ಸೊಗದೊಳಾಂ ಹುಡುಕಿದೆ ॥ ೫ ॥

ಸಗುಣನಿರ್ಗುಣದಿರವು ಸೊಗಸಾಗಿ ತಿಳಿಯುತಲೆ ।
ಮಿಗಿಲಾದ ವೈರಾಗ್ಯ ತಾಂ ತೋರಲೂ ॥
ಹಗರಣದ ಮನವನುನೆ ಚಂಚಲವ ಬಿಡಲಾಗಿ ।
ನಗಧರನ ಬಿಡದಿಂದು ನಾ ಹುಡುಕಿದೆ ॥ ೬ ॥

ಶಕ್ತಿಮಾಯೆಯು ಗುರವಿನುಕ್ತಿಯಿಂಪರಿದೋಡೆ ।
ಭಕ್ತ ಜೀವನೆ ಶಿವನು ಆಪುದೆಂಬುದ ।
ಶಕ್ತ ತನದಿಂದರಿದು ಆಶೆಯುಂಬಿಟ್ಟು ಶಿವ ।
ಸಕ್ತ ವಾಗೀಶನೊಡನಾಂ ಪುಡುಕಿದೆ ॥ ೭ ॥



# ಶ್ರೀಜಗದ್ಗುರು ಶ್ರೀಶೈಲ ಸೂರ್ಯಸಿಂಹಾಸನದ ನೂತನ ಪಟ್ಟಾಭಿಷೇಕಮಹೋತ್ಸವ

## ** ಗುಂತಕಲ್ಲು. **



ತಾ ॥ ೭—೭—೪೦ ನೆಯ ಭಾನುವಾರ ಪ್ರಾತಃಕಾಲ ೯ ॥ ಘಂಟೆಗೆ ಶ್ರೀಶೈಲಜಗದ್ಗುರು ಪೀಠದಮೇಲೆ ನೂತನಾಧಿಕಾರಿಗಳು ಮೆರೆದರು. ಶ್ರೀ ಜಗದ್ಗುರು ನಾಗಲೂಟಿ ಭಿಕ್ಷಾವೃತ್ತಿ ಶಿವಾಚಾರ್ಯ ಮಹಾಸ್ವಾಮಿಗಳವರು ವಿಶೇಷವಾದ ಕಾಯಿಲೆಯಿಂದ ಆವರಿಸಲ್ಪಟ್ಟವರಾಗಿ ತೀವ್ರವಾಗಿ ಈ ಕಾರ್ಯಕ್ರಮವನ್ನು ಕೈಕೊಂಡು ಸಾಂಗಗೊಳಿಸಿದರು.

ಈ ಮಹಾಕಾರ್ಯಕ್ಕೆ ಹಾವೇರಿ, ಬ್ಯಾಡಿಗಿ, ಬೆಂಗಳೂರು, ಬೀರೂರು ದಾವಣಗೆರೆ, ಹರಿಹರ, ಹುಬ್ಬಳ್ಳಿ, ಬಾರ್ಸಿ, ಸಿಕಿಂದ್ರಾಬಾದ್, ಬಳ್ಳಾರಿ ಹೊಸಪೇಟೆ, ಆದವಾನಿ, ಸೊಂಡೂರು, ಕಡಕೋಳ, ಸತ್ತೀಗೇರಿ, ಹಿರೇಹಾಳು, ಹೊಳಲಗುಂದಿ, ವೋಕಿ, ಮೊದಲಾದ ಗ್ರಾಮಗಳ ಪ್ರಮುಖರೂ, ಪಂಡಿತರೂ, ಸ್ವಾಮಿಗಳವರು ಆಗಮಿಸಿದ್ದರು. ಸಮೀಪದ ಗ್ರಾಮಾನು ಗ್ರಾಮಗಳಿಂದಲೂ ಜನಗಳು ಅಧಿಕವಾಗಿ ಸೇರಿದ್ದರು. ದೂರದಿಂದ ಬರಲಾಗದಿದ್ದ ಪ್ರಮುಖರನೇಕರು ತಂತೀ ಮೂಲಕವೂ, ಪತ್ರಗಳಮೂಲಕವೂ, ತಮ್ಮ ಸಂತೋಷವನ್ನು ಪ್ರಕಟಿಸಿದ್ದರು.

ಪಟ್ಟಾಭಿಷೇಕದ ವೈದಿಕ ಕರ್ಮವನ್ನು ಪಂ|| ಚಿ|| ಮ|| ವೀರಭದ್ರ ಶಾಸ್ತ್ರಿಗಳು, ಪಂ|| ಪಿ. ಎಂ, ಸೋಮಶೇಖರ ಶಾಸ್ತ್ರಿಗಳು. ಬೆಂಗಳೂರಿನ ಗುರುಲಿಂಗ ಶಾಸ್ತ್ರಿಗಳು, ಬಳ್ಳಾರಿ ವೇ|| ಬಸಪ್ಪಯ್ಯ ಶಾಸ್ತ್ರಿಗಳೂ ವಹಿಸಿಕೊಂಡಿದ್ದರು.

ಶ್ರೀ ಮದುಜ್ಜಯಿನೀ ಸದ್ಧರ್ಮ ಸಿಂಹಾಸನಾಧೀಶ್ವರರಾದ ಶ್ರೀ ೧೦೮ ಜಗದ್ಗುರು ಸಿದ್ಧೇಶ್ವರ ರಾಜದೇಶಿಕೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳವರ ಅಧಿಪತ್ಯದಲ್ಲಿ ನಡೆದ ಈ ಪಟ್ಟಾಭಿಷೇಕ ಕಾರ್ಯವನ್ನು ಎಷ್ಟು ಹೊಗಳಿದರೂ ತೀರದಾಗಿದೆ.

ಪಟ್ಟಾಭಿಷೇಕ ಸಮಯದಲ್ಲಿ ಉಜ್ಜಯಿನೀ ಶ್ರೀ ಜಗದ್ಗುರುಗಳವರು ಸರ್ವರಿಗೂ ಸದುಪದೇಶವನ್ನು ಮಾಡುತ್ತ ನೂತನಾಧಿಕಾರಿಗಳಿಗೆ "ಶ್ರೀ ಜಗದ್ಗುರು ವಾಗೀಶ ಪಂಡಿತಾರಾಧ್ಯ ಶಿವಾಚಾರ್ಯ"ರೆಂದು ನಾಮಕರಣ ಮಾಡಿದರು.

ಮಧ್ಯಾಹ್ನ ಮಹಾಗಣಾರಾಧನೆ ನಡೆಯಿತು. ಸಂಜೆ ೪ ಘಂಟೆಗೆ ಸರಿಯಾಗಿ ಭವ್ಯವಾದ ಮಂಟಪದಲ್ಲಿ ರಚಿಸಿದ ಸಿಂಹಾಸನದಮೇಲೆ ನೂತನ ಜಗದ್ಗುರುಗಳೂ ಉಜ್ಜಯಿನೀ ಜಗದ್ಗುರುಗಳವರೂ ಸರ್ವರ ವಂದನೆಗಳನ್ನು ತೆಗೆದುಕೊಳ್ಳುತ್ತ ಬಂದು ವಿರಾಜಮಾನರಾದರು.

ಉಭಯ ಜಗದ್ಗುರುಗಳ ಹಾಗೂ ಜಗದ್ಗುರು ಪಂಚಾಚಾರ್ಯರ ಜಯಘೋಷವು ನಡೆದ ಬಳಿಕ ಬಳ್ಳಾರಿಯ ಗುರುನಿವಾಸ-ಸಂಸ್ಕೃತ ಪಾಠಶಾಲೆಯ ವಿದ್ಯಾರ್ಥಿಗಳು ಆಚಾರ್ಯ ಸ್ತೋತ್ರಗಳನ್ನು ಹಾಡಿದರು. ಬಳಿಕ ಸರ್ವರ ಅಪೇಕ್ಷೆಯಮೇರೆಗೆ ನೂತನ ಜಗದ್ಗುರುಗಳವರು ತಮ್ಮ ಸಂದೇಶವನ್ನು ಸರ್ವರಿಗೂ ಸ್ಪಷ್ಟವಾಗುವಂತೆ ಅಪ್ಪಣೆ ಕೊಡಿಸಿದರು.

ಆಮೇಲೆ ನೂತನ ಜಗದ್ಗುರುಗಳವರಿಗೆ ಕಾಣಿಕಾ ಸಮರ್ಪಣ ಕಾರ್ಯವು ನಡೆಯಿತು. ಶ್ರೀ ಜಗದ್ಗುರು ರಂಭಾಪುರೀ ಪೀಠದಿಂದ ಆಹೇರ್ ಸಮೇತವಾಗಿ ನೂತನಾಧಿಕಾರಿಗಳಿಗೆ ಸಂದೇಶವು ಬಂದಿದ್ದು ಅದನ್ನು ಬೆಂಗಳೂರು ದೇಶದ ಸೆಟ್ರು ಸಮರ್ಪಿಸಿದರು. ಬಳಿಕ ಉಜ್ಜಯಿನೀ ಜಗದ್ಗುರು ಸಂಸ್ಥಾನದ ಆಹೇರ್ ಆಶೀರ್ವಾದ ವಾಯಿತು.

ಬೆಂಗಳೂರಿನ ಮ। ರಾ। ಸರಾಪ್, ಬಿ. ಬಸಪ್ಪನವರು (ಬಂಗಾರದ ಕಿರೀಟ ವಾಗ್ದಾನ.) ಹುಣಸಮಾರನಹಳ್ಳಿ, ಶ್ರೀ ಪಟ್ಟದ ಸ್ವಾಮಿಗಳವರು (೧೫೦ ರೂಪಾಯಿನ ಬೆಳ್ಳಿಯ ಪೂಜಾ ಸಾಮಾನುಗಳು ವಾಗ್ದಾನ.) ಬೆಂಗಳೂರಿನ ವೇ॥ ಎನ್, ರುದ್ರಯ್ಯನವರು (ಬೆಳ್ಳಿಯ ಕಮಂಡಲು.) ಕೊಂಡಕುಂದಿ ರೇವಡಿ ನಾಗಯ್ಯನವರು (೧ ಬೆಳ್ಳಿ ಲೋಟ ೫ ರೂಪಾಯಿ.) ಆದವಾನಿ ಬಂಡ್ರೈಯ್ಯನವರು.(೧ ಬೆಳ್ಳಿ ಲೋಟ, ೫ ರೂಪಾಯಿ.) ಕೊಂಡಕುಂದಿ ಶೀಲಾ ಮಠದ ಶ್ರೀ ಶಿವಶಂಕರ ಶಿವಾಚಾರ್ಯರು (೧ ಬೆಳ್ಳಿ ಲೋಟ, ೧ ಕರ್ಪೂರ ಪೌಟು, ೧ ಶಿಲ್ಪಿನ ಶಿಲ್ಯ.) ಹಸುಗೋಡು ಶ್ರೀ। ರುದ್ರಮುನಿ ಶಿವಾಚಾರ್ಯರು. ಮಧ್ದಿಕೆರೆ ಶ್ರೀಸುಂತ ಬಂಡೇಗೌಡರು. ಗುಂತಕಲ್ಲು ಪಾಟೇಲ್ ಸಣ್ಣ ತಿಮ್ಮಾರೆಡ್ಡಿಯವರು, ಸೊಂಡೂರು ಭೋಜ ಷಣ್ಮುಖಪ್ಪನವರು, ಗುಂತಕಲ್ಲು ವಲ್ಲಂ ಸುಬ್ಬರಾಮಯ್ಯನವರು, ಕಡಕೋಳದ ಶ್ರೀ ಪಟ್ಟದ ಸ್ವಾಮಿಗಳವರು, ಸತ್ತೀಗೇರಿ ಶ್ರೀ ಪಟ್ಟದ ಸ್ವಾಮಿಗಳವರು ವೇ॥ ಪಿ. ಐ. ಹಿರೇಮಠ ಹೈಕೋರ್ಟ ವಕೀಲರು ಹುಬ್ಬಳ್ಳಿ, ಕೊಂಡಕುಂದಿ ಯಾಡ್ಕಿಮಠದ ಬಸವಯ್ಯನವರು ಹುಬ್ಬಳ್ಳಿ, ಬೆಳ್ಳುಳ್ಳಿ ತೀರ್ಥಪ್ಪನವರು ಕೊಂಡಕುಂದಿ, ಸೊಂಡೂರು ಬಸವಯ್ಯನವರು, ಮದ್ದಿಕೆರೆ ಮಠದ ಮರಿಯಯ್ಯನವರು, ಕೊಂಡಕುಂದಿ ರೇವಡಿ ಶಿವಲಿಂಗಮ್ಮನವರು, ತಿಮ್ಮ ಚರ್ಲ ಗೂಗಲ್ ಯರ್ರಿಪ್ಪನವರು, ಕೊನಗೊಂಡ್ಲ ಶೀಲಾಮಠದ ಪರಮೇಶ್ವರಯ್ಯನವರು, ಪ್ಯಾಪಲಿಮಠದ ಶಂಕರಮ್ಮನವರು ಕೊಂಡಕುಂದಿ ಸಿದ್ಧಾಂತಿ ಹಂಪಮ್ಮನವರು ಇವರೇ ಮೊದಲಾದವರು ಕಾಣಿಕೆಯನ್ನರ್ಪಿಸಿದರು.

ಕಾಣಿಕಾ ಸಮರ್ಪಣ ಕಾರ್ಯವು ಮುಗಿದನಂತರ ಪಂ। ಚಿ। ಮ। ವೀರಭದ್ರ ಶಾಸ್ತ್ರಿಗಳವರು ನೂತನ ಜಗದ್ಗುರುಗಳವರ ತಮ್ಮ ಪೂರ್ಣ ಪರಿಚಯವನ್ನು ವಿವರಿಸುತ್ತ "ಶ್ರೀ ಪಂಡಿತಾರಾಧ್ಯ ಜಗದ್ಗುರು" ಎಂಬ ವಿಷಯದಮೇಲೆ ಮಹತ್ತರವಾದ ವ್ಯಾಖ್ಯಾನವನ್ನು (ತೆಲುಗಿನಲ್ಲಿ) ಮಾಡಿ ಸರ್ವರನ್ನೂ ಆನಂದ ಪಡಿಸಿದರು. ಸದರೀ ಪಂಡಿತರ ವ್ಯಾಖ್ಯಾನ ಮುಗಿದಬಳಿಕ ಪಂ। ವೈ। ನಾಗೇಶ ಶಾಸ್ತ್ರಿಗಳವರು "ಪೀಠಾರೋಹಣ" ವಿಷಯವನ್ನು ಕುರಿತು ವ್ಯಾಖ್ಯಾನ ಮಾಡುತ್ತ ನೂತನ ಜಗದ್ಗುರುಗಳವರ ಗುಣಾವಳಿಯನ್ನು ವರ್ಣಿಸಿದರು. ಆ ಬಳಿಕ ಪಂ॥ ವೇ॥ ಪಿ. ಎಂ. ಸೋಮಶೇಖರಶಾಸ್ತ್ರಿಗಳ

ವರು ಸದರೀ ವಿಷಯವನ್ನೇ ಎತ್ತಿಕೊಂಡು ಮನೋಹರವಾಗಿ ವ್ಯಾಖ್ಯಾನಮಾಡಿದರು. ಉಮಚಿಗಿ ಮ। ಮ। ಪಂಡಿತರತ್ನ ಶಂಕರ ಶಾಸ್ತ್ರಿಗಳವರು "ಪೀಠಾಚಾರ್ಯರ ಲಕ್ಷಣ" ಎಂಬ ವಿಷಯವಾಗಿ ವ್ಯಾಖ್ಯಾನಿಸುತ್ತ ನೂತನ ಜಗದ್ಗುರುಗಳ ವಿಷಯವಾಗಿ ಬಹಳ ಬೋಧವಾಗುವಂತೆ ಸರ್ವರಿಗೂ ತಿಳಿಯಪಡಿಸಿದರು.

ಈ ಮಧ್ಯದಲ್ಲಿ ಪಂಡಿತರು ಶ್ರೀಶೈಲ ಪೀಠವು ನಮ್ಮದು. ನೂತನ ಜಗದ್ಗುರು ನಮ್ಮ ದೇಶೋದ್ಧಾರ ಮಾಡಬೇಕು. ನಮ್ಮ ದೇಶೋದ್ಧಾರ ಮಾಡಬೇಕು. ಎಂದು ವಿನೋದವಾಗಿ ಒಂದೊಂದು ವಿಷಯವಾಗಿ ಚರ್ಚಿಸಿದರು. ಕೇಳುವವರಿಗೆ ಈ ವಿಧಾನವು ಬಹಳ ಅಂದವಾಗಿದ್ದಿತು. ಪಂ। ಚಿ। ಮ। ವೀರಭದ್ರ ಶಾಸ್ತ್ರಿಗಳವರು ತೆಲುಗು ಪೀಠವೆಂದರು. ಪಂ। ವೈ। ನಾಗೇಶ ಶಾಸ್ತ್ರಿಗಳವರು ಗುಂತಕಲ್ಲು ಶಬ್ದವೇ ಕನ್ನಡವೆಂಬಮೇಲೆ ಇದು ನಮ್ಮ ಕನ್ನಡಿಗರ ಪೀಠವೆಂದರು. ಪಂ। ಸೋಮಶೇಖರ ಶಾಸ್ತ್ರಿಗಳವರು ಇದು ಸೂರ್ಯಸಿಂಹಾಸನ ಸೂರ್ಯನನ್ನು ಯಾದೇಶದವನೆಂದು ಹೇಳೋಣ. ಅದರಂತೆ ಈ ಸಿಂಹಾಸನವೂ, ಸರ್ವ ದೇಶಗಳಿಗೂ ಸಂಬಂಧ ಪಟ್ಟುದು. ಆದ್ದ ರಿಂದ ನಮ್ಮವಾದಕ್ಕೆ ಮೂಲವಿಲ್ಲ, ಮುಂತಾಗಿ ಹೇಳಿದರು. ಇದೇ ವಿಷಯವನ್ನು ಬಾರ್ಶಿ ಶ್ರೀಫಳಾಂಡಕರವರು ಮರಾಠಿಯಿಂದ ಹೇಳಿದರು

ಆಬಳಿಕ ಹುಬ್ಬಳ್ಳಿ ಹೈ॥ ವಕೀಲರಾದ ವೇ॥ ಪಿ. ಐ. ಹಿರೇಮಠ ಇವರು "ಸಂಪುಟ ಪತ್ರ" ವಿಷಯದಮೇಲೆ ವ್ಯಾಖ್ಯಾನಮಾಡುತ್ತ ಮೊದಲೇ ತಯಾರಿಸಿಟ್ಟ ಸಂಪುಟ ಪತ್ರಿಕೆಗೆ ಸರ್ವರ ಹಸ್ತಾಕ್ಷರಗಳನ್ನು ತೆಗೆಯಿಸಿದರು.

ಆಬಳಿಕ ಶ್ರೀ ಮದುಜ್ಜಯಿನೀ ಸದ್ಧರ್ಮ ಸಿಂಹಾಸನಾಧೀಶ್ವರ ರಾದ ಶ್ರೀ ೧೧೦೮ ಜಗದ್ಗುರು ಸಿದ್ಧೇಶ್ವರರಾಜದೇಶಿಕೇಂದ್ರ ಶಿವಾಚಾ ರ್ಯ ಮಹಾಸ್ವಾಮಿಗಳರವರು ಸದುಪದೇಶವನ್ನು ಮಾಡಿದ ಬಳಿಕ ಉಭಯ ಜಗದ್ಗುರುಗಳಿಗೆ ಮಂಗಳವನ್ನು ಮಾಡಿದರು. ತರುವಾಯ ಸಭೆಯ ಕಾರ್ಯವು ಜಯಘೋಷದೊಡನೆ ಸಮಾಪ್ತ ವಾಯಿತು.



## ಅಷ್ಟಪಲ್ಲಕ್ಕಿ ಮಹೋತ್ಸವ.

ಮರುದಿನ ತಾ. ೮—೭—೪೦ ನೇ ಸೋಮವಾರ. ಸಾಯಂ ಕಾಲ ೬ ಘಂಟೆಗೆ ನೂತನ ಜಗದ್ಗುರುಗಳವರ ಅಷ್ಟಪಲ್ಲಕ್ಕಿ ಮಹೋತ್ಸವವು ಗುಂತಕಲ್, ತಿಮ್ಮನಚರ್ಲ, ಜಂಕ್ಷನ್, ಇವುಗಳ ಮುಖ್ಯ ಬೀದಿಗಳಲ್ಲಿ ಸಕಲ ಬಿರುದಾವಳಿ ಸಹಿತವಾಗಿ ಅತ್ಯಂತ ವಿಜೃಂಭಣೆಯಿಂದ ಜರುಗಿತು. ಈ ಮಹೋತ್ಸವದಲ್ಲಿ ಸುಮಾರು ೪—೫ ಸಾವಿರ ಜನರು ಭಾಗಿಗಳಾಗಿದ್ದರು. ಉತ್ಸವದ ಸಿಸ್ತನ್ನು ಕಾಪಾಡುವುದಕ್ಕೋಸ್ಕರ ಪೋಲೀಸ್ ಇನಸ್ಪೆಕ್ಟರರವರು ತಮ್ಮ ಅಧಿಕಾರವರ್ಗದವರ ಸಮೇತ ಆಗಮಿಸಿ, ಉತ್ಸವವನ್ನು ಶಾಂತವಾಗಿ ನೆರವೇರಿಸಿದರು. ಉತ್ಸವವು ಶ್ರೀ ಸಂಸ್ಥಾನಮಠಕ್ಕೆ ತಲ್ಪುವದರೊಳಗಾಗಿ, ರಾತ್ರಿ ೧೨ ಘಂಟೆಯಾಯಿತು. ಜಗದಾಚಾರ್ಯರ ಜಯ ಘೋಷದೊಡನೆ ಉತ್ಸವದ ಕಾರ್ಯವು ಸಮಾಪ್ತಿಗೊಂಡಿತು.

ತದನಂತರ ಸರಕಾರಿ ಅಧಿಕಾರ ವರ್ಗದವರಿಗೆ ಪಾರಿತೋಷಕಗಳನ್ನು ಕೊಡಲಾಯಿತು.

ಓರ್ವ ಪ್ರತ್ಯಕ್ಷದರ್ಶಿ.

---

## ಶ್ರೀಶೈಲ ಜಗದ್ಗುರು ಶ್ರೀವಾಗೀಶ ಪಂಡಿತಾರಾಧ್ಯ ಶಿವಾಚಾರ್ಯರವರ ಸ್ತೋತ್ರ.

ಕವಿ— ಕಮಲಾಪುರದ ಕೆ. ಕೊಟ್ರಪ್ಪ ಸ್ಕೂಲ್ಮಾಸ್ಟರ್ ಹನಗವಾಡಿ.

---

ಶ್ರೀಶೈಲ ಪೀಠದೊಳು ಮಂಡಿಸಿ ।
ಈಶತತ್ವವ ಸೊಗದ ವಾಣಿಲಿ ।
ಭಾಷಣವಗೈಯ್ಯುತ್ತ ಭಕುತರ ಭವವ ನೀಗುತಲಿ
ಶ್ರೀಶೈಲಜಾ ಪತಿಯ ನೆನೆಹಿಲಿ ।
ಪಾಸಿಸುವ ಭೂಮಿಪರ ವಂದನೆ ।
ಸೂಸುತಲಿ ಕೈಗೊಂಬ ಗುರುವಾಗೀಶ ಪಾಲಿಸೊ ॥ ॥೧॥

ಕಾಲಕಾಲ ಸಂತತ್ವ ಸಂತತ
ಲೋಲ ಕಲಿಮಲದೂರ ಶಮೆದಮೆ ।
ಶೀಲ ಜಂಗಮಪಾಲ ಲೋಕೋದ್ಧಾರ ಪದಯುಗಳ ॥
ನೀಲಗಲ ಮಕರಾಜ್ಯಪಾಲನ
ಶೈಲಜಾವರ ಮಹಿಮ ಶೋರ್ವಸು ।
ಲೀಲ ಪರವಾಗೀಶ ಪಂಡಿತಗುರುವೆ ಪಾಹಿಸದಾ ॥ ೨ ॥

ಪಾದದೊಳು ಪಾದುಕೆಯ ತಾಳಿಹ ।
ಮೋದದಿಂ ಹಸ್ತದೊಳು ದಂಡವ ।
ವೇದಮಂತ್ರವ ಸಾರ್ವಭೌಮನ ಜಪದ ಮಾಲೆಯನೂ ॥
ಸಾದ ಬನ್ನೋದಕ ಕಮಂಡಲು ।
ಮಾನಿನೆಲ್ಲವ ಪಿಡಿದುಕೊಂಡಿಹ ।
ನಾದಪರವಾಗೀಶ ಪಂಡಿತಗುರುವೆ ಪಾಹಿಸದಾ ॥ ೩ ॥

ಫಾಲದೊಳು ಭಸ್ಮತ್ರಿಪುಂಡ್ರವ ।
ನೀಲಕಂಠನ ನೆನೆಯ ಮಧ್ಯದಿ ।
ಮಾಲೆ ರುದ್ರಾಕ್ಷಿಯನು ಕೊರಳೊಳು ಧರಿಸುತಲ್ಲದಲೇ ॥
ನೀಳದೇಹಕೆ ಕಪನಿ ಕೌಪಿನ ।
ತಾಳಿಕೊಂಡಿಹ ಭರ್ಗ ಲಾಂಛಿತ ।
ಮೂಲಪಂಡಿತಪೀಠ ಗುರುವಾಗೀಶ ಪಾಹಿಸದಾ ॥ ೪ ॥

ಕಮಲ ಸಂಭವ ಸುರಪ ಕಿನ್ನರ ।
ಕಮಲನೇತ್ರಾರ್ಚಿತ ಸುರಂಗಿ ।
ವಿಮಲ ತಾರಕಲಿಂಗ ನೀಡಿಹ ಪಂಡಿತಾರಾರ್ಯನಿಗೆ ॥
ನಮನೆಸಿ ಸು ರುಜ್ವಲಿಪ ಗುರುವರ ।
ವಿಮಲ ಮನದೋಳ್ಕೈರಿಪ ಭಕ್ತರ ।
ಸುಮನಸರ ನಸತತ ಗುರುವಾಗೀಶ ಪಾಹಿಸದಾ ॥ ೫ ॥

———

# ನೀತಿಸಂಗ್ರಹ.

ನೋಣದಂತಹ ಘಟಮಾರಿ ಮಾರಿ ಜಗದೊಳಗಿಲ್ಲ ।
ತ್ರಿಣಯನೇನದನು ಬಲ್ಲ ॥
ಅಣಕಿಸದೆ ಕೆಣಕಿಸದೆ ಹಣೆಹಣೆಯ ಬಡಕೊಂಡೆ ।
ಹಣುಹಣುಕಿ ಕಡಿವುದನು ಶಿವನೆಬಲ್ಲ ॥



ಇಂಗ್ರೇಜಿ ಮೊದಲಲ್ಲ ।
ಕೊಂಗ್ರನುಡಿ ತಾನಲ್ಲ ।
ಬೆಂಗಾಲಭಾಷೆ ಕಡೆಗಲ್ಲ ಯಿದೇಕೆ ।
ಮಂಗನಂತಾದೆ ಸರ್ವಜ್ಞ ॥



ಏ ಬಿ ಸೀಡೀಲು ಎಕ್ಕುವೈಸಂಪುನ ।
ವೇದಶಾಸ್ತ್ರಮುಲೆಲ್ಲ ಯೇಟಬಡಿಯೆ ॥
ಯಂ ಏಲು ಬಿ ಏಲು ಯೆಕ್ಕುವೈಸಂಪುನ ।
ಲೋಯರ್ ಸೆಕೆಂಡ್ರೀಲಕು ಲೋಟುಗಲಿಗೆ ॥
ಜರ್ಮನೀಸಿಲ್ವರು ಜನ್ಮಿಂಚಿಸಂಪುನ ।
ವೆಂಡಿಬಂಗಾರಂಬು ಘುಂಡಮೋಸೆ ॥
ಕುಲಸತುಲಗುಸ್ತ್ರೀಲು ಸಾನುಲೈನಂಪುನ ।
ವೇಶ್ಯಲಕುನನ್ನಂಬು ವೆಲತಿಗಲಿಗೆ ॥
ತಲ್ಲಿ ವಿಷಮಾಯೆ ಪೆಂಪ್ಲಾಮು ಬೆಲ್ಲಮಾಯೆ ।
ಕಲಿಯುಗಮಿಂತಲು ಇಂಕೆಂತಗಲವೋ ತೆಲಿಯದಾಯೆ ॥
ಚೂಡಾರತ್ನಾ ॥ ★ ॥

ಎಸ್. ಕೆ.

ಓದಿನಿಂದಲೆ ಹರಸು ।
ಓದಿನಿಂದಲೆ ಹರಿಯು ।
ಓದಿನಿಂದ ಜನುಪೂಲೋಕವಾಳುವರು
ಓದಿನೋಡೆಂದ ಸರ್ವಜ್ಞ

† † † † † ‡

ದೇವನೊಬ್ಬನು ಎಂದು ।
ಯಾವ ಜನರಾಡುವರು ।
ಭಾವ ಬಲು ಶುದ್ಧವಿರಬೇಕು ಬರಿನುಡಿಯ ।
ಸೇವೆತರವಲ್ಲ ಸರ್ವಜ್ಞ

* * * * * *

ತನುಸತ್ಯವೆಂಬುವರು ।
ಮನಸತ್ಯವೆಂಬುವರು ।
ಧನಸತ್ಯವೆಂದು ನುಡಿಯುವರು ಲೋಕದೊಳ ॥
ಗನುಭವಿಕರಿಲ್ಲ ಸರ್ವಜ್ಞ ॥ ೧ ॥

§ § § § § § §

ಎಂಜ ಲೆಂಜಲುಎಂದು ।
ಅಂಜಂಜಿ ಯೋಡುವರು ।
ಎಂಜಲಿಂ ಜಗವು ಹುಟ್ಟಿಹುದು ಪುಟ್ಟುವದು ॥
ಅಂಜದಿರು ನೀನು ಸರ್ವಜ್ಞ ॥

§ § ‡ † § §

ಲೇ—ಶ್ರೀ ಶಂಕರ



# ಧರ್ಮರಾಜ್ಯ

| ಸಂಪುಟ ೨. | ವಿಕ್ರಮ ಸಂವತ್ಸರ ಶ್ರಾವಣ | ಸಂಚಿಕೆ ೫. |
|---|---|---|

## ಗುರುಪದೇಶವೂ,

## ಧರ್ಮಪ್ರಚಾರವೂ.

(ಲೇ :— ಶ್ರೀ. ಷಡಕ್ಷರಶಿವಾಚಾರ್ಯರು ಮುಸಿಗಿ ಹಿರೇಮಠ.)

ವೇದಾಗಮಗಳಿಂದ ಸಿದ್ಧಾಂತ ಗೊಳಿಸಲ್ಪಟ್ಟ ವೈದಿಕ ವೀರಶೈವ ಮತವು ಭರತ ಖಂಡದಲ್ಲಿ ಜ್ಯೋತಿ ರೂಪವಾಗಿ ಬೆಳಗುತ್ತಲಿದೆ. ಈ ನಮ್ಮ ಮತ ಸಿದ್ಧಾಂತ ತತ್ವಗಳನ್ನು ನಿರೂಪಿಸಿದ ಆಚಾರ್ಯಪುಂಗವರು ಕಾಲಗತಿಯಿಂದ ಧರ್ಮದ ಕ್ಷೀಣದೆಶೆಯಲ್ಲಿ ಉದಯಿಸಿ ಪುನಃ ಪುನಃ ತತ್ವೋಪದೇಶದಿಂದ ಧರ್ಮ ಜಾಗ್ರತೆಯನ್ನು ಮಾಡಿ ತಮ್ಮ ಮತಪ್ರಚಾರವನ್ನು ಆಸೇತು ಹಿಮಾಚಲದವರೆಗೂ ಪ್ರಕಾಶಪಡಿಸಿದವರಾದರು. ಅಂತೇನೇ ಧರ್ಮದ ವೈಶಾಲ್ಯವು ಬೆಳದಿಂಗಳಂತೆ ಎಲ್ಲ ಕಡೆಗೂ ಹಬ್ಬಿತು. ಇದು ಧರ್ಮೋಪದೇಶದ ಗುರಿ. ಆಸೇತು ಹಿಮಾಚಲದವರೆಗೂ, ಸಂಚರಿಸಿ ಲಂಕೆಯಲ್ಲಿ ವಿಭೀಷಣನಿಗೂ, ಕಾಂಚಿಯಲ್ಲಿ ವರದ ರಾಜನಿಗೂ, ಕೊಲ್ಲಾಪುರದ ಗೋರಕ್ಷನಾಥನಿಗೂ, ಉಜ್ಜಯಿನಿ ವಿಕ್ರಮನಿಗೂ, ಇವರೇ ಮೊದಲಾದ ಮುಖ್ಯ ಮುಖ್ಯ ರಾಜರುಗಳಿಗೆ ತಮ್ಮ ಅಪಾರ ಮಹಿಮೆಯನ್ನು ತೋರಿಸಿ ಅವರಲ್ಲಿರುವ ಅಹಂಕಾರ ಮಮಕಾರಗಳನ್ನೆಲ್ಲ ಹೋಗಲಾಡಿಸಿ ಭಕ್ತಿರಸವನ್ನು ತುಂಬಿ ಮಹಾ ಮಂತ್ರ ಬೀಜಾಕ್ಷರವನ್ನು ಬಿತ್ತಿ ಸಫಲಗೊಳಿಸಿದರು.

ರಾಜಾಧಿರಾಜರು ಒಬ್ಬ ಹುಚ್ಚನಂತಿರುವ ಮೂರ್ತಿಗೆ ಶಿರಬಾಗಿ ಕರಮುಗಿದು ಬೇಡಿದ ಶಿವತತ್ವರಹಸ್ಯವು ಗುರುವಿನಲ್ಲಿ ಕರುಣ ದೋರಿದಲ್ಲಿ ಅವರಿಗೆ ನಿರೂಪಿಸಿದ ತನ್ನ ಅಮೃತ ವಾಕ್ಯಗಳಿಂದ ಸಂತೈಸಿಸಲ್ಪಟ್ಟಿದ್ದು, ತಪಸ್ಸಿನ ಶಕ್ತಿಯೂ, ಮತ್ತು ಉಪದೇಶ ಮಹತ್ವವೂ, ಮುಖ್ಯವಾದವುಗಳಾಗಿವೆ. ತಪಶ್ಶಕ್ತಿಯು ಭವಬಂಧನ ವೃಕ್ಷವನ್ನು ಕತ್ತರಿಸುವ ಗುರುವಿನ ಕರವಾರವಾಗಿದೆ. ಉಪದೇಶ ರೂಪವಾದ ವ್ಯದು ಮಧುರವಾಕ್ಯವು ಭಕ್ತರ ಮನಸ್ಸನ್ನು ಸ್ವಚ್ಛಂದಗೊಳಿಸಿ ತನ್ನ ಪಾದಕಮಲದಲ್ಲಿರಿಸುವ ಆಕರ್ಷಣಶಕ್ತಿಯುಳ್ಳದ್ದಾಗಿರುವದು. ಮತ್ತು ಜ್ಞಾನಶಕ್ತಿಯನ್ನು ಹೆಚ್ಚಿಸುವುದು. ಅಂತೇನೇ ಗುಕಾರಸ್ತ್ವಂಧಕಾರಃ ಸ್ಯಾತ್ । ರುಕಾರಸ್ತನ್ನಿರೋಧಕಃ ॥ ಎಂಬುವಂತೆ ಮಲಿನವಾದ ಮನಸ್ಸನ್ನು ತೊಳೆದು ಆಚರಣೆಗೆತಕ್ಕ ಧರ್ಮಜ್ಞಾನವನ್ನುಂಟುಮಾಡುವುದೇ ಶ್ರೀ ಗುರುವಿನ ಪ್ರಸಾದವಾಣಿಯು. ಈ ವಾಕ್ಯವು ವೇದಾಗಮಗಳ ಸಾರಭೂತವಾದುದರಿಂದಲೇ ನಿಜಗುಣರು "ಗುರುವಚನದಿಂದಧಿಕ ತಮಸುಧೆಯುಂಟೇ? " ಎಂತಲೂ " ಶ್ರೀಗುರು ವಚನೋಪದೇಶವ ನಾಲಿಸಿದಾಗಳಹುದು ನರರಿಗೆ ಮುಕುತಿ " ಎಂದೂ ಅಧಿಕಾರಯುಕ್ತವಾದವಾಣಿಯೂ. ವೇದವಾಕ್ಯ ಅತಿಕ್ರಮಣದಿಂದ ಪಾಪ ಸಂಘಟನೆಯೂ ಗುರುವಾಕ್ಯೋಲ್ಲಂಘನೆ ಯಿಂದ ಭವರೋಗನಾಶಕಿಯೂ ಆಗುವನು. ಆದುದರಿಂದ ಈ ಮನುಷ್ಯಜನ್ಮವನ್ನು ವ್ಯರ್ಥವಾಗಿ ಕಳೆದುಕೊಂಡು ನರಕಜೀವಿಯಾಗಿ ಉಳಿಯುವದು ವಿಹಿತವಲ್ಲ.

ಎಲ್ಲಾ ಜೀವನಕೋಟಿಯಲ್ಲಿ ಮನುಷ್ಯ ಜೀವನವು ಜಗತ್ತಿನ ಎಲ್ಲಾ ವಸ್ತುವಿನ ವಿಚಾರವನ್ನು ತಿಳಿಯಬಲ್ಲ ಶಕ್ತಿಯುಳ್ಳದ್ದಾಗಿದ್ದರೂ ಅದನ್ನು ಅಶಕ್ತರೀತಿಯಲ್ಲಿಟ್ಟುಕೊಂಡು ಜೀವನಕಾಲವನ್ನು ವ್ಯರ್ಥಗೊಳಿಸುವದು ಕೇವಲ ಪಶುವರ್ಗಕ್ಕೆ ಸೇರಿದಂತೆಯೇ ಸರಿ. ಹೇಗೆ ಭಾವಿಯನೀರು ಉಪಯೋಗಿಸದಿದ್ದರೆ ಮಲಿತು ನಿಷ್ಪ್ರಯೋಜನಕರವಾಗುವದೋ ಹಾಗೇ ಜ್ಞಾನದ ರೀತಿಯಾಗಿದೆ.

ಯಾವ ಜೀವನಕ್ರಮದಲ್ಲಿ ಏನೇನುನಡಿಸಬೇಕೋ ಅದೆಲ್ಲವೂ ಒಂದು ಕ್ರಮಬದ್ಧವಾಗಿಯೂ, ಅವಿಚ್ಛಿನ್ನವಾಗಿಯೂ, ನಡೆದರೆ ಜೀವನ ಕ್ರಮಕ್ಕೆ ಬೇಕಾದಶಾಂತಿಯು ಸುಲಭರೀತಿಯಲ್ಲಿ ಫಲಿಸುವದು.

ಮಾನವ ವರ್ಗವಾಗಲಿ, ಪಶುವರ್ಗವಾಗಲಿ, ಶಿಕ್ಷಕನನ್ನು ಹೊಂದದ ಹೊರತು ಎಂದೂ ಸುಶಿಕ್ಷಿತಗೆ ಬರಲಾರವು. ಕಿಂಚಿತ್ ಜ್ಞಾನವುಳ್ಳ ಪಶುವು ಮನುಷ್ಯನಿಂದ ಶಿಕ್ಷಿಸಲ್ಪಟ್ಟ ಪದ್ಧತಿಯನ್ನು ಆಜೀವ ಪರ್ಯಂತರವಾಗಿ ಅನುಸರಿಸಿಹೋಗುವದು. ಆದರೆ ಅದೇ ಜ್ಞಾನಿಯಿಂದ ಶಿಕ್ಷಿಸಲ್ಪಟ್ಟ ಮಾನವ ವರ್ಗವು ತನ್ನ ಜೀವದ ಒಂದಂಶದಲ್ಲಿಯಾದರೂ, ಪೂರ್ತಿಯಾಗಿ ನಡೆಯುವ ಧೃಢತೆಯು ಕಾಣಲಾರದಾಗಿದೆ.

ಅದಕ್ಕೋಸ್ಕರ ಮಾನವ ವರ್ಗದಲ್ಲಿ ಅಧಿಕಾರಯುಕ್ತವಾದ ಗುರುವರ್ಗವೆಂಬುದು ಜಾಗ್ರತೆಗೊಳಿಸುವ ಪ್ರಜ್ವಲ ಜ್ಯೋತಿಯಾಗಿದೆ ಅಂಧಕಾರವನ್ನು ಹೋಗಲಾಡಿಸಿ ಜಗತ್ತಿಗೆ ತನ್ನ ಪ್ರಭೆಯನ್ನುಚೆಲ್ಲಿ ಪ್ರಾಣಿಗಳನ್ನು ಸಚೇತರನ್ನಾಗಿಮಾಡುವುದರಲ್ಲಿ ಸಮರ್ಥವಾಗಿದೆ. ಅ ಜ್ಞಾ ನ ವ ನ್ನು ಕ ಳೆ ದು ಅ ವ ರ ಹೃದಯ ಕಮಲ ವನ್ನರಳಿಸಿ ತನ್ನ ಶಾಂತಿ ಮಾರ್ಗಕ್ಕೆ ಒಯ್ಯುವ ಭಾರವು ಗುರುವಿನದಾಗಿರುತ್ತದೆ.

ಆಧುನಿಕಸ್ಥಿತಿಯಲ್ಲಿ ಕ್ರಮತಪ್ಪಿ ಮನಬಂದಂತೆ ಹರಿದು ಹಂಚಿ ಹೋಗುವ ನಮ್ಮ ವೀರಶೈವಮತವನ್ನು ಉಪದೇಶಶಕ್ತಿಯಿಂದ ಧೃಡಗೊಳಿಸುವ ಕಾರ್ಯವನ್ನು ಕೈಕೊಳ್ಳಲಿಕ್ಕೆ ಗುರುವರ್ಗದ ಪಟ್ಟಾಧಿಕಾರಿಗಳು ಬದ್ಧಕಂಕಣರಾಗಬೇಕು. ಇತರೆ ಕ್ರಿಶ್ಚಿಯನ್, ಮುಸಲ್ಮಾನ ಆರ್ಯಸಮಾಜ, ಮೊದಲಾದ ಮತಗಳು ಭರತಖಂಡದಲ್ಲಿ ಅತ್ಯಂತ ಪ್ರಚಾರಕ್ಕೆಬಂದಿರುವಕಾರಣವಾವುದೆಂದುತಿಳಿದಲ್ಲಿ ಆಯಾಯಧರ್ಮದ ಗುರುಗಳ ಉ ಪ ದೇ ಶ ವೇ ಮೂಲ ಕಾರಣವೆಂದು ಕಂಡುಬರುವದು ಕೆರೆಯಲ್ಲಿಯ ನೀರನ್ನು ವಾಯುಶಕ್ತಿಯುತರತರಂಗವಾಗಿ ಹರಿಸುವಂತೆ ಉಪದೇಶಶಕ್ತಿಯು ಮತವನ್ನು ವಿಶಾಲವಾಗಿ ಹಬ್ಬಿಸುತ್ತದೆ. ಆದುದರಿಂದ ನಮ್ಮ ಗುರುವರ್ಗದವರೆಲ್ಲ ಉಪದೇಶಕರ್ತೃಗಳಾಗಿ ನಿಂತು ಸಮಾಜಸೇವೆಯಲ್ಲಿ ಶ್ರದ್ಧೆಯುಳ್ಳವರಾಗಬೇಕು. ಸಧ್ಯದಲ್ಲಿ ಬೆಂಗಳೂರು ಮಹಂತಿನಮಠದ ಶ್ರೀಗಂಗಾಧರಶಿವಾಚಾರ್ಯರು ಹಸಗೋಡ ಸತ್ತಿಗೇರಿ, ಸೂಡಿ, ಹುಟಗಿ, ಶ್ರೀ ಪಟ್ಟಾಧ್ಯಕ್ಷರೂ, ಚಿಕ್ಕಮಣ್ಣೂರು ಪಟ್ಟಾಧ್ಯಕ್ಷರೂ, ವೇ॥ ಶ್ರೀ ಕಾಶೀನಾಥಪಂಡಿತರೂ ಚಿದರೀ ಮಠದ ಶ್ರೀ ವೀರಭದ್ರ ಶಾಸ್ತ್ರಿಗಳೂ, ಆಯಾಪ್ರಾಂತಗಳಲ್ಲಿ ನ ಡೆ ಸಿ ರು ವ ಕಾರ್ಯಗಳು ಲೋಕಪ್ರಿಯವಾದವುಗಳಾಗಿರುತ್ತವೆ.

ಧರ್ಮರಾಜ್ಯ ಮಾಸಪತ್ರಿಕೆಯ ಕಾರ್ಯವು ಸ್ತುತ್ಯರೂಪವಾಗಿದೆ. ಇದರಂತೆ ಉಳಿದಗುರುವರ್ಗದವರು ಅವಶ್ಯವಾಗಿ ಸಮಾಜಸೇವೆಗೆ ನಿರುತರಾಗಬೇಕು.

ಇದೇ ಉದ್ದೇಶದಿಂದ ಹಿಂದಿನ ಉ ಜ್ಜ ಯಿ ನೀ ಜ ಗ ದ್ಗು ರು ಶ್ರೀ ೧೦೮ ಸಿದ್ಧಲಿಂಗ ಮಹಾಸ್ವಾಮಿಗಳು ಅಖಿಲಭಾರತ ವೀ ರ ಶೈ ವ ಪಟ್ಟ ಚರಾಧಿಕಾರ ಸಮ್ಮೇಲನವನ್ನು ಸ್ಥಾಪಿಸಿ ಅವಿಚ್ಛಿನ್ನವಾಗಿ ೮-೧೦ ಸಭೆಗಳನ್ನು ಜರುಗಿಸಿದವರಾದರು. ಇತ್ತೀಚಿಗೆ ಅಂಥಾ ಸಭಾಸಂದರ್ಶನವನ್ನು ಪಡೆಯುವ ಸುದೈವವು ಸಮಾಜಕ್ಕೆ ಅಪರೂಪವಾಗಿತ್ತು. ಕಾರಣ ಪುನಃ ಅಂಥಹ ಕಾರ್ಯವನ್ನೇ ವೃದ್ಧಿಪಡಿಸಲೋಸುಗ ಅಭಿನವದಾರುಕ ಜಗದ್ಗುರು ಸಿದ್ಧೇಶ್ವರರಾಜದೇಶಿಕೇಂದ್ರ ಮಹಾಸ್ವಾಮಿಗಳು ಮೊದಮೊದಲು ಜಿಲ್ಲಾ ಸಮ್ಮೇಲನಗಳನ್ನೇರ್ಪಡಿಸಿ ಆಯಾಪ್ರಾಂತಗಳನ್ನು ಸುಧಾರಿಸುತ್ತ ಮುಂದೆ ವಿ ಶಾ ಲ ಸ್ಥಿತಿಗೆ ಒಯ್ಯುವುದೊಳ್ಳೆಯದೆಂದು ಹಿಂದಿನ ವರ್ಷ ಬಳ್ಳಾರಿಯಲ್ಲಿ ಜಿಲ್ಲಾ ಪ್ರಥಮ ಸಮ್ಮೇಲನವನ್ನು ಜರುಗಿಸಿ ಈ ವರ್ಷ ದ್ವಿತೀಯ ಸಮ್ಮೇಲನವನ್ನು ತಮ್ಮ ಪೀಠದಲ್ಲಿಯೇ ನೆರವೇರಿಸಿದರು. ಈ ಸಮ್ಮೇಲನದ ಕಾರ್ಯಗಳು ಯಶಸ್ವಿಯಾಗಿ ನಡೆದವುಗಳಲ್ಲದೆ ಸಾದಾ ಠರಾವುಗಳು ಕಾರ್ಯರೂಪಕ್ಕೆ ಬಂದು ಸಕಲರಿಗೂ ಮಾನ್ಯವಾಗಿ ಧರ್ಮವು ಸುಶಿಕ್ಷಿತೆಗೆ ಶೀಘ್ರದಲ್ಲಿಯೇ ಬರುವವೆಂದು ನನ್ನ ನಂಬಿಗೆಯು.

ಜ ಗ ದ್ಗು ರು ಗ ಳ ಮಹಾ ಉಪದೇಶವು ಅಂಬುಧಿಗೆ ಚಂದ್ರಮನು ಹೇಗೋ ಹಾಗೆ ಸಭಾಮಂಡಲವನ್ನು ಆನಂದಮಂದಿರವನ್ನಾಗಿ ಮಾಡುತ್ತಿತ್ತು. ಆಚಾರ್ಯ ಮತ್ತು ಮಹಾಚಾರ್ಯರ ಉಪದೇಶ ಸಂಘ ಸಮ್ಮೇಲನಗಳುತಪ್ಪದೆ ಪ್ರತಿಪ್ರಾಂತದಲ್ಲಿ ನಡಿಯುವಲ್ಲಿ ಧರ್ಮದ ಪ್ರವಾಹವನ್ನು ತಡೆಯುವರಾರು ? ಕಾರಣ ಆಯಾ ಪ್ರಾಂತದ ಪಟ್ಟಚರಾಧಿಕಾರಿಗಳು ಆ ಕಾರ್ಯವನ್ನು ತಮ್ಮ ಸ್ವಾಭಿಮಾನದಲ್ಲಿ ತಂದುಕೊಂಡು ವೃ ದ್ಧಿ ವ ಹಿ ಸಿ ಕಾರ್ಯಭಾಗಿಗಳಾಗಬೇಕೆಂದು ವಿನಯಭಾವದಿಂದ ಬೇಡಿಕೊಳ್ಳುವೆ.

—·—·—

# " ಚತುರಾಚಾರ್ಯ ==

# == ಪುರಾಣ ವಿಚಾರ."

"" ಕೊಲನುಪಾಕ ಮಹಾತ್ಮ್ಯ"" ವೆಂಬ ತೆನಗು ಭಾಷೆಯ ಗ್ರಂಥದಿಂದ ಚತುರಾಚಾರ್ಯ ಪುರಾಣವು ಕನ್ನಡಕ್ಕೆ ಬಂದಿದೆ. ಮೂಲಗ್ರಂಥಕ್ಕೆ ಗ್ರಂಥವೇ ಕನ್ನಡಕ್ಕೆ ಅನುವಾದವಾಗಿದ್ದರೆ ಬಹಳ ಅನುಕೂಲವಾಗಬಹುದಾಗಿದ್ದಿತು. ಚತುರಾಚಾರ್ಯ ಪುರಾಣ ಕರ್ತರು ಈ ವಿಷಯದಲ್ಲಿ ಅಷ್ಟೊಂದು ಗಮನಿಸದಿರುವುದೇ ಬಹುಜನರ ಸಂದೇಹ ಕುತರ್ಕಗಳಿಗೆ ಕಾರಣವಾಗಿದೆ. ಚತುರಾಚಾರ್ಯರ ಪುರಾಣ ಕಾಲಕ್ಕಿಂತಲೂ ಮೊದಲೇ ಆಗಿಹೋದ ಶ್ರೀ ಮರಿತೊಂಟದಾರ್ಯರೇ ಮೊದಲಾದವರು " ಭುವನಪ್ರಸಿದ್ಧ ಪಂಚಾಚಾರ್ಯಾಃ " ಎಂದು ಮತಸ್ಥಾಪನಾಚಾರ್ಯರು ಐವರೆಂದು ಹೇಳಿರುವುದು ಈ ಕವಿಗೆ ತಿಳಿದೂ ಚತುರಾಚಾರ್ಯ ಪುರಾಣವೆಂದು ಅದೇಕೆ ತನ್ನ ಕೃತಿಗೆ ಹೆಸರಿಟ್ಟನೋ ತಿಳಿಯದಾಗಿದೆ. ಈ ಪುರಾಣವನ್ನು ಪರಿಶೋಧಿಸಿ ನೋಡಿದ್ದರಲ್ಲಿ ಲೋಪದೋಷಗಳು ಹೇರಳವಾಗಿ ದೊರೆವವು. ಆದರೂ ಸಮಗ್ರಗ್ರಂಥದ ವಿಚಾರವಾಗಿ ಶೋಧಿಸಿದಷ್ಟು ಸಂಗತಿಗಳನ್ನು ವಾಚಕರ ಗಮನಕ್ಕೆ ತರುವುದು ನಮ್ಮ ಕರ್ತವ್ಯವಾಗಿದೆ.

ಸಂಧಿ ೧ ರಲ್ಲಿ ಕವಿಯು ತನ್ನ ಗುರುಪೀಠವನ್ನೂ, ವಿದ್ಯಾ ಗುರುವನ್ನೂ, ಸ್ತುತಿಸುತ್ತಾನೆ.

ಭಾ. ಷ॥ " ಪರಮ ಕಂಸಿದ್ಧೇಶ್ವರನ ಪದಸರಸಿರುಹ ಸಂಜನಿತ ಸದ್ಗುಣ ।
ಭರಣ ಭವ್ಯ ಶ್ರೀ ಬಸವಲಿಂಗಾರ್ಯರಾ ಬೋಧೆಸ್ತ॥
ತರುಳ ಕಂಬಸವೇಶ್ವರ ಶ್ರೀ ಚರಣ ಕಮಲದೊಳುದಯಿಸಿದ ಸ
ದ್ಗುರು ಪತೇಂದ್ರಾರ್ಯಾದಿ ಗುರು ಪೀಠಕ್ಕೆ ವಂದಿಪೆನು ॥೧೪॥

ವಿಚಾರ:— ಕವಿಯ ವಂಶದಗುರುಗಳು (೧) ಕರಿಸಿದ್ಧೇಶ್ವರ (೨) ಬಸವಲಿಂಗಾರ್ಯ (೩) ಕರಿಬಸವೇಶ್ವರರು ಸರಿಯೇ ಆ ಮುಂದಿನ ಪಠೇಂಪ್ರಾರ್ಯ ಎಂಬುದು ಸರಿಯಾದ ಅರ್ಥವನ್ನು ತೋರಿಸುವುದಿಲ್ಲ ವೆಂದಮೇಲೆ ಆ ಸ್ಥಲದಲ್ಲಿ ಬೇರೆಯ ಹೆಸರೇನಾದರೂ ಇರಲೇಬೇಕು: ಮೈಶೂರು ಸೀಮೆಯಲ್ಲಿರುವ ರಾಮಗಿರಿ ಎಂಬ ಗ್ರಾಮದಲ್ಲಿ ಕರಿಸಿದ್ಧೇಶ್ವರದೇವರು ಪ್ರಸಿದ್ಧವಾಗಿದೆ. ಇದು ರೇವಣ ಸಿದ್ಧರ ಎರಡನೆಯ ಹೆಸರಿನ ದೇವರೆಂದು ತಿಳಿದುಬರುತ್ತದೆ. ರೇವಣ ಸಾಂಗತ್ಯದಲ್ಲಿ "ಇದು ರಾಮುಗಿರಿಯ ಶ್ರೀ ಕರಿಸಿದ್ಧೇಶನ" ಮುಂತಾಗಿವರ್ಣಿತವಾಗಿದೆ,

ಇನ್ನು ಕವಿಯು ವಿದ್ಯಾಗುರುವನ್ನು ಹೀಗೆಸ್ತುತಿಸುತ್ತಾನೆ:—

"........ತೋಂಟದಸಿದ್ಧಗುರುವಿನ ಪರಿವಿಡಿದುಬಂದು ||೧೫|| ಸಾರಶಿವ ಲಿಂಗಾರ್ಯರಸುಕರ ವಾರಿಜೋದಯ.... | ಗುರುವೃಷಭಲಿಂಗನ...|೧೬

ವಿಚಾರ:— ಕವಿಯ ವಂಶದ ಗುರುವೂ, ವಿದ್ಯಾಗುರುವೂ, ಒಂದೇ ಹೆಸರುಳ್ಳವರಾಗಿರುವುದರಿಂದ ಅಲ್ಲಲ್ಲಿಯೇ ಕವಿಯು ವೃಷಲಿಂಗಾರ್ಯನಸ್ತುತಿಯನ್ನು ಮಾಡಿರುವುದು ಇಬ್ಬರಿಗೂ ಸಂಬಂಧಿಸುತ್ತದೆ. ಆದರೆ ಕೆಲವುಕಡೆ ತಿಲಕೂರು ಪುರ ವೃಷಲಿಂಗಾರ್ಯ ಎಂದೂ ಹೇಳುವನಾದುದರಿಂದ ಅಲ್ಲಿ ಈತನ ವಂಶದ ಗುರುವನ್ನೆಂತಲೇ ತಿಳಿದು ಕೊಳ್ಳಬೇಕು.

ಕಥಾಮುಖದಲ್ಲಿ ಒಬ್ಬ ಭಕ್ತನು ಓರ್ವಬಾಲಕನನ್ನು ತೋಂಟದಾರ್ಯರ ಶಿಷ್ಯ ಪರಂಪರೆಯುಳ್ಳ ವೃಷಲಿಂಗಾರ್ಯರಲ್ಲಿಗೆ ಕರೆದು ತರುವನು. ವೃಷಲಿಂಗಾರ್ಯರು ಗ್ರಾಮ–ಸೀಮೆಗಳನ್ನು ಕೇಳುವಾಗ ಆ ಭಕ್ತನುಹೇಳುವ ಮಾತಿನಲ್ಲಿ ".... ದುರ್ಗವೆಂಬ ಪಟ್ಟಣವೆಂತಲೂ ಅದನ್ನು ಅನಂತರಾಜೇಂದ್ರ ನೆಂಬವನಹೆಂಡತಿ ಯಾದ ಅಯ್ಯಮ್ಮ ಎಂಬವಳು ಆಳುತ್ತಿರುವಳೆಂದೂ, ತಿಲಕಪುರ ವೆಂಬುವದು ಆಪಟ್ಟಣಕ್ಕೆ ಸೇರಿದ ಗ್ರಾಮವೆಂತಲೂ, ಆ ಗ್ರಾಮವಾಸಿಯಾದ ನನ್ನಹೆಸರು ಚೆನ್ನಮಲ್ಲಪ್ಪ ನೆಂತಲೂ, ಈ ಬಾಲಕನು ಆ ಗ್ರಾಮದ ಗುರುವಾದ ಕರಿಯಯ್ಯ ನಮಗ ರಾಚಯ್ಯ, ರಾಚಯ್ಯನಮಗ ಮುಗ್ಧ ಸಂಗಯ್ಯ, ಮುಗ್ಧಸಂಗಯ್ಯನಮಗ ಶಿವಮೂರ್ತಯ್ಯ, ಅವನಮಗನೇ ಇವನು ಸೋಮಯ್ಯ ನೆಂತಲೂ," ಹೇಳುತ್ತಾನೆ.

ವಿಚಾರ:- ಕೆರೆಸಿದ್ಧೇಶ, ಕೆರೆಯಯ್ಯ, ತೋಂಟದ ಶಿದ್ಧ, ದುರ್ಗ ಮುಂತಾದವುಗಳಿಂದ ಈ ಕವಿಯು ರಾಮಗಿರಿ—ಚಿತ್ರದುರ್ಗ ಈ ಪ್ರಾಂತಗಳ ಸಮೀಪದಲ್ಲಿ ಇದ್ದವನೇ ಎಂದು ಹೇಳಬೇಕಾಗಿದೆ. ತಿಲಕಪುರ ಅಥವಾ ತಿಲಕೂರು ಎಂಬುದು ಈ ಪ್ರಾಂತಗಳಲ್ಲಿ ಇದೆಯೇ ಎಂಬುದನ್ನು ವಿಚಾರಮಾಡಬೇಕಾಗಿದೆ.

ಕವಿಯು ದುರ್ಗದಲ್ಲಿ ರಾಜರನ್ನು ಹೇಳುವುದರಿಂದ ಆ ಸಮಯ ದಲ್ಲಿ ದುರ್ಗವು ಮೈಸೂರು ರಾಜರವಶದಲ್ಲಿ ಇನ್ನೂ ಬಂದಿರಲಿಲ್ಲವೆಂದು ತಿಳಿಯುವುದು. ದುರ್ಗವನ್ನು ಎಷ್ಟೋ ವರ್ಷಗಳಿಂದ ಪಾಳ್ಯಗಾರರು ಆಳುತ್ತಿದ್ದುದು ಸರಿಯಷ್ಟೆ! ಪಾಳ್ಯಗಾರರಾಗಲಿ ಅಥವಾ ಬೇರೆಯವರಾಗಲಿ ದುರ್ಗವನ್ನು ರಾಜಧಾನಿಯನ್ನಾಗಿಮಾಡಿಕೊಂಡು ಈ ಕವಿಯ ಸಮ ಯದಲ್ಲಿ ಆಳುತ್ತಿರಬಹುದೆಂದು ಕಾಣುತ್ತದೆ.

ವಿದ್ಯಾಗುರು ವೃಷಭಲಿಂಗಾರ್ಯರು ಕವಿ ಸೋಮಯ್ಯನನ್ನು ನೋಡಬೇಕೆಂದು ತಿಲಕೂರಿಗೆಬಂದಿದ್ದರೆಂತಲೂ ಆ ಸಮಯದಲ್ಲಿ ತೆಲುಗು ಭಾಷೆಯಲ್ಲಿರುವ ಶ್ರೀ ಕೊಲನುಪಾಕ ಮಾಹಾತ್ಮ್ಯ ವೆಂಬಗ್ರಂಥ ವನ್ನು ಚತುರಾಚಾರ್ಯ ಪುರಾಣವೆಂಬಹೆಸರಿನಿಂದ ಕನ್ನಡಿಸೆಂದು ತನಗೆ ಹೇಳಿದರೆಂತಲೂ ಅಷ್ಟರಲ್ಲಿಯೇ ರಾಜರ ಬಿನ್ನಹಪತ್ರ ಬಂದುದ ರಿಂದ ಶ್ರಾವಣಮಾಸದ ಲಿಂಗಾರ್ಚನೆಗಾಗಿ ಹೊರಟುಹೋದರೆಂದು ಕವಿಯು ಬರೆದಿದ್ದಾನೆ. ಯಾವರಾಜರೆಂಬುದನ್ನು ಬರೆದಿಲ್ಲ.

ಆ ಮೇಲೆ ವೀರಭದ್ರದೇವರು ಕನಸಿನಲ್ಲಿಬಂದು ವರಪ್ರಸಾದ ವಿತ್ತನೆಂದೂ ಆಪ್ರಸಾದದಿಂದ ನಾನು ಈ ಕಾವ್ಯವನ್ನು ಬರೆಯಲು ಆರಂಭಿಸಿದ್ದೇನೆಂದೂ ಹೇಳಿದ್ದಾನೆ.

ಕವಿಗಳನ್ನು ಸ್ತೋತ್ರಮಾಡುವ ಪ್ರಸಂಗದಲ್ಲಿ "ಎಳಂದೂರು ಷಡಕ್ಷರದೇವಗೆ ವಂದಿಸುವೆ" ||೫೭|| ಎಂದು ಸ್ತುತಿಸಿರುವುದರಿಂದ ಕವಿಯು ಷಡಕ್ಷರದೇವರ ಕಾಲದಿಂದ್ಈಚೆಯವನೆಂದು ಗೊತ್ತಾಗುತ್ತದೆ.

ಸ್ಕಂಧಪುರಾಣವನ್ನು ತನ್ನವಂಶದ ಕೆರೆಬಸವೇಶ ಕವಿಗಳು ಕನ್ನಡಿಸಿದರೆಂದು ಬರೆಯುತ್ತಾನೆ.

ಕವಿಯು ತನ್ನ ವಿದ್ಯಾಗುರುವಿಗೆ ಆಚಾರ್ಯವರ, ಚರಕುಲ ಚಕ್ರವರ್ತಿಲಲಾಮ, (ಸಂ೨, ಪರಿ ೧,) ೩೭ ರಲ್ಲಿ ಬರೆದಿರುವುದನ್ನು

ನೋಡಿದರೆ ಗುರುಭಕ್ತಿಯ ಆಧಿಕ್ಯವು ಒಡೆದುಕಾಣುವುದು.

ತಾನು "ಹತ್ತೆಂಟೊರುಷ" ವಿದ್ಯಾಭ್ಯಾಸಮಾಡಿದಂತೆ ಹೇಳುತ್ತಾನೆ. (ಪದ್ಯ ೪೦)

ವಿಚಾರ:- ಹತ್ತೆಂಟು ಶಬ್ದದಮುಂದೆ ಸಂಸ್ಕೃತಭಾಷೆಯ ವರ್ಷ ಶಬ್ದಬಂದು ಹೇಗೆತಾನೆ ಹತ್ತೆಂಟೊರುಷವೆಂದು ಸಂಧಿಯಾಗುವದು? ಹೀಗೆಯೇ ಅಲ್ಲಲ್ಲಿ ಸಂಸ್ಕೃತ ಕನ್ನಡಶಬ್ದಗಳೊಡನೆ ಅರಿಸಮಾಸವನ್ನು ಲೆಕ್ಕಿಸದೆ ಸಂಧಿಯನ್ನು ಮಾಡಿರುವನು. ಇದನ್ನೆಲ್ಲ ವಿಚಾರಮಾಡಿದರೆ ಕವಿತೆ ಪ್ರೌಢಶೈಲಿಗೆ ಸೇರಿದುದೆಂದು ನಿಶ್ಚಯಿಸಲು ಬರುವಂತಿಲ್ಲ, ಆದರೂ ಕೆಲ ಕೆಲವು ಸ್ಥಾನಗಳಲ್ಲಿ ಲಲಿತವಾದ ಸರಣಿಯು ಸ್ವಾಭಾವಿಕವಾಗಿಬಂದಿದೆ. ಈ ರೀತಿಗಳನ್ನು ವಿಚಾರಿಸುತ್ತ ಹೋದರೆ ಈಕವಿಯು ಕಾಲದಿಂದೀಚೆನವರು ಪ್ರತಿಲಿಪಿಗಳನ್ನು ಮಾಡಿಕೊಳ್ಳುತ್ತ ಹೀಗೇನಾದರೂ ಅಶುದ್ಧರೀತಿಗೆ ತಂದಿರಬಹುದೇ ಎಂದು ಸಂದೇಹ ಉಂಟಾಗುವದು. ಚತುರಾಚಾರ್ಯ ಪುರಾಣದ ಇನ್ನೂ ಕೆಲವು ಹಸ್ತಲಿಖಿತ ಪ್ರತಿಗಳು ದೊರೆವುದಾದರೆ ಎಲ್ಲಾ ವಿಚಾರಗಳನ್ನೂ ಸರಿಪಡಿಸಬಹುದಾಗಿದೆ. ೬೩ನೆಯ ಪದ್ಯದಲ್ಲಿ "ಸಾಹಿತ್ಯ ಶಾಸ್ತ್ರದ ಬಣಿತೆ" ಎಂದು ಸಾಹಿತ್ಯದ ಮೇಲ್ಮೆಯನ್ನು ಹೇಳುವುದರಿಂದ ಕವಿಯು ಸಂಸ್ಕೃತ ಸಾಹಿತ್ಯಶಾಸ್ತ್ರವನ್ನೇ ವಿಶೇಷವಾಗಿ ಅಭ್ಯಾಸ ಮಾಡಿರಬಹುದೆಂದು ಊಹಿಸಬಹುದು.

ಈ ಕಥೆಗೆ ಆದಿಯನ್ನು ಕವಿಯು ಹೀಗೆಹೇಳುತ್ತಾನೆ:—

"ಯಜುರ್ವೇದಸೂಕ್ತಿ" ಎಂಬುದನ್ನು ಮೊದಲು ಈಶ್ವರನು ಪಾರ್ವತೀದೇವಿಗೆ ಅಪ್ಪಣೆಮಾಡಿದನೆಂದೂ, ಆ ಮೇಲೆ ಅದನ್ನೇ ನಂದೀಶನು ಪ್ರಮಥರಿಗೆ ಹೇಳಿದನೆಂದೂ, ಆಮೇಲೆ ಸೂತಪುರಾಣಿಕನು ಶೌನಕಾದಿ ಮಹರ್ಷಿಗಳಿಗೆ ನೈಮಿಷಾರಣ್ಯದಲ್ಲಿ ಹೇಳಿದನೆಂದೂ ಮುಂತಾಗಿ;

ಕವಿಯು ಗೀರ್ವಾಣಭಾಷೆಯಲ್ಲಿ ಅಷ್ಟೊಂದು ಪಂಡಿತನಾಗಿದ್ದಂತೆ ತೋರುವುದಿಲ್ಲ' ಏಕೆಂದರೆ ವೀರಶೈವಮತ ವಿಷಯವನ್ನೂ, ಶೈವ ಸಿದ್ಧಾಂತವನ್ನೂ, ಶಿವಪ್ರಮಥರ ವಿಷಯವನ್ನೂ, ಪ್ರತಿಪಾದಿಸತಕ್ಕ ಪ್ರಾಚೀನ ಗ್ರಂಥಗಳು ಸಂಸ್ಕೃತ ಭಾಷೆಯಲ್ಲಿ ಎಷ್ಟೋ ಇರುವವು.

# ಶ್ರೀ ಶೈಲ ವೃದ್ಧ ಜಗದ್ಗುರುಗಳವರ ಶಿವೈಕ್ಯ

## ಸಂಕ್ಷೇಪ ಪುಣ್ಯ ಜೀವನ ಚರಿತ್ರ.

ಈ ಹಿಂದೆ ತಾ॥ ೭-೭-೪೦ ನೆಯ ಭಾನುವಾರ ಪ್ರಾತಃಕಾಲ ೧೧ ಘಂಟೆಗೆ ಉಜ್ಜಯಿನೀ ಜಗದ್ಗುರು ಶ್ರೀ ಸಿದ್ಧೇಶ್ವರ ಶಿವಾಚಾರ್ಯ ಮಹಾಸ್ವಾಮಿಗಳವರ ನೇತೃತ್ವದಲ್ಲಿ ಶ್ರೀ ಶೈಲ ಪೀಠ ಜಗದ್ಗುರು ಪಟ್ಟಾಧಿಕಾರವು ಯಾವ ಜಗದ್ಗುರು ಶ್ರೀ ಮನ್ನಾಗಲೂಟಿ ಭಿಕ್ಷಾವೃತ್ತಿ ಶಿವಾಚಾರ್ಯ ಮಹಾಸ್ವಾಮಿಗಳವರಿಂದ ಜಗದ್ವಿಖ್ಯಾತ ಪಂಡಿತರಾದ ಮುದೇನೂರು ಬೃಹನ್ಮಠಾಧೀಶ ಶ್ರೀ ವಾಗೀಶ ಶಿವಾಚಾರ್ಯರಿಗೆ ಅನುಗ್ರಹಿಸಲ್ಪಟ್ಟಿತೋ ಆ ವೃದ್ಧ ಜಗದ್ಗುರುಗಳವರು ತಾ. ೩೧-೭-೪೦ ಬುಧವಾರ ಪ್ರಾತಃಕಾಲ ೮ ಘಂ.ಗೆ ಶಿವೈಕ್ಯಹೊಂದಿದರೆಂದು ಬರೆಯಲು ವಿಷಾಧವೆನಿಸುವದು.

ಸದರಿ ಶ್ರೀಶೈಲ ಜಗದ್ಗುರುಗಳವರು ಕರ್ನೂಲು ಜಿಲ್ಲಾ ನಂದಿ ಕೊಟಕೂರು ತಾಲೂಕು ಇಸಗ್ಯಾಳ ಗ್ರಾಮದಲ್ಲಿ ಜನ್ಮತಾಳಿದರು. ಇವರ ತಂದೆ ತಾಯಿಗಳಾದ ವೇ॥ ಸಣ್ಣ ವೀರಭದ್ರಯ್ಯನವರೂ ಶ್ರೀ ಸಣ್ಣರಾಚಮ್ಮನವರೂ ಪುಣ್ಯ ಶ್ಲೋಕಿಗಳೆಂಬುದನ್ನು ಬರೆಯುವುದೇಬೇಕಿಲ್ಲ. ಚಿಕ್ಕವಯಸ್ಸಿನಲ್ಲಿ ಶ್ರೀಗಳವರ ವಿದ್ಯಾಭ್ಯಾಸವು ಇಸಗ್ಯಾಳ ಗ್ರಾಮದಲ್ಲಿ ನಡೆಯಿತು. ಪೂರ್ವ ಪುಣ್ಯದಯೋಗದಿಂದ ಶ್ರೀಗಳವರು ಶ್ರೀ ಶೈಲ ಪೀಠದ ಜಗದ್ಗುರು ಸಿಂಹಾಸನವನ್ನೇರಿದರು. ಇವರ ಗುರುಗಳಾದ ಜಗದ್ಗುರುಸಿದ್ಧ ಭಿಕ್ಷಾವೃತ್ತಿ ಶಿವಾಚಾರ್ಯ ಮಹಾಸ್ವಾಮಿಗಳವರೂ ಮಹಿಮಾಶಾಲಿಗಳಾಗಿದ್ದರು.

ಜಗದ್ಗುರು ಪೀಠವನ್ನು ಅಲಂಕರಿಸಿದಮೇಲೆ ಶ್ರೀ ಜಗದ್ಗುರು ನಾಗಲೂಟಿ ಭಿಕ್ಷಾವೃತ್ತಿ ಶಿವಾಚಾರ್ಯ ಮಹಾಸ್ವಾಮಿಗಳವರು ಶ್ರೀ ಶೈಲ ಪೀಠವು ಜಗದ್ವಿಖ್ಯಾತವಾಗಿ ಮೆರೆಯಬೇಕೆಂಬ ಉದ್ದೇಶದಿಂದ ಅನೇಕವಿಧವಾಗಿಯತ್ನಿಸಿ ಸೇವೆಸಲ್ಲಿಸಿದರು. ಶ್ರೀ ಜಗದ್ಗುರುಗಳವರು

ಕರ್ನಾಟಕ ಮೊದಲಾದ ಕಡೆಯೆಲ್ಲಾ ಸಂಚರಿಸಿ ಜನಗಳಿಗೆ ತತ್ವ ಬೋಧೆಯನ್ನು ೩೦ ವರ್ಷ ಬಿಟ್ಟುಬಿಡದೆ ನಡೆಯಿಸಿದರು. ಕಾಶೀ ಪೀಠದಲ್ಲಿ ನಡೆದ ಶ್ರೀ ಜಗದ್ಗುರು ಪಂಚಾಚಾರ್ಯ ಸಮ್ಮೇಲನದಲ್ಲಿ ನಮ್ಮ ವೃದ್ಧ ಜಗದ್ಗುರುಗಳವರು ವಿಶೇಷವಾಗಿ ಭಾಗವಹಿಸಿ ಆಸಮಯ ದಲ್ಲಿ ಇವರೇ ಜ್ಞಾನವಯೋವೃದ್ಧರೆಂದು ಅಲ್ಲಿ ಸರ್ವರಿಂದಲೂ ಪೂಜೆ ಹೊಂದಿದರು. ಮತ್ತು ಆತ್ಮಕೂರು-ಗುಂತಕಲ್ಲು ಮುಂತಾದ ಕಡೆಗಿದ್ದ ತಮ್ಮ ಪೀಠದ ಸ್ವಾಸ್ತಿಗಳನ್ನು ಭದ್ರಪಡಿಸಿ ಕಾಪಾಡುತ್ತ ಬಂದರು. ಇವರ ಸಂಕಲ್ಪಗಳು ಇನ್ನೂ ಅನೇಕವಾಗಿದ್ದವು. ಇವರು ಅಖಂಡ ಧೈರ್ಯಶಾಲಿಗಳು, ದಯಾಮಯರು, ಮತ್ತು ಪ್ರಾಮುಖ್ಯವಾಗಿ ಛಿನ್ಮಪ್ರತಿಜ್ಞೆಯಿಂದ ಬ್ರಹ್ಮಚರ್ಯವ್ರತವನ್ನು ಪಾಲಿಸಿದವರು. ಇವ ರಲ್ಲಿಯ ಸದಾಚಾರ ಸಂಪನ್ನತೆ, ಶಿವಪೂಜಾನಿಷ್ಠೆ, ಇವುಗಳು ಅವರ್ಣ ನೀಯವಾದವುಗಳು.

ಶ್ರೀಶೈಲಪೀಠವು ಸೂರ್ಯ ಸಿಂಹಾಸನವೆಂದೂ ಪಂಡಿತಾರಾಧ್ಯರ ಆಧಿಪತ್ಯಕ್ಕೆ ಸೇರಿದ್ದೆಂತಲೂ ಸುಪ್ರಸಿದ್ಧವಾಗಿದ್ದರೂ ಇತರ ಪೀಠಗಳಂತೆ ಮುಂದಕ್ಕೆಬರಲೊಲ್ಲದಲ್ಲ ಎಂಬುದೊಂದೇ ಇವರಿಗೆ ಬಹುದಿನಗಳಚಿಂತೆ ಈ ಚಿಂತೆಯನ್ನು ಕಳೆದುಕೊಳ್ಳಲು ಸ್ವಗೋತ್ರದವಿದ್ಯಾವಂತವಟುವನ್ನು ಪೀಠಕ್ಕೆ ಬ[illegible]ಾಯಿಸುವುದೇ ಮೂಲವೆಂಬುದನ್ನು ಎಂದೋನಿಶ್ಚಯಿಸಿ ಕೊಂಡಿ[illegible]. ಅವರ ಈ ಕೋರಿಕೆಯನ್ನು ಸಫಲಗೊಳಿಸಲು ಶ್ರೀಉಜ್ಜ[illegible]ೀ ಜಗದ್ಗುರು ಸಿದ್ಧಲಿಂಗಶಿವಾಚಾರ್ಯಶಿವಯೋಗಿಗಳು ವಿಶೇ[illegible]ಪ್ರಯತ್ನಿಸಿ ಮುದೇನೂರು ಬೃಹನ್ಮಠದ ಶ್ರೀ ವಾಗೀಶ ಶಿವಾಚ[illegible]ರನ್ನು ಕರೆಯಿಸಿ ಅಧಿಕಾರವನ್ನು ಸ್ವೀಕರಿಸಲು ಅಪ್ಪಣೆ ಮಾಡಿದ[illegible]. ಶ್ರೀಗಳವರ ಆಶೀರ್ವಾದದಿಂದ ವಿದ್ಯಾವಿನಯ ಸಂಪನ್ನ ರಾದ ಶ್ರೀ ವಾಗೀಶ ಶಿವಾಚಾರ್ಯರು ಸಮಾಜಸೇವೆಗೆ ತಮ್ಮ ತನು ವನ್ನು ಧಾರೆಯೆರೆದುದು ಸದರಿವೃದ್ಧ ಜಗದ್ಗುರುಗಳವರ ಮಹಿಮೆ ಯಲ್ಲದೆ ಬೇರೆಯಲ್ಲ.

ಸದರಿ ವೃದ್ಧ ಜಗದ್ಗುರುಗಳವರು ತಮ್ಮ ಉತ್ತರಾಧಿಕಾರವನ್ನು ದಯಪಾಲಿಸಿ ನೂತನ ಜಗದ್ಗುರುಗಳಾದ ಶ್ರೀ ವಾಗೀಶ ಪಂಡಿತಾರಾಧ್ಯ ಶಿವಾಚಾರ್ಯರನ್ನು ಬಳಿಯಲ್ಲಿ ಕೂಡ್ರಿಸಿಕೊಂಡು ಉಜ್ಜಯಿನೀ ಜಗದ್ಗುರುಗಳವರ ಸಮಕ್ಷಮ ಪ್ರತಿದಿನವೂ ಬೇರೆ ಬೇರೆ ವಿಧವಾಗಿ

ಪೀಠೋನ್ನತಿ— ಶ್ರೀ ಗಿ ರಿ ಮ ಲ್ಲಿ ಕಾ ರ್ಜು ನ ನ ಸೇವೆ ಇವು ನಿಮ್ಮಿಂದ ಸುಲಭವಾಗಿ ನಡೆಯಬೇಕಾದರೆ ಹೀಗೆ ಮಾಡಿರಿ ಹೀಗೆಮಾಡಿರೆಂದು ಅಪ್ಪಣೆಕೊಡಿಸುತ್ತಿದ್ದರು. ಶ್ರೀ ಉಜ್ಜಯಿನೀ ಜಗದ್ಗುರುಗಳವರು ವೃದ್ಧ ಜಗದ್ಗುರುಗಳವರ ಸೇವೆ ಶುಶ್ರೂಷೆಗಳನ್ನು ಅಹೋರಾತ್ರವೂ ಶಿವನಪೂಜೆಗಿಂತಲೂ ಜಗದ್ಗುರುಸೇವೆ ಘನವೆಂದು ದೇಹಕಷ್ಟಗಳನ್ನು ಎಷ್ಟೂ ಎಣಿಸದೆ ಮಾಡಿದುದನ್ನು ಈ ಲೇಖನಿಯು ಸ್ವಲ್ಪದರಲ್ಲಿ ವರ್ಣಿಸಲುಸಾಧ್ಯವೇ ಇಲ್ಲ. ಶ್ರೀ ಯವರಿಗೆ ರಕ್ತಾತಿಸಾರವು ಬಹಳ ಹಿಂಸೆ ಕೊಟ್ಟಿತು. ಕೊನೆಗೂ ಈ ಕಾಹಿಲೆ ಗುಣವಾಗಲೇ ಇಲ್ಲ.

ತಾ|| ೩೦—೭—೪೦ ನೆಯ ಮಂಗಳವಾರ ರಾತ್ರಿ ೧೦ ಘಂಟೆಗೆ ವೃದ್ಧಜಗದ್ಗುರುಗಳವರ ಆರೋಗ್ಯವು ಸ್ವಲ್ಪವ್ಯತ್ಯಾಸವೆಂದು ತಿಳಿಯಿತು ಆ ಕೂಡಲೇ ಉಜ್ಜಯಿನೀ ಶ್ರೀ ಜ ಗ ದ್ಗು ರು ಗ ಳ ವ ರೂ ನೂತನ ಜಗದ್ಗುರುಗಳವರೂ ಶ್ರೀ ಯವರಬಳಿಗೆಬಂದು ಸಕ್ರಮವಾಗಿ ವಿಭೂತಿ ವೀಳ್ಯವನ್ನು ವೇದ ಸಹಸ್ರನಾಮ ಪಠನೆಯೊಡನೆ ಪಾದಪೂಜೆಯನ್ನೂ ಶಿವಲಿಂಗಾರ್ಚನೆಯನ್ನೂ ನಡೆಯಿಸಿ ಅಖಂಡ ಶಿವನಾಮ ಭ ಜ ನೆ ಯನ್ನು ಪ್ರಾರಂಭಿಸಿ ಆಗಲೆ ಶ್ರೀ ಯವರ ಹಸ್ತದಿಂದ ದಾನ-ಧರ್ಮಾದಿಗಳನ್ನು ಮಾಡಿಸಿದರು ಶ್ರೀಯವರು ನೂತನಾಧಿಕಾರಿಗಳ ಮಸ್ತಕದಮೇಲೆ ಹಸ್ತಗಳನ್ನಿರಿಸಿ ಉಪದೇಶಮಾಡಿದ ಮಾತುಗಳು ಬಹಳ ಅಮೂಲ್ಯವಾದವುಗಳು:— "ಸರ್ವ ಪ್ರಜೆಗಳನ್ನೂ ಒಂದೇವಿಧವಾಗಿ ಕಂಡುಕೊಂಡು ಸರ್ವರ [illegible]ಮಗಳನ್ನೂ ಸಂಪಾದಿಸಿಕೊಳ್ಳಿರಿ! ನಮ್ಮ ಸಂಕಲ್ಪಗಳೆಲ್ಲವನ್ನೂ [illegible]ವೇರಿಸಿರಿ. ಪಂ ಡಿ ತಾ ರಾ ಧ್ಯ ರ ಈ ಪೀಠವನ್ನು ಉನ್ನತಿ ಹೊಂದಿ[illegible]ಕೆಂತಲೇ ಪಂಡಿತರಾದ ನಿಮ್ಮನ್ನು ಇಲ್ಲಿಗೆ ಅಧಿಕಾರಿಗಳನ್ನಾಗಿ ಮಾಡಿದ್ದೇವೆ. ಮಲ್ಲಿಕಾರ್ಜುನನ ಸೇವೆಯು ಈ ಪೀಠದ ಬಹು ಪ್ರಾಚೀನ ಪರಂಪರೆಯಿಂದ ಸಾಗಿಬಂದಿದೆ, ಇದನ್ನು ಇಡೀ ಸಮಾಜದೊಡನೆ ಸಮಾವೇಶವಾಗಿ ನೀವು ತೀವ್ರವಾಗಿ ಈಸೇವೆಯನ್ನು ಪ್ರಾರಂಭಿಸಿರಿ. ನಮಗೂ ಉಜ್ಜಯಿನೀ ಜಗದ್ಗುರುಗಳವರಿಗೂ ಈ ಮಹಾಪೀಠಕ್ಕೂ ಕೀ ರ್ತಿ ಯ ನ್ನು ತನ್ನಿರಿ" ಎಂದು ಅಪ್ಪಣೆ ಕೊಡಿಸಿದರು. ಉಜ್ಜಯಿನೀ ಜಗದ್ಗುರುಗಳವರು ತಮ್ಮ ಎಲ್ಲಾ ಸಂಕಲ್ಪಗಳನ್ನೂ ನೂತನ ಜಗದ್ಗುರುಗಳು ನೆರವೇರಿಸುವರು, ಎಂದು ಅಪ್ಪಣೆಕೊಡಿಸಿದರು, ನೂತನ ಜಗದ್ಗುರು ಶ್ರೀ ವಾಗೀಶ ಪಂಡಿತಾರಾಧ್ಯ

ಶಿವಾಚಾರ್ಯರು ತಮ್ಮ ಇಚ್ಛೆಯನ್ನು ಪೂರ್ಣಗೊಳಿಸುವುದು ನಮ್ಮ ಮುಖ್ಯ ಧ್ಯೇಯವಾಗಿದೆ, ಮಹಾಸನ್ನಿಧಿಯು ಆನಂದದಿಂದ ಶಿವ ಧ್ಯಾನದಲ್ಲಿಯೇ ಮನವನ್ನಿರಿಸಬೇಕು ಎಂದು ಪ್ರಾರ್ಥಿಸಿದರು. ಆಮೇಲೆ ಶ್ರೀ ಪೀಠದ ಭಾವೀ ಉನ್ನತಿಯ ಬಗ್ಗೆ ಸದಾ ನೂತನ ಜಗದ್ಗುರುಗಳವರಿಗೆ ಸಹಾಯಕರಾಗಿಯೂ ನಿಮ್ಮ ಪೀಠದಂತೆ ನಮ್ಮ ಪೀಠವನ್ನೂ ವೃದ್ಧಿಹೊಂದಿಸಬೇಕೆಂದು ಶ್ರೀ ಉಜ್ಜಯಿನೀ ಜಗದ್ಗುರುಗಳವರಿಗೆ ಅಪ್ಪಣೆ ಕೊಡಿಸಿದರು.

ಬುಧವಾರ ತಾ|| ೩೧-೭-೪೦ ಬೆಳಿಗ್ಗೆ ೪ ಘಂಟೆಗೆ ಶಿವನಾಮ ಸ್ಮರಣೆ ಮಾಡುತ್ತ ಮಲ್ಲಿಕಾರ್ಜುನಾ ! ಪಂಡಿತಾರಾಧ್ಯಾ !! ಸ್ವಾಮಿ !!! ಚಿರಸುಖಿ ಎನ್ನುತ್ತಲೇ ಸರ್ವರಿಂದಲೂ ಗುರುಪಾದೋದಕವನ್ನು ಗ್ರಹಣಮಾಡುತ್ತ ಸುಖವಾಗಿ ಶಿವಸಾಯುಜ್ಯವನ್ನು ಹೊಂದಿದರು. ಶ್ರೀಯವರಿಗೆ ೭೩ ವರ್ಷ ವಯಸ್ಸಾಗಿತ್ತು. ಆಗಲೆ ಸಂಸ್ಕಾರವು ಶಾಸ್ತ್ರೀಯವಾಗಿ ಪ್ರಾರಂಭವಾಗಿ ನೂತನ ಜಗದ್ಗುರುಗಳವರಿಂದಲೂ ಉಜ್ಜಯಿನೀ ಜಗದ್ಗುರುಗಳವರಿಂದಲೂ ಶ್ರೀ ಪಾದಕ್ಕೆ ರುದ್ರಾಭಿಷೇಕವು ನಡೆಯಿಸಲ್ಪಟ್ಟಿತು. ನಾಡಿನ ಅನೇಕ ಸ್ತ್ರೀ ಪುರುಷರು ತಂಡೋಪತಂಡವಾಗಿ ಸೇರಿ ಸೇವೆಸಲ್ಲಿಸಿದರು.

ಓರ್ವ ಸೇವಾಭಾಗಿ ಭಕ್ತ.

---

ವಯೋವೃದ್ಧರೂ, ಮಹಾ ತಪಸ್ವಿಗಳೂ, ಆದ ಕುಂದಗೋಳ ಪಂಚಗ್ರಹ ಹಿರೇಮಠದ ಶ್ರೀ ಷ. ಬ್ರ. ಪಟ್ಟದಸ್ವಾಮಿಗಳು ಮೊನ್ನೆ ತಾ. ೧೩—೮—೪೦ ರಲ್ಲಿ ಶಿವಸಾಯುಜ್ಯವನ್ನೈದಿದರೆಂದು ತಿಳಿಸಲು ತುಂಬಾ ವಿಷಾಧವಾಗುತ್ತದೆ. ಪರಮಪೂಜ್ಯ ಮಹಾಸ್ವಾಮಿಗಳವರು ಕಳೆದ ೨-೩ ತಿಂಗಳಿಂದಲೂ ರೋಗ ಪೀಡಿತರಾಗಿದ್ದರು. ಶ್ರೀಗಳವರ ವಿಯೋಗದಿಂದ ಅವರ ಭಕ್ತಸಮೂಹಕ್ಕೆ ಎಂದೂ ತುಂಬಿಬರದ ಹಾನಿಯೊದಗಿದಂತಾಗಿದೆ. ದೈವೇಚ್ಛೆ.

ಶ್ರೀ ಷ. ಬ್ರ. ಚರಮೂರ್ತಿ ಸ್ವಾಮಿಗಳವರಿಗೆ ಈ ಮೂಲಕ ನಮ್ಮ ಅನುತಾಪವನ್ನು ಬಿನ್ನವಿಸಿಕೊಳ್ಳುತ್ತೇವೆ.

# ಮತ್ತೆಂದು ಬರುವಿ?



"ಧರ್ಮರಾಜ್ಯ" ವ ತೊರೆದು ಪರದೇಶಿಯಂಮಾಡಿ
ವರಧರ್ಮ ದೇವತೆಯ ಪೆಸರಾಂತ ಮೈಸೂರ ಮೈ
ಸಿರಿಯನಳಿಸಿ ಕರ್ಮಪುರುಷನ ಕ್ರೂರ ಪಾಶಕ್ಕೆ ಶಿಲ್ಕಿ
ದೊರೆಯೆ ಶ್ರೀಕೃಷ್ಣಭೂಪ ಇರುವಿ. ನೀನೆಲ್ಲಿಂದು? ॥ ೧ ॥

ನಿನ್ನ ಕಾಲದಿ ಅತ್ತೆ? ಉದ್ಯೋಗಮಂದಿರವು ನಿನ್ನನಾಡಾಯ್ತು
ಉನ್ನತದ ಶಿಲ್ಪಿಗಳು ಪೆಸರಾಂತ ಸಾಹಿತಿಗಳು ಮೆಣ್ಬಲ್ಲಿದ ರಾಜಕಾರಣಿ
ಗಳು
ನಿನ್ನೊಳಲ್ಲವೆ ದೊರೆಯೆ, ಆಶ್ರಯವಬಯಸಿದ್ದು 'ರಾಮರಾಜ್ಯ'ವಿದೆಂದು
ನಿನ್ನಕಾಲವೆ ಹೌದು. ನಿನ್ನರಾಜ್ಯಕೆಮತ್ತೆ ಬಲ್ಲವರು ಸುಮತಿಗಳು
ಹಾಡಿಹರಿಸಿದ್ದು ॥ ೨ ॥

ಆದರ್ಶ ಮೂರ್ತಿಯೆ, ನೀನು ವಿಶಾಲಮತಿ ಕಾರುಣ್ಯನಿಧಿಹೌದು
ಹಿಂದೆಂದೊ ಓದಿದ್ದ ಪೂರ್ವ ಭೂವರರುದಾಶ್ರಯಗಳೆಲ್ಲವನು ಮಾ
ಜದೇ
ಕುಂದದೇ ನಡೆಯಿಸಿದಿ ಅದನೋಳ್ಪ ಭಾಗ್ಯವೆಮಗಿತ್ತಿಂದು ಆದೊಡೇಂ
ಕರುಣಾಳು ಮೃತ್ಯುವಲ್ಲ
ನಂದನಕೆ ಪ್ರತಿಯಾಗಿ ಮೆರೆಯುತಿಹ ನಿನ್ನರಾಜ್ಯವನುಳಿದು ನಿನ್ನವರ
ಮರೆತೆಲ್ಲಿ ಕುಳಿತಿರುವಿ ದೊರೆಯೆ? ॥ ೩ ॥

ಅದೊನೋಡು, ಕನ್ನಡತಿ ಕಳೆಹೀನಳಾಗಿಹಳು. ನೋಡಿಲ್ಲಿ ನಿನ್ನವರ
ಶೋಕಸಾಗರವ
ಎದೆಹೇಗೆಬಂದಿತೋ ನಿಷ್ಕರುಣಿ ಕಾಲಂಗೆ, ಮೊದಲೊನ್ಮೆ ತಿಳಿದಿದ್ದ
ಕರಿನಾಡ ಪ್ರಭೆಯ
ನಡೆದು ಹೋದುದುದಾಯ್ತು ನಿನಗಾಗಿಬೇಡುವೆವು ನಿನ್ನುದಯಕಾಗಿ
ಚಾಮುಂಡಿಯಲ್ಲಿ
ಓಡಿಬಾ. ಸಂತೈಸು ಕನ್ನಡತಿಯ ಮೆರೆಸುವೆವು ಚಿರಕಾಲ ನಿನ್ನ ಧ್ವಜವ
ನ್ನೆತ್ತಿ ಜನ್ಮನಾಡೊಳಿಂದು ॥ ೪ ॥

## ಮಹನಿಯರೇ, ಇತ್ತಲಕ್ಷಕೊಡಿರಿ !

## ಅಂದವಾದ ಮುದ್ರಣದಿಂದಲೂ, ಬಂಧುರವಾದ ಹೊಲಿಗೆಯುಳ್ಳ-

ಎಲ್ಲ ನಮೂನೆಯ ಮತ್ತು ಸೈಜಿನ ಖಾತೆ ಖಿರ್ದಿ ವಹಿಗಳೂ, ಅಕೌಂಟ, ಬುಕ್ಕುಗಳೂ, ನೋಟ್ ಬುಕ್ಕುಗಳೂ, ಸಹ, ಯೋಗ್ಯಬೆಲೆಗೆ ನಮ್ಮಲ್ಲಿ ಸಿಗುತ್ತವೆ.

ಅತ್ಯುತ್ತಮವಾದ ಸುಂದರವಾದ ಬೈಂಡನ್ನೊಳಗೊಂಡ ನಮ್ಮಲ್ಲಿ ಸಿಗುವ ಎಲ್ಲ ಪುಸ್ತಕಗಳನ್ನು ಒಮ್ಮೆ ತರಿಸಿ ನಿಮ್ಮ ಮನಸ್ಸಿಗೆ ಖಾತ್ರಿಮಾಡಿಕೊಳ್ಳಿರಿ. ಮತ್ತು ನಿಮ್ಮಮನಸ್ಸೊಪ್ಪುವಹಾಗೆ ಪ್ರಿಂಟಿನ ಕೆಲಸವನ್ನು ಮಾಡಿಕೊಡುತ್ತೇವೆ

ದೊರೆಯುವ ಸ್ಥಳ:

**ಧರ್ಮರಾಜ್ಯ ಪ್ರಿಂಟಿಂಗ್‌ಪ್ರೆಸ್, ಹರಿಹರ.**

---

## ಸ್ವೀಕಾರ

## ಶ್ರೀ ಜಗದ್ಗುರು ವಿಶ್ವಾರಾಧ್ಯ ಫ್ರೀ ಬೋರ್ಡಿಂಗ ಕುಂದಗೋಳ.

ಈ ಸಂಸ್ಥೆಯ ಐದನೆಯವರ್ಷದ: ರಿಪೋರ್ಟು

ಮೇಲ್ಕಂಡ ಸಂಸ್ಥೆಯ ರಿಪೋರ್ಟು ನಮ್ಮ ಹಸ್ತಗತವಾಗಿದೆ. ಸದರಿ ಬೋರ್ಡಿಂಗಿನಲ್ಲಿ ೧೫ ಜನ ವಿದ್ಯಾರ್ಥಿಗಳಿಗೆ ಉಚಿತವಾದ ಭೋಜನದ ಏರ್ಪಾಡುಮಾಡಲಾಗಿದೆ. ಸಂಸ್ಥೆಯ ಅಭಿವೃದ್ಧಿಗಾಗಿ ಶ್ರೀ ಷ. ಬ್ರ, ಗುರುಪಾದ ಶಿವಾಚಾರ್ಯ ಮಹಾಸ್ವಾಮಿಗಳವರು ಪ್ರಯತ್ನಿಸುತ್ತಿರುವದು ಅಭಿನಂದನೀಯವು. ಶೀಘ್ರವೇ ಚಿರಸ್ಥಾಯಿ ಫಂಡಿನ ಅನುಕೂಲವನ್ನು ಮಾಡಿಕೊಂಡು ಸಂಸ್ಥೆಯು ಚಿರಕಾಲ ಉಳಿಯುವಂತೆ ಈಗಿನ ಅಧಿಕಾರಯುತವರ್ಗವು ಪ್ರಯತ್ನಿಸಬೇಕಾಗಿ ಸೂಚಿಸಬಯಸುತ್ತೇವೆ. ಇಂತಹ ಆರ್ಥಿಕ ಮುಗ್ಗಟ್ಟಿನ ಪರಿಸ್ಥಿತಿಯಲ್ಲೂ ಸಂಸ್ಥೆಯು ಸುಮಾರು ೧೨೦೦—೦—೦ ರೂಪಾಯಿಗಳನ್ನು ಉಳಿಸಿರುವದು ಮಿತವ್ಯಯಧ್ಯೋತಕವಾಗಿದೆ. ಒಟ್ಟಿನಮೇಲೆ ಸಾರ್ವಜನಿಕರು ಸಹಾಯವನ್ನೆಸಗಲು ಯೋಗ್ಯ ಸಂಸ್ಥೆ. ಉದಾರಹೃದಯರು ಕೊಡಗೈಯಿಂದ ಮುಂದೆಬಂದು ವಿದ್ಯಾದಾನದಂಥ ಪವಿತ್ರಕಾರ್ಯಕ್ಕೆ ನೆರವಾಗಬೇಕಾಗಿ ಬೇಡುತ್ತೇವೆ.

ಸಂಪಾದಕ

# ಶಂಭುದೇವಾಂಗ ಪುರಾಣ



## ಗದ್ಯ॥

### ಸೃಷ್ಟಿಗೆ ಮೊದಲು

ಬ್ರಹ್ಮಾಂಡ - ಪಿಂಡಾಂಡಗಳೂ, ಚತುರ್ದಶ ಲೋಕಗಳೂ, ನಕ್ಷತ್ರಗಳೂ, ಮೇಘಗಳೂ, ನದಿ - ಸಮುದ್ರಗಳೂ, ಪಂಚ ಭೂತಗಳೂ, ಆದಿತ್ಯ-ಬ್ರಹ್ಮ-ನಾರಾಯಣ-ಈಶ್ವರ-ಸದಾಶಿವ ಮೊದಲಾದವರೂ ಇಲ್ಲದ ಆಸಮಯದಲ್ಲಿ ಅಖಂಡಿತ ಬ್ರಹ್ಮಾಂಡ ಗೋಳಕಾಕಾರವಾಗಿ ಪರಾತ್ಪರ ಪರಶಿವ ಶಂಭುವಿರ್ದನು.

ಪ್ರಶ್ನೆ:— ಈ ಚರಾಚರವನ್ನು ಹುಟ್ಟಿಸಿದವರಾರು ? ರಕ್ಷಿಸುವವರಾರು ? ಪಂಚತತ್ವಗಳನ್ನು ನಿರ್ಮಿಸಿದವರಾರು ? ಶಿವಜೀವ ವಿದ್ಯೆಯ ನಿರ್ಮಿಸಿದವರಾರು ? ವಿಶ್ವವನ್ನು ವಿಸ್ತೀರ್ಣವಾಗಿ ಮಾಡಿದವರಾರು. ?

ಉತ್ತರ;— ಜಲಪ್ರಳಯಕಾಲದಲ್ಲಿ ಸಿದ್ಧವಟ ಪತ್ರದಮೇಲೆ ಆದಿನಾರಾಯಣನು ಶಯನಮಾಡುವದಕ್ಕೆಮುನ್ನ, ಮಹಾ ಪ್ರಳಯಕಾಲದಲ್ಲಿ ತೆಂಕಲ ದಿಕ್ಕಿನ ವೃಷಭೇಶ್ವರನೂ, ಉತ್ತರದಿಕ್ಕಿನ ಶಿವವಿಷ್ಟ ಪರಶಿವನೂ ಮಾತನಾಡುವುದಕ್ಕೆಮುನ್ನ ತ್ರಿಗುಣಾತ್ಮಕರಾದ ಬ್ರಹ್ಮ-ವಿಷ್ಣು-ಮಹೇಶ್ವರರು ಕಾರ್ಯರಂಗಕ್ಕೆ ಬರುವುದಕ್ಕೆಮುನ್ನ, ಹದಿನೆಂಟು ಮನುಗಳು; ಲೋಕಗಳ ನಿರ್ಮಿಸುವುದಕ್ಕೆ ಮುನ್ನ ಪರಶಿವಶಂಭುವು ಕಾರಣಕರ್ತನಾಗಿದ್ದನು.

ಪ್ರಶ್ನೆ:— ಅಂಡ, ;ಪಿಂಡ, ಬ್ರಹ್ಮಾಂಡವನ್ನಾರುಹುಟ್ಟಿಸಿದರು ? ಜೀವ ಜಂತುಗಳಿಂದ ಕೂಡಿರುವ ಚತುರ್ದಶ ಭುವನಗಳು ಯಾರಿಂದ ಹುಟ್ಟಿದವು ?

ಉತ್ತರಃ— ಸರ್ವಶಾಸ್ತ್ರಂಗಳನು ವಿಚಾರಿಸಿ ಪ್ರಮಾಣಿಕ ಪ್ರಾಜ್ಞನಾದ ಎಲೈ ವೀರಶೈವಾಚಾರ್ಯನೇ ;ಕೇಳು!!!;;ಇವೆಲ್ಲವಕ್ಕೂ: ಆ ಪರಶಿವ ಶಂಭುವೇ ಕಾರಣನು.॥:ಆದಿಯಲ್ಲಿ ಆ ಶಂಭುವಿನ ವಾಮಕರದಲ್ಲಿ:: ಆಧಾರವೆಂಬ ಮೂಲ ವರ್ಣಹುಟ್ಟಿತು. ಅದೇ ಓಂಕಾರಶಕ್ತಿಯೆನಿಸಿತು. ಶಿವಶಕ್ತಿಯರೀರ್ವರು ಕೂಡಲು ಅಲ್ಲಿ ನಾನಾಲೋಕಗಳುಂಟಾದವು.

ಪ್ರಶ್ನೆ:— ಶಕ್ತಿಮೊದಲು, ಶಿವ ಕಡೆಗೆ: ಅದುಹೇಗೆ?

ಉತ್ತರ:— ಓಂಕಾರವೆಂಬ ಆಧಾರವೇಶಕ್ತಿ ಆ ಆಧಾರದ ಆದಿಅಂತ್ಯದಲ್ಲಿ ಶಿವನುಹುಟ್ಟಿದನು, ಅದು ಕಾರಣ ಶಕ್ತಿರೂಪು ದೊಡ್ಡದು. ಶಿವರೂಪು ಲಘುವು. ಜ್ಞಾನವೇ ಇಲ್ಲದ ವಿದ್ಯೆಯಿಂದಲೂ, ಕರುಣವೇ ಇಲ್ಲದ ದಯೆಯಿಂದಲೂ, ಹೆಂಡತಿಯೇ ಇಲ್ಲದ ಮನೆಯಿಂದಲೂ, ಮನೆಯೇ ಇಲ್ಲದ ಸೀಮೆಯಿಂದಲೂ, ಪ್ರಯೋಜನವಿಲ್ಲದಿರುವಂತೆ ಮಾಯೆಯೇ ಇಲ್ಲದ ಪ್ರಪಂಚವಾದರೂ ಹೇಗಾಗುವುದು.? ಆದುದರಿಂದ ಮಾಯಾಪ್ರಪಂಚವೆಂಬ ಕರಡಿಗೆಯೊಳಗೆ ತ್ರೈಲೋಕ್ಯ ಸಚರಾಚರವೆಂಬ ಜೀವಜಂತುಗಳು ಅಡಕವಾಗಿರುವವು. ಇಂತಾಗಿ ಮಾಯಾ ವಿಶಾಲತೆಯೆಂತೆಂದರೆ:— ಪರಾತ್ಪರ ಪರಶಿವ ಶಂಕರನ ಚಿದಾನಂದ ಶಕ್ತಿಯಾಗಿ ಆವರಿಸಿದಳು, ಶಂಕರನ ಪರದೇವತೆಯಾಗಿ ಆವರಿಸಿದಳು, ಸದಾಶಿವನ ಆದಿ ದೇವತೆಯಾಗಿ ಆವರಿಸಿದಳು, ಈಶ್ವರನ ಈಶ್ವರಿಯಾಗಿ ಆವರಿಸಿದಳು. ಮಹಾದೇವನ ಮಹಾದೇವಿಯಾಗಿ ಆವರಿಸಿದಳು, ಮಹೇಶ್ವರನ ಮಹೇಶ್ವರಿಯಾಗಿ ಆವರಿಸಿದಳು, ಮಹೇಶ್ವರಂಗೆ ೨೫ ಲೀಲೆಗಳ ತೊಡಿಸಿದಳು. ಮಹಾವಿಷ್ಣುವಿಗೆ ಲಕ್ಷ್ಮಿಯಾಗಿ ಆವರಿಸಿದಳು, ಶತಾವತಾರ ದಶಾವತಾರಂಗಳ ಮಾಡಿಸಿ ಭವಭವಕ್ಕೆತಂದು ಜನ್ಮಭೂಮಿಯ ಮಾಡಿದಳು. ಬ್ರಹ್ಮನಿಗೆ ಸರಸ್ವತಿಯಾಗಿ ಆವರಿಸಿದಳು, ಬ್ರಹ್ಮನನ್ನು ೯ ಭವಕ್ಕೆತಂದು ನೊರೆಯಿಡಿಸಿದಳು. ಇಂದ್ರನಿಗೆ ಶಚಿಯಾಗಿ ಆವರಿಸಿದಳು, ಮೈಯಲ್ಲಿ ಯೋನಿಯ ಮಾಡಿದಳು. ಚತುರ್ದಶ ಭುವನ ಬ್ರಹ್ಮಾಂಡದ ಸುರ, ನರ, ಕಿನ್ನರ, ಕಿಂಪುರುಷ ಮೊದಲಾದವರ ತೊತ್ತಳದಳಿದು ದಾವಣಿಯ ದನನಮಾಡಿ ಕಟ್ಟಿದಳು. ಆದುದರಿಂದ ಶಕ್ತಿರೂಪ ದೊಡ್ಡದು.

ಪರಶಿವ ಶಂಕರನ ಬಲಭಾಗದ ಬೀಜವೀಗ ಬ್ರಹ್ಮನೆಂದು ಹೇಳಲ್ಪಟ್ಟಿತು ಪರಶಿವನ ವಾಮಭಾಗದ ಬೀಜವೀಗ ವಿಷ್ಣುವೆಂದು ಹೇಳಲ್ಪಟ್ಟಿತು, ಪರಶಿವನ ಊರ್ಧ್ವಪವನಗತಿಯ ಬೀಜವೀಗ ರುದ್ರನೆಂದು ಹೇಳಲ್ಪಟ್ಟಿತು, ಆದಿಮಧ್ಯಾವಸಾನಗಳಿಗೆ ಮುನ್ನ ಪರಾತ್ಪರ ಶಂಭುವು ಕಾರಣನಾಗಿ ಮೂಲ ಬೀಜವೇ ತಾನಾಗಿ ಮೃಡನೆನಿಪ ಮೂಲಾತ್ಮ, ವೃಕ್ಷತಾನಾಗಿ ಬ್ರಹ್ಮ-ವಿಷ್ಣು-ಮಹೇಶರರೆಂಬ ಮೂಲ ಸ್ಥಂಭವಾಗಿ ಅಷ್ಟಮೂರ್ತಿಗಳೆಂಬ ಶಾಖೆಗಳಾಗಿ ಮನು ಮುನಿ ಸುರೇಂದ್ರರು ಪಲ್ಲವಗಳಾಗಿರಲು ಮುಕ್ತಿಯೇ ಫಲ, ಭಕ್ತಿಯೇ ತೊಗಟೆ, ಜ್ಞಾನವೈರಾಗ್ಯಗಳೇ ರಸ, ಶಂಕರನೇ ಬೀಜ, ಬುಡದಬೀಜ ತುದಿಗೆತೋರಿದಹಾಗೆ ಇದು ಶಿವನ ಬಿರಿದು ಶಕ್ತಿಯ ಬಿರಿದು ಪ್ರತಾಪ.

ಶಕ್ತಿಯ ಹೃದಯದಲ್ಲಿ ಶಿವನುಂಟು, ಶಿವನ ಹೃದಯದಲ್ಲಿ ಶಕ್ತಿಯುಂಟು ಅದು ಹೇಗಂದರೆ:— ಶಿವನ ಬೀಜ ಹೆಚ್ಚಾದರೆ ಗಂಡು, ಶಿವನ ಬೀಜ ಕಡಿಮೆಯಾದರೆ ಹೆಣ್ಣು, ಶಕ್ತಿಗೆ ಶೋಣಿತ, ಶಿವಗೆ ಶುಕ್ಲ, ಇದುವೇ ಬೀಜ. ಶಿವನ ಗುಹ್ಯ ಎಂಬುದೇ ಲಿಂಗವು. ಶಕ್ತಿಯ ಉಪಸ್ಥಳವೆಂಬುದೇ ಲಿಂಗದ ಪೀಠವು ಇದುವೇ ವಿಷ್ಣುವೆಂದೂ ಹರಿಯೆಂದೂ ಹೇಳಲ್ಪಟ್ಟಿತು. ಈ ಪೀಠಲಿಂಗಕ್ಕಾಧಾರವಾದುದೇ ಬ್ರಹ್ಮ, ಅದುವೇ ಬಿಂದುವೆನಿಸಿತು. ಆ ಬಿಂದುವಿನ ನಾದವೇ ಸದಾಶಿವನೆನಿಸಿ ಆ ನಾದಬಿಂದುವಿನೊಡನಿದ್ದ ಕಳೆಯೇ ಪರಶಿವಶಂಕರನೆಂದು ಹೇಳಲ್ಪಟ್ಟಿತು. ಈ ಪರಿ ವಿಡಿದು ಶಿವಶಕ್ತಿಯರೀರ್ವರೂ ನಾನಾವಿನೋದ ರಾಜಕ್ರೀಡೆಯಿಂದ ಮಾಯಾರ್ಥವಾಗಿ ಮಹಾದ್ಭುತ ಭೋಗವಮಾಡಲು ಆ ಕುರುಹೇ ಶಿವಲಿಂಗವಾಗಿ ಪೂಜೆಗೊಳ್ಳುತಿಪ್ಪುದು ಇಂತಹ ಆ ಶಿವಲಿಂಗ ಗರ್ಭದಿಂದ ಉತ್ಪನ್ನವಾದ ಪರಿಯೆಂತೆಂದರೆ:— ಇಪ್ಪತ್ತೊಂದು ಸ್ವರ್ಗ, ಇರೇಳು ಭುವನದ, ಭೂಲೋಕದ ಜೀವರುಗಳುಂಟಾದರು. ಈ ಮಹಾಲಿಂಗದ ಸಾತ್ವಿಕಗುಣದಿಂದ ಹುಟ್ಟಿದಾತನೇ ಮಹೇಶ್ವರನು. ರಾಜಸಗುಣದಿಂದ ಹುಟ್ಟಿದಾತನೇ ವಿಷ್ಣುವು. ತಾಮಸಗುಣದಿಂದ ಹುಟ್ಟಿದಾತನು ಬ್ರಹ್ಮನು. ಬ್ರಹ್ಮನಿಗೆ ಉತ್ಪತ್ತಿಮಾಡುವುದನ್ನೂ ವಿಷ್ಣುವಿಗೆ ರಕ್ಷಣೆಮಾಡುವುದನೂ ರುದ್ರನಿಗೆ ಲಯಮಾಡುವುದನ್ನೂ, ಆ ಪರಶಿವ ಶಂಭುವೇ ತೋರಿಸಿದನು. ಮತ್ತು ಚಂದ್ರನಿಗೆ ಶಾಂತಿಯನೂ, ಸೂರ್ಯನಿಗೆ ಪ್ರತಾಪವನೂ ಇಂದ್ರನಿಗೆ ಭೋಗವನೂ, ಮನ್ಮಥನಿಗೆ ರೂಪವನೂ, ಸರಸ್ವತಿಗೆ ಗಂಭೀರತೆಯನೂ, ಅಗ್ನಿಗೆ ತೇಜವನೂ ದಯಪಾಲಿಸಿ ಬ್ರಹ್ಮ-ವಿಷ್ಣು-ರುದ್ರರಿಗೆ ದೀಕ್ಷೆಯನ್ನಿತ್ತು ಶಿಕ್ಷಾ-ಮೋಕ್ಷಾಧಿಕಾರವ ಕೊಟ್ಟನು.

ಪೃಥ್ವಿ, ವಾಯು, ಆತ್ಮ, ಈ ಮೂರು ಬ್ರಹ್ಮನವು. ಅಪ್ಪು, ದೇಹ, ಸೂರ್ಯ ಈ ಮೂರು ವಿಷ್ಣುವಿನವು. ತೇಜ, ಆಕಾಶ, ಸೋಮ ಈ ಮೂರು ರುದ್ರನವು. ಚರ್ಮವು ಬ್ರಹ್ಮನದು. ಶೋಣಿತವು ವಿಷ್ಣುವಿನದು. ಅಸ್ತಿಯು ರುದ್ರನದು. ಈ ಮೂರು ಕೂಡಲು ಪಿಂಡವಾಗುವುದು. ತಾನು ಪಿಂಡಪ್ರಾಣಾರೋಗ್ಯದ ಚೇತನಾತ್ಮಕನಾಗಿಹನು, ಇಂತು ಈ ಸಮಸ್ತ ಪಿಂಡ ಬ್ರಹ್ಮಾಂಡವ ನಿರ್ಮಿಸಿಕೊಟ್ಟು ಆ ಪರಶಿವ ಶಂಕರನು ತಾನೇ ತಾನಾಗಿ ಹೊಳೆಯುತ್ತಿಹನು.

ಪ್ರಶ್ನೆ:— ೮೪ ಲಕ್ಷ ಜೀವರಾಸಿಗಳು ಶಿವಶಕ್ತಿಯಿಂದ ಹುಟ್ಟಿದವೆಂದಮೇಲೆ ಇವುಗಳಲ್ಲಿ ಪವಿತ್ರಾಪವಿತ್ರರಾಸಿಗಳೇನಾದರೂ ಉಂಟೇ ? ಇದ್ದರೆ ಅದು ಹೇಗೆ ? ಹಾಗಾಗಲು ಕಾರಣವೇನು ?

ಉತ್ತರ:— ಅಂಡಜಖಾನೆಯಲ್ಲಿ ಹುಟ್ಟಿದ ಜೀವರಾಸಿಗಳ ಗಣನೆಯೆಂತೆಂದು

ವಿಚಾರಿಸಿದರೆ:— ವಿಷದಂತ ಸರ್ಪಗಳು, ಮುಂಗಲಿ, ಇರುವೆ ಮೊದಲಾದ ಕ್ರಿಮಿ ಕೀಟಗಳು ೯ಲಕ್ಷ ಜಲಚರಕುಲ ೪ ಲಕ್ಷ, ಪಕ್ಷಿಕುಲ ೮ ಲಕ್ಷ. ಇನಿತು ೨೧ ಲಕ್ಷವು. ಈ ೨೧ ಲಕ್ಷ ಜೀವರಾಸಿಗಳಲ್ಲಿ ಹಂಸ–ಗರುಡ–ಆಮೆ ಇವು ಮೂರು ಪವಿತ್ರಜೀವಿ ಗಳು. ಸ್ವೇದಜಖಾನೆಯಲ್ಲಿ ಹುಟ್ಟಿದ ಜೀವರಾಸಿಗಳ ಗಣನೆಯೆಂತೆಂದರೆ:— ತಾರಾ ಮಂಡಲ ೯ ಲಕ್ಷ, ೨೭ ನಕ್ಷತ್ರಗಳಿಂದೊಡಗೂಡಿರುವ ಮೇಘಮಂಡಲ ೪ ಲಕ್ಷ ಪರ್ವತ ಕುಲಗೋತ್ರಂಗಳು ೮ ಲಕ್ಷ

ಇಂತು ೨೧ ಲಕ್ಷವು. ಇವುಗಳಲ್ಲಿ ಪವಿತ್ರವಾದವುಗಳು ತಾಮ್ರ–ಪಂಚಲೋಹ, ಬಂಗಾರ ಎಂಬಿವು ಮೂರುಮಾತ್ರ. ಜರಾಯುಜಖಾನೆಯಿಂದ ಹುಟ್ಟಿದ ೨೧ ಲಕ್ಷ ಜೀವರಾಶಿಗಳ ಗಣನೆಯೆಂತೆಂದರೆ:— ಎರಡು ಕಾಲಿನ ಜೀವರಾಸಿಗಳು ೯ ಲಕ್ಷ, ನಾಲ್ಕು ಕಾಲಿನ ಪಶು-ಸಕಲ ಮೃಗಜಾತಿಗಳು ೪ ಲಕ್ಷ. ಹಾಲಿನಿಂದ ಹುಟ್ಟಿದ ಜೀವ ರಾಸಿಗಳು ೮ ಲಕ್ಷ. ಇಂತು ೨೧ ಲಕ್ಷವು. ಇವುಗಳಲ್ಲಿ ಪವಿತ್ರವಾದವುಗಳು ಕುದುರೆ ಆನೆ ಮನುಷ್ಯ ಎಂಬಿವು ಮೂರು ಮಾತ್ರ. ಉದ್ಭಿಜಖಾನೆಯಿಂದ ಹುಟ್ಟಿದ ಜೀವ ರಾಸಿಗಳ ಗಣನೆಯೆಂತೆಂದರೆ:— ಸುಗಂಧ ೯ ಲಕ್ಷ, ನಿರ್ಗಂಧ ೪ ಲಕ್ಷ, ಕಂದಮೂಲಾ ದಿಗಳು ೮ ಲಕ್ಷ, ಇಂತು ೨೧ ಲಕ್ಷವು. ಇವುಗಳಲ್ಲಿ ಅನ್ನ, ಬಣ್ಣ, ಗಂಧ ಎಂಬಿವು ಮೂರು ಮಾತ್ರ ಪವಿತ್ರವಾದವುಗಳು.

ಇಂತಾಗಿ ಜಲಚರಕುಲ ೭ ಲಕ್ಷ, ತಾಂಡವ-ಭೂತ-ಪ್ರೇತ-ಪಿಶಾಚ-ಶಾಕಿನೀ-ಢಾಕಿನೀ-ಬ್ರಹ್ಮರಾಕ್ಷಸಕುಲ ೭ ಲಕ್ಷ ವೃಕ್ಷಾದಿಕುಲ ೮ ಲಕ್ಷ, ಚತುಷ್ಪಾದಿಗಳ ಕುಲ ೧೦ ಲಕ್ಷ, ಸರ್ಪಗಳ ಕುಲ ೧೧ ಲಕ್ಷ ಪಕ್ಷಿಗಳ ಕುಲ ೧ ಲಕ್ಷ, ಮಾನವ ಮಾನವ ವರ್ಗಕ್ಕೆ ಸೇರಿ ಫಜೀವರಾಸಿ ೧೪ ಲಕ್ಷ ದೇವತೆಗಳ ಕುಲ ೧೬ ಲಕ್ಷ, ಹುಳುರಾಸಿ ೧೦ ಲಕ್ಷ ಇವೆಲ್ಲಾ ಒಟ್ಟು ೮೪ ಲಕ್ಷ ಜೀವರಾಸಿಗಳೆನಿಸಿವವು.

ಇವುಗಳಲ್ಲಿ ಪ್ರತಿಜೀವಿಯೂ ಒಂದೊಂದು ಸಾವಿರಸಾರೆ ತಿರುಗಿತಿರುಗಿ ಕುದುರೆ ಯಗರ್ಭಕ್ಕೆ ಬೀಳುವುದು, ಅಲ್ಲಿಂದ ಕಾಲಚಕ್ರ–ಭೂಚಕ್ರ–ಬಿಂದುಚಕ್ರ–ಯೋನಿ ಚಕ್ರ-ನಾದಚಕ್ರ-ನಾಳಚಕ್ರ-ಭ್ರಮಣಚಕ್ರ-ಅಘಚಕ್ರ - ಮೂಲಚಕ್ರಗಳಲ್ಲಿ ಸಿಕ್ಕು ಕುಂಬಾರನ ಚಕ್ರದಹಾಗೆ ಗರಗರನೆ ವಿಶ್ರಾಮವಿಲ್ಲದೆ ತಿರುತಿರುಗಿ ಆಕಳ ಗರ್ಭಕ್ಕೆ ಬೀಳುವುದು. ಅಲ್ಲಿಂದ ಮುಂದೆ ಒಂದೇ ಜನ್ಮದಲ್ಲಿ ಮನುಷ್ಯನಾಗಿ ಹುಟ್ಟುವನು. ಇಂತಾಗಿ ಮನುಷ್ಯನು ಪಾಪವಶದಿಂದ ಹುಟ್ಟದ ಯೋನಿಯಿಲ್ಲ. ಮೆಟ್ಟದ ನೆಲವಿಲ್ಲ. ಕಾಣದ ದುಃಖವಿಲ್ಲ, ಉಣ್ಣದ ಆಹಾರವಿಲ್ಲ. ಭವಬೀಜಕ್ಕೆ ಕೊನೆಮೊದಲಿಲ್ಲವೆಂದು ಜ್ಞಾನವಂತನಾಗಿ ಮನುಷ್ಯನು ಶಿಷ್ಯತ್ವವನ್ನು ವಹಿಸಿ ಶಿವಾಗಮಗಳ ಹೃದಯವನರಿದ ವನೂ ಲಿಂಗಾಂಗಸಮರಸದಲ್ಲಿ ನಿರತನೂ, ತನ್ನತಾನರಿದು ಅನ್ಯಪದಾರ್ಥದಮೇಲೆ

ಉದಯವಾಗಲಿ ನಮ್ಮ ಚಲುವ ಕನ್ನಡನಾಡು,

# ಧರ್ಮರಾಜ್ಯ.

| ಸಂಪುಟ. ೧ | ವಿಕ್ರಮನಾಮ ಸಂವತ್ಸರದ<br>ಭಾದ್ರಪದ ಆಶ್ವಯುಜ | ಸಂಚಿಕೆ. ೭. |
|---|---|---|

ಕೃತದೊಳಾ ತ್ರೇತೆಯೊಳ್ ದ್ವಾಪರದೊಳುಂ ಕ್ರಮದೆ ।
ನುತಿಯುಕ್ತ "ನಳ-ರಾಮ-ಧರ್ಮ" ನೃಪರಿಂ ।
ಅತಿಯಶವನಾಂತು ಬಾಳಿದ ತೆರದೊಳೀ "ಕೃಷ್ಣ ।
ಕ್ಷಿತಿಪಾಲನಿಂ" ಬಾಳು "ಧರ್ಮರಾಜ್ಯ." ॥

ಎಣ್ಣೆ ಇಲ್ಲದ ದೀಪ, ಹೇಗೆ ಉರಿಯದೋ, ಹಾಗೆಯೇ ನರನು
ದೇವರನ್ನು ಬಿಟ್ಟು, ಜೀವಿಸಿರಲಾರನು, ಲೋಭಿಯು
ಅನವರತವೂ ಹೊನ್ನನ್ನು ಹಂಬಲಿಸು.
ವಂತೆ ನಿನ್ನ ಮನಸ್ಸು ಸರ್ವೇಶ್ವರ
ನನ್ನು ಸದಾಕಾಲವೂ ಶ್ರದ್ಧಾ
ಭ ಕ್ತಿ ಗ ಳಿ ೦ ದ
ಹಂಬಲಿಸಲಿ!

☆

## —: ವಿಷಯಾನುಕ್ರಮಣಿಕೆ. :—





### —: ೨ ನೇ ಭಾಗ. :—



## ಇತ್ತ ಲಕ್ಷಿಸಿರಿ!

ನಮ್ಮೀ ಧರ್ಮರಾಜ್ಯದಲ್ಲಿ ಇನ್ನು ಮುಂದೆ ಅಮೂಲ್ಯವಾದ ನಾನಾ ವಿಷಯ ಪ್ರತಿಪಾದಕಗಳಾದ ಗ್ರಂಥಗಳು ಕ್ರಮವಾಗಿ ಪ್ರಕಟವಾಗುವವು ಈ ತಿಂಗಳಲ್ಲಿ ಚತುರಾಚಾರ್ಯ ಪುರಾಣವು ಪ್ರಾರಂಭವಾಗಿದೆ. ಆದುದರಿಂದ ಚಂದಾದಾರರೆಲ್ಲರೂ ಎಲ್ಲಾ ಸಂಚಿಕೆಗಳನ್ನು ಕಾದಿಟ್ಟು ಕೊನೆಗೆ ಆಯಾಗ್ರಂಥಗಳ ಪುಟಸಂಖ್ಯೆಯಂತೆ ಜೋಡಿಸಿ ಬೈಂಡುಮಾಡಿಸಿದರೆ ಗ್ರಂಥವು ಸಿದ್ಧವಾಗುವುದು, ಸಂಚಿಕೆಯನ್ನು ಕಳಕೊಂಡರೆ ಮತ್ತೆ ಸಂಗ್ರಹಿಸುವುದು ಕಷ್ಟವಾಗುವುದು. ಅಲ್ಪ ವ್ರಯದಲ್ಲಿ ಬೆಲೆಬಾಳುವ ಉದ್ಗ್ರಂಥಗಳನ್ನು ಸಂಗ್ರಹಿಸುವುದನ್ನು ಯಾರು ಬಯಸುವವದಿಲ್ಲ?

ಆದುದರಿಂದ ಸರ್ವರೂ ತಮ್ಮ ತಮ್ಮ ಮಿತ್ರರಲ್ಲಿ ಪ್ರೋತ್ಸಾಹಿಸಿ ಈ ಪತ್ರಿಕೆಗೆ ಚಂದಾದಾರರನ್ನೂ ಮಾಡಿಸುವಿರಾಗಿ ಆಶಿಸುತ್ತೇನೆ.

# ಧರ್ಮರಾಜ್ಯ.

| ಸಂ॥ ೨ VOL. 2. | ಮುದೇನೂರು ಶಾ॥ ಶ॥ ೧೮೬೨, ವಿಕ್ರಮಸಂವತ್ಸರದ ಭಾದ್ರಪದ ಮಾಸಪತ್ರಿಕೆ SEPTEMBER. 1940. | ಸಂಚಿಕೆ ೬. No. 6. |
| --- | --- | --- |

ಶ್ರೀ ಗುರುಪ್ರಸನ್ನ

## ಸದ್ಗುರುಮಹಿಮೆಯೂ, ಗೋದಾನ ಸಮಾರಂಭವೂ.

ಬಳ್ಳಾರಿಜಿಲ್ಲಾ ಹೂವಿನಹಡಗಲಿ ತಾಲೂಕು, ಹಿರೇಹಡಗಲಿ ಪುರಾಣಿಕ ಮಠದ ವೇ॥ ಮ॥ ವಿರೂಪಾಕ್ಷ ಶಾಸ್ತ್ರಿಗಳವರ ಧರ್ಮಪತ್ನಿಯಾದ ಸಾಧ್ವೀಮಣಿ ಕುಂ॥ ಶೋ॥ ಚನ್ನವೀರಾಂಬಾಯಿಯವರಿಗೆ, ವಿಶೇಷ ಕಾಯಿಲೆ ಆಗಿದ್ದು ಔಷಧೋಪಚಾರಗಳಿಂದ ಸಾಧ್ಯವಾಗದಿರಲು ಶ್ರೀ ಮದುಜ್ಜಯಿನೀ ಜಗದ್ಗುರು ಸಿದ್ಧಲಿಂಗ ಶಿವಾಚಾರ್ಯ ಮಹಾಸ್ವಾಮಿಗಳವರ ಭಾವಪಟವನ್ನು ಭಕ್ತಿಯಿಂದ ಪೂಜಿಸುತ್ತಲೂ ಸ್ತೋತ್ರಮಾಡುತ್ತಲೂ ಧ್ಯಾನಾಸಕ್ತರಾದರು. ಶ್ರೀಗುರುಕೃಪೆಯಿಂದ ತುಸುದಿವಸಗಳಲ್ಲಿಯೇ ಜಾಡ್ಯವು ಗುಣಮುಖವಾಗುತ್ತಾ ಬಂದಿತು. ಆ ಸದ್ಗುರುಮೂರ್ತಿಯ ಮಹಿಮೆಯನ್ನು ಆನಂದದಿಂದ ಕೊಂಡಾಡುತ್ತಾ ಹರುಷಗೊಂಡು, ಇದೇ ವಿಕ್ರಮ ಸಂ॥ ರದ ಶ್ರಾವಣ ಶು॥ ೩॥ ಚಂದ್ರವಾರ, ಹೊಳಗುಂದಿ ಶ್ರೀ ಪಟ್ಟದಸ್ವಾಮಿಗಳವರ ಸನ್ನಿಧಿಯಲ್ಲಿ ಸದರಿ ವಿರೂಪಾಕ್ಷ ಶಾಸ್ತ್ರಿಗಳವರು ಸಪತ್ನೀಕರಾಗಿ, ಶ್ರೀ ರುದ್ರಾಭಿಷೇಕ ಮಹಾಪೂಜಾ ಸಹಸ್ರ ಬಿಲ್ವಾರ್ಚನೆ ಮಾಹೇಶ್ವರರಿಗೆ ಅನ್ನಸಂತರ್ಪಣಾದಿಗಳನ್ನು ಜರುಗಿಸಿ ಸದರಿ ಚನ್ನವೀರಮ್ಮನವರ ಹಸ್ತದಿಂದ ಗೋದಾನವನ್ನು ಸಕ್ರಮವಾಗಿ ಮಾಡಿಸಿ ತಮ್ಮ ಸಂಕಲ್ಪವನ್ನು ನೆರವೇರಿಸಿ ಧನ್ಯರಾದರು.

ತರುವಾಯ ಶಾಸ್ತ್ರಿಗಳವರು ಆ ಸಮಯದಲ್ಲಿ ಸೇರಿದ ಜನ ಸಮೂಹಕ್ಕೆ ಪರಿವಾ ವತಾರಿಗಳಾದ ಉಜ್ಜಯಿನೀ ಜಗದ್ಗುರುಗಳ ಮಹಿಮಾತಿಶಯಗಳನ್ನೂ ಹಾಗೂ "ಯಥಾ ಭಾವಸ್ತಥಾಸಿದ್ಧಿಃ" ಎಂಬ ವಾಕ್ಯದ ವಿವರವನ್ನೂ, ವಿಸ್ತಾರವಾಗಿ ಬೋಧಿಸಿ ಸರ್ವರಲ್ಲಿಯೂ ಗುರುಭಕ್ತಿಯುಂಟಾಗುವಂತೆ ಮಾಡಿದರು. ಅದ್ದರಿಂದ ಪ್ರತಿ ಯೊಬ್ಬ ಮಾನವನೂ ಗುರುಭಕ್ತಿಪರಾಯಣನಾಗಿ ವರ್ತಿಸಿ ಇಹ, ಪರ, ಸುಖ ಸಂಪದಗಳನ್ನು ಹೊಂದಬೇಕೆಂದು ಬಯಸುತ್ತೇನೆ.

ಪ್ರತ್ಯಕ್ಷದರ್ಶಿ,
ಬಿ. ಕೊಟ್ರಪ್ಪ.

## —[ ನೀರು ಹಿಪ್ಪಲಿ. ]—

( ಶ್ರೀ ಶಿವ )

ವನಮೂಲಿಕೆಗಳಲ್ಲಿ ಘನವಾದ ಸತ್ವ ವಿರುವುದೆಂಬ ವಿಷಯವನ್ನು ಧಾತು ಭಸ್ಮ, ರಸಜ್ಞರಾದ ವೈದ್ಯರು ಒಪ್ಪುವುದು ತೀರಕಡಿಮೆ. ಈ ಮೊದಲು ಹೀಗೆಹೇಳು ವವರ ಪಂಕ್ತಿಯಲ್ಲಿ ನಾವೊಬ್ಬರಾಗಿದ್ದೆವು. ರಸ-ಭಸ್ಮಾದಿಗಳಿಂದ ಕಳೆಯದ ಘನ ತರವಾದ ಕಾಹಿಲೆಯು ಒಂದು ಮೂಲಿಕೆಯಿಂದ ಸಂಪೂರ್ಣವಾಗಿ ಕಳೆದಮೇಲೆ ಆ ನಮ್ಮ ಭಾವನೆಯು ಭಿನ್ನವಾಯಿತು. ಆ ವನಸ್ಪತಿಯ ಪರಿಚಯವನ್ನು ನಮ್ಮ ಪಾಠಕರಿಗೆ ಈಗ ಮಾಡಿಕೊಡಲು ಪ್ರಾರಂಭಿಸುತ್ತೇನೆ. ಅದರ ಹೆಸರು 'ಜಲಹಿಪ್ಪಲಿ' ( ನೀರು ಹಿಪ್ಪಲಿ ) ಸಂಸ್ಕೃತದಲ್ಲಿ ಇದಕ್ಕೆ ಶಾರದೀ, ಮತ್ಸ್ಯಾದನೀ, ಮತ್ಸ್ಯ ಗಂಧಾ, ಲಾಂಗಲೀ, ಶಕುಲಾದೀ, ತೋಯವಲ್ಲರೀ, ಅಗ್ನಿ, ಜ್ವಾಲಾ, ಚಿತ್ರಪುತ್ರೀ, ಮತ್ಸ್ಯಾಕ್ಷೀ, ಪ್ರಾಣದಾ, ತೃಣಶೀತಾ, ಜಲಾಕ್ಷೀ, ಬಹು ಶಿಖಾ, ಲಘು, ಮುಂತಾದ ಹೆಸರುಗಳುಂಟು.

ಧನ್ವಂತರಿನಿಘಂಟುವಿನಲ್ಲಿ ಇದರ ವಿಸ್ತೃತವಾದ ವರ್ಣನೆಯುಂಟು, ಇದು ಸಣ್ಣಹಿಪ್ಪಲಿಯ ಆಕಾರದಲ್ಲಿರುವುದಾದರೂ, ಆ ವಿಧವಾದ ವಾಸನೆಯಿಂದ ಕೂಡಿ ರುವುದಿಲ್ಲ ಭರತಖಂಡದ ಸಕಲ ಭಾಗದಲ್ಲಿಯೂ ಈವನಸ್ಪತಿಯು ವ್ಯಾಪಕವಾಗಿದೆಕೆರೆ, ಹಳ್ಳ, ಜವಳುಪ್ರದೇಶ ಹೂಳು ಮೊದಲಾದ ಹಚ್ಚು ಜಲವಿರುವ ಸ್ಥಾನದ

ನೆಲದಲ್ಲಿಯೇ ಇದು ಪ್ರಾಯಶಃ ಜೀವಿಸಿರುವುದು, ಇದು ತಂಪಾದ ನೆಲದಲ್ಲಿ ನೆಗ್ಗಲ ಬಳ್ಳಿಯಂತೆ ಹಬ್ಬುವುದು. ಎಲೆಸ್ವಲ್ಪ ಉದ್ದವಾಗಿಯೂ, ಸಣ್ಣದಾಗಿಯೂ, ಅಗಲದಲ್ಲಿ ಕಡಿಮೆಯಾಗಿಯೂ, ಇರುವುದು. ಟೊಂಗೆಗಳು ತೆಳ್ಳಗಿರುವವು, ದೇಂಟು ದುಂಡಾಗಿರುವುದು. ಟೊಂಗೆಯ ಪ್ರತಿಯೊಂದು ಟಿಸಲಿಗೂ ಒಂದೊಂದು ದುಂಡನ್ನ ಫಲವಿರುವುದು ಮೇಲಕ್ಕೆ ಸ್ವಲ್ಪ ಎತ್ತರವಾಗಿ ಕಾಣವುದಲ್ಲದೆ ಸಣ್ಣ ಹಿಪ್ಪಲಿಯಂತೆ ಸಣ್ಣ ಸಣ್ಣ ಕಾಳುಗಳು ಕಾಣುವವು, ವಾಸನೆಯು ಮೀನಿನ ವಾಸನೆಯಂತೆ ತೋರುವುದು. ಇವೇ ಗಂಟುಗಳೇ ಜಲಹಿಪ್ಪಲಿ ಅಥವಾ ನೀರುಹಿಪ್ಪಲಿಯೆಂದು ಕರೆಯಲ್ಪಡುವವು. ಆಯುರ್ವೇದ ಮತದಂತೆ ಇದು ಗುಣದಲ್ಲಿ ತಂಪಾಗಿದೆ. ಯುನಾನಿ ಮತದಂತೆ ಉಷ್ಣವಾಗಿದೆ, ಯುನಾನಿ ಮಖಜನ್ ಎಂಬ ನಿಘಂಟಿನಲ್ಲಿ ಈ ವನಸ್ಪತಿಯ ವಿಷಯವನ್ನು ಚರ್ಚಿಸುತ್ತಾ ಇದರ ಎಲೆಯ ನೀರು ಸಾಂಕ್ರಾಮಿಕ ಜ್ವರವನ್ನೂ ಕಫ ಜ್ವರವನ್ನೂ ಸೀತದಿಂದುಂಟಾದ ಕೆಮ್ಮನ್ನೂ ಸಿಕ್ಕು ಮೂತ್ರವನ್ನೂ ಹಾಗೂ ಉರಿಮೂತ್ರವನ್ನೂ ಗುಣಮಾಡುವುದೆಂದು ವ್ಯಕ್ತವಾಗಿದೆ. ಇದು ಮೂತ್ರಶೋಧಕ ವಸ್ತುವಾದ ಕಾರಣ ಮೂತ್ರಾಶಯದಲ್ಲುಂಟಾಗುವ ಪ್ರಮೇಹದ ಕಲ್ಲುಗಳನ್ನೂ ಕೂಡಾ ಕರಗಿಸುವದರಲ್ಲಿ ಸಮರ್ಥವಾಗಿದೆ. ಈ ವನಸ್ಪತಿಯ ಎಲೆಗಳನ್ನು ಸಣ್ಣಾಗಿ ಅರೆದು ಪೋಟೀಸುಮಾಡಿ ಕಟ್ಟುವುದರಿಂದ ಕುರುಗಳು ಒಡೆಯುವವು ಆಯುರ್ವೇದ ಮತ್ತು ಡಾಕ್ಟರೀಯ ಗ್ರಂಥಗಳ ಪ್ರಕಾರ ಈ ವನಸ್ಪತಿಯು ರಕ್ತಶೋಧಕವೂ ಹುಣ್ಣುಗಳನ್ನು ವಾಸಿಮಾಡುವದರಲ್ಲಿ ಸಮರ್ಥವೂ ರಕ್ತಪಿತ್ತಾಪಹಾರಕವೂ ಮತ್ತು ವಿಷನಾಶಕವೂ ಆಗಿದೆ ಎಂದು ತಿಳಿಯಬರುತ್ತದೆ. ಇಲ್ಲಿಯವರೆಗೂ ಶಾಸ್ತ್ರೀಯ ವಿವೇಚನೆಯಾಯಿತು ಇನ್ನು ಸ್ವತಃ ಪ್ರಯೋಗದಿಂದ ಕಂಡು ಬಂದ ಗುಣಗಳನ್ನು ವಿವರಿಸಲು ಪ್ರಾರಂಭಿಸುತ್ತೇವೆ. ನಮ್ಮ ಅನುಭವದಲ್ಲಿ ಇದು ಪ್ರದರರೋಗ, ಸೋಮರೋಗ, ಬಹು ಮೂತ್ರ, ಶುಕ್ರ ಮೇಹ, ನಾಡೀವ್ರಣ, ಬಾಯಿಹುಣ್ಣು, ನಾಲಿಗೆ ಒಡೆಯುವಿಕೆ, ವೀರ್ಯವಿಕಾರ, ಭಗಂದರ ಮೂಲವ್ಯಾಧಿ, ಮುಂತಾದ ಅನೇಕ ರೋಗಗಳಮೇಲೆ ಪ್ರಯೋಗಸಿದ್ಧವೂ ಸಫಲವೂ ಆಗಿವೆಯೆಂದು ಬರೆಯಲು ಆನಂದವೆನಿಸುವುದು, ಫಿರಂಗಿಹುಣ್ಣಿನ ಮೇಲಂತೂ, ಇದು ರಾಮಬಾಣವಾಗಿದೆ. ಈ ವನಸ್ಪತಿಯ ಸೇವನೆಯಲ್ಲಿ ಅವಸರ ಮಾಡಿದರೆ ಫಲವಿಲ್ಲ. ಧೈರ್ಯಪೂರ್ವಕವಾಗಿ ಕೆಲ ದಿವಸ ಸೇವನೆ ಮಾಡಿದರೆ ಮೇಲಿನ ಎಲ್ಲ ರೋಗಗಳು ಕಳೆಯುವುದರಲ್ಲಿ ಸಂಶಯವಿಲ್ಲ. ಇದರ ಪ್ರಭಾವವು ಮೆಲ್ಲಮೆಲ್ಲನೆ ಶರೀರದಲ್ಲಿ ಪ್ರಸಾರವಾದರೂ ಕೂಡಾ ಕಾಹಿಲೆಯು ಪೂರ್ಣ ಗುಣವಾಗುವದರಲ್ಲಿ ಸಂದೇಹವಿಲ್ಲ ಅಲ್ಲದೆ ಈ ವನಸ್ಪತಿಯ ಸೇವನೆಯಿಂದ ಯಾವ ಪ್ರಕಾರವಾದ ಹಾನಿಯೂ ಇಲ್ಲ ಈ ವನಸ್ಪತಿಯನ್ನು ಎಲ್ಲ ಋತುಗಳಲ್ಲಿಯೂ ಯಾವ ಪ್ರಕಾರವಾದ ಪ್ರಕೃತಿಯುಳ್ಳವರಾಗಲಿ ಸ್ತ್ರೀಯರು, ಪುರುಷರು, ಚಿಕ್ಕಮಕ್ಕಳೂ ನಿಸ್ಸಂಶಯವಾಗಿ ಸೇವಿಸಬಹುದು.

ಫಿರಂಗಿಹುಣ್ಣು ಪ್ರಮೇಹಗಳಮೇಲೆ:— ೧॥ ತೊಲಿ ನೀರು ಹಿಪ್ಪಲಿ ೫ ಮೆಣಸಿನಕಾಳು ಇವನ್ನು ೨॥ ತೊಲಿ ನೀರಿನಲ್ಲಿ ಅರೆದು ಕಂಚಿನ ಬಟ್ಟಲಿಗೆ ಬಟ್ಟೆಯಿಂದ ಸೋಸಿ ರೋಗಿಗೆ ಕುಡಿಸುವುದಲ್ಲದೆ ಮೇಲೆ ಅವನಿಗೆ ಸಾಕಾಗುವಷ್ಟು ಬೆಣ್ಣೆಯನ್ನು ತಿನ್ನಲಿಕ್ಕೆ ಕೊಡಬೇಕು.

ಪ್ರದರರೋಗವಮೇಲೆ ೧। ತೊಲಿ ನೀರು ಹಿಪ್ಪಲಿ ೫ ಮೆಣಸಿನಕಾಳು ಕಾಲು ತೊಲಿ ನೆಲಬಾರಿ ಅಂಟು ೫ ತೊಲಿ ನೀರು ಇವೆಲ್ಲವನ್ನೂ ಕೂಡಿಸಿ ಸಣ್ಣಗೆ ಅರೆದು ಕಂಚಿನ ಬಟ್ಟಲಿಗೆ ಬಟ್ಟೆಯಲ್ಲಿ ಸೋಸಿ ೧ತೊಲಿ ಕಾಲ್ಪಿಸಕ್ಕರೆ ಪುಡಿ ರೋಗಿಗೆ ಹೆಣ್ಣುಮಕ್ಕಳಿಗೆ (ಬಿಳೇಮುಟ್ಟು ಕೆಂಪುಮುಟ್ಟುಳ್ಳವರಿಗೆ) ಬೆಳಿಗ್ಗೆ ಸಾಯಂಕಾಲ ಒನ್ಮೆ ಕುಡಿಸುತ್ತಾ ಬರಬೇಕು.

ಪಥ್ಯ:- ತುಪ್ಪ ಜವೆಗೋದಿ ರೊಟ್ಟಿಯನ್ನು ಕೊಡಬೇಕು ಹಾಲು, ಉಪ್ಪು ಮೊದಲಾದ ಯಾವಪದಾರ್ಥಗಳನ್ನೂ ತಿನ್ನಲಿಕ್ಕೆ ಕೊಡಬಾರದು ೭ ದಿವಸಗಳಲ್ಲಿ ಗುಣವಾಗುವುದು ವಾಚಕರು ಈ ವನಸ್ಪತಿಯ ಉಪಯೋಗವನ್ನು ಮಾಡಿಕೊಳ್ಳುವದಕ್ಕೆ ಮರೆಯಬಾರದು ಈ ವನಸ್ಪತಿಯನ್ನು [illegible] ದೊರೆಯುವೆ ಇಚ್ಛವರು ಶ್ರೀಯುತ ಪಂ॥ ದೇವದತ್ತ ಜಿಶರ್ಮ ವೈದ್ಯಶಾಸ್ತ್ರಿ ಶಕರಗಡ ಗುರುದಾಸಪುರ ಪಂಜಾಬ ಇವರಿಗೆ ಬರೆದು ತರಿಸಿಕೊಳ್ಳಬೇಕು.

# ದಿವಂಗತ ಕೃಷ್ಣಭೂಪಾಲ.

ಶ್ರೀಕೃಷ್ಣಭೂಮೇಂದ್ರ ಶಿವಲೋಕಸೇರಿದೆಯ ।
ಭೂಕಾಂತರೊಳುನೀನು ಬಲುಚಲುವನೂ ॥
ಸಾಕಾಯ್ತೆ ಮನಸಿಂಗೆ ಜನಸೇವೆಮಾಳ್ಪುದಕೆ ।
ಏಕೆ ಮೋಸವಮಾಡಿನೀಂಪೋದೆಯೋ ? ॥೧॥

ಕೈಲಾಸಗಿರಿಗಂಪು ಹೋಗಿಯಾತ್ರೆಯಮಾಡಿ।
ಮೇಲಾದ ರೇಣುಕರಮಠಕೆಬಂದೂ ॥
ಕಾಲನಿಗು ಭಯಪಡದ ಶಾತ್ವಿಕವನರಿತಿದ್ದೆ ॥
ಪೇಳವಲೆ ಮೋಸದಿಂ ನೀಪೋದೆಯಾ ॥೨॥

ಕೈಲಾಸ ದೊಳಗಿರುವ ಸೌಖ್ಯ ಸಂಪದಕಂಡು ।
ಆಳಾಗಿ ಜನಸೇವೆ ಮಾಡದಿಂದು ॥
ಹಾಳಾದಸೌಖ್ಯಕ್ಕೆ ಮರುಳುತನ ವಿಡಿದೆಮಗೆ ॥
ಜಾಲವನು ಬೀಸಿಕಟ ನೀಂ ಪೋದೆಯಾ ॥೩॥

ಭೋಜನಪಸುಖದೊರೆದು ಜನಪದವಪಾಲಿಸುತ ।
ಗೋಜಿಗವಪಡಿಸಿದ್ದೆ ಭೂವಲಯವಾ ॥
ರಾಜಿಸುವ ತೆರನಂತೆ ಕಳುನಾಡನಾಳಿಂದು ।
ರಾಜರ್ಷಿ ಮೋಸದಿಂ ನೀ ಪೋದೆಯಾ ॥೪॥

ಪಾಡಿಹರಸುತಲಿದ್ದೆ ಈ ನಾಡಜನರನ್ನು ।
ಬೇಡಿದ್ದ ಕೊಡುತಿರ್ದೆ ನಿನ್ನವರಿಗೆ ॥
ನೋಡಿದರೆ-ನಾ-ನಿನ್ನ ಬೇಡವೆನುತಿರ್ದೆನೈ ।
ದೂಡಿ ಮೋಸವಮಾಡಿ ನೀಂ ಪೋದೆಯಾ ॥೫॥

ಜಯವಾಗಲೆಲೆನೃಪತಿ ನಿನಗಲ್ಲಿ ಸಂತತಂ ।
ಲಯಕರ್ತನಾಲೋಕ ದೊಡೆಯಂತನವಾ ॥
ದಯದಿಂದನೀಡುತಲಿ ಕರುನಾಡ ಪರಕೀರ್ತಿ ।
ಜಯಗಂಭ ಮೆರೆವಂತೆ ವರವೀಯಲೀ ॥೬॥

ಕವಿ :— ಕಮಲಾಪುರದ ಕೆ. ಕೊಟ್ರಪ್ಪ,
ಶಾಲಾ ಉಪಾಧ್ಯಾಯರು, ಹನಗವಾಡಿ.

# ಮುಖ್ಯವಾಗಿ ಚರಪಟ್ಟಾಧಿಕಾರಿಗಳು ಗ್ರಹಿಸಿಡತಕ್ಕ (ವಿಷಯಗಳು.)

ವೀರಶೈವ ಮತ ಉತ್ಪತ್ತಿ ಹೇಗಾಯಿತು ? ಉತ್ಪತ್ತಿಯ ಮೂಲಕಾರಣ ವಾವುದು ? ಯಾವಯಾವತತ್ವಗಳಿಂದ ಯಾವಯಾವ ವಿಷಯಗಳು ಉಪ್ಪವಿಸಿದವು ಎಂಬುದನ್ನು ಚನ್ನಾಗಿತಿಳಿಯಬೇಕಾಗುತ್ತದೆ. ಪಂಚಸೂತ್ರಗಳು, ಪಂಚಗೋತ್ರಗಳು, ಪಂಚಪೀಠಗಳು, ಪಂಚಾಚಾರಗಳು, ಅಷ್ಟಾವರಣಗಳು ಅಂದರೆ ಗುರು, ಲಿಂಗ, ಜಂಗಮ, ವಿಭೂತಿ, ರುದ್ರಾಕ್ಷಿ, ಮಂತ್ರ, ಪಾದೋದಕ, ಪ್ರಸಾದ ಇವು ಎಂಟು ಆವರ್ಣಗಳು. ಅದರೆ ಇವುಗಳ ತತ್ವಕಲೆಗಳನ್ನರಿತುಕೊಂಡು ನೂರಾ ಒಂದು ಸ್ಥಲಗಳ ಮರ್ಮವನ್ನು ಚನ್ನಾಗಿ ವಿಮರ್ಶಮಾಡತಕ್ಕ ಶಕ್ತಿಯು ಇರಬೇಕು. ತಾವು ಆ ಸ್ಥಲಗಳನ್ನು ಕ್ರಮವಾಗಿ ಅನುಸರಣೀಯರಾಗಿರಬೇಕು. ಮುಖ್ಯವಾಗಿ ಈ ಮತತತ್ವಗಳನ್ನು ಭೋಧಮಾಡುತ್ತಿರಬೇಕು. ಇವುಗಳಲ್ಲದೆ ವೈದಿಕ ಕರ್ಮಗಳನ್ನು ಅಂದರೆ ಲಿಂಗಧಾರಣ, ದೀಕ್ಷಾವಿವಾಹ, ಜಾತಕರ್ಮ, ಅಂತೇಷ್ಟಿ, ಇವೇ ಮೊದಲಾದ ವಿಧಾನಗಳನ್ನು ಮಾಡಿಸತಕ್ಕುದನ್ನು ಚನ್ನಾಗಿ ಅರಿತವರಾಗಿರಬೇಕು ಮತ್ತು ನೈತಿಕ ವಿಷಯವನ್ನೂ ಸಹ ಭಕ್ತರಿಗೆ ಭೋಧಿಸ ತಕ್ಕವರಾಗಿರಬೇಕು.

ಇಂಥಾ ಮತತ್ವಗಳ ಶಿಕ್ಷಣವನ್ನು ಪಟ್ಟಚರಾಧಿಕಾರಿಗಳಾಗತಕ್ಕವರುಹೊಂದಿ ಈ ಸಂಬಂಧ ಪಟ್ಟಚರಾಧಿಕಾರಿಗಳಾಗತಕ್ಕ ವಟುಗಳ ಪರೀಕ್ಷೆ ಒಂದು ಇಡಬೇಕು ಇದರಲ್ಲಿ ತೇರ್ಗಡೆ ಹೊಂದಿದವರಿಗೇನೇ ಅಧಿಕಾರಕೊಡತಕ್ಕದ್ದು. ಈ ಶಿಕ್ಷಣವನ್ನು ಹೊಂದದೆ ಇದ್ದಂಥಾ ಅಧಿಕಾರಿಗಳಾಗಿದ್ದರೂ ಕೂಡ ಅವರು ಮುಂದೆ ಈ ಶಿಕ್ಷಣವಲ್ಲಿ ಸರ್ಟಿಫಿಕೇಟು ಹೊಂದಬೇಕು ಅಂದರೆ ಭಕ್ತರಿಗೆ ಬೋಧಿಸಲು ಯೋಗ್ಯರೆಂದು ತಿಳಿಯಬೇಕು.

ಮತ್ತು ಇಂಥಾ ಧರ್ಮತತ್ವಗಳನ್ನು ಬಲ್ಲಂಥಾ ಅಧಿಕಾರಿಗಳು ತಮ್ಮ ತಮ್ಮ ಪ್ರಾಂತಗಳಲ್ಲಿ ಪ್ರತಿಯೊಂದು ಹಳ್ಳಿಗಳಲ್ಲಿ ಹೋಗಿ ವೀರಶೈವರ ಖಾನೇಸುಮಾರಿ ಮರ್ದುಮಸುಮಾರಿ ರಜಿಷ್ಟರಗಳನ್ನು ತಮ್ಮ ದಪ್ತರದಲ್ಲಿಟ್ಟುಕೊಂಡುದನ್ನು ಆಯಾ ಗ್ರಾಮಗಳ ಮಠಾಧಿಕಾರಿಗಳಿಂದ ಖಾನೆಸುಮಾರಿ ಮರ್ದುಮ ಸುಮಾರಿ ಲೆಕ್ಕಗಳನ್ನು ಮಾಡಿಕೊಂಡು ತಮ್ಮ ರಜಿಷ್ಟರದಲ್ಲಿ ಬರೆದಿಟ್ಟು ಒಂದು ಮಾಸದಲ್ಲಿ ಖಾತ್ತೆ

ಜನರಿರುತ್ತಾರೋ ಅವರಿಗೆ ಸರ್ವರಿಗೂ ಲಿಂಗಗಳುಂಟೋ ಇಲ್ಲವೋ ಎಂಬು ದನ್ನು ಪ್ರತಿಯೊಬ್ಬರ ಮನೆಗಳಿಗೆಹೋಗಿ ತನಖಿಮಾಡಿ ಲಿಂಗ ಯಾರಿಗಿಲ್ಲವೋ ಅವರಿಂದ ಪ್ರತಿಯೊಬ್ಬರಿಗೆ ನಾಲ್ಕಾಣೆಯಂತೆ ಜುಲುಮಾನೆ ಮಾಡಿ ತಮ್ಮಲ್ಲಿ ತಂದಿದ್ದ ಪಂಚಸೂತ್ರ ಲಿಂಗವನ್ನು ವಿಧ್ಯುಕ್ತ ಪ್ರಕಾರ ಅವರಿಗೆ ಧರಿಸಿ ಎಲ್ಲಾ ಭಕ್ತರನ್ನೂ ಒಂದು ಕಡೆಗೆ ಕೂಡಿಸಿ ಅವರಿಗೆ ಧರ್ಮೋಪದೇಶವನ್ನು ಮಾಡಬೇಕು. ಇದರಂತೆ ಪ್ರತಿಯೊಬ್ಬ ಅಧಿಕಾರಿಗಳು ಈ ಪ್ರಕಾರ ಹಳ್ಳಿಗಳಲ್ಲಿ ಧರ್ಮೋಪದೇಶಮಾಡಿ ತಮ್ಮ ನಿತ್ಯ ಡೈರಿಯಲ್ಲಿ ಯಾವಗ್ರಾಮದಲ್ಲಿ ಎಷ್ಟುದಿವ್ಸ ಮೊಕ್ಕಾಂ ಆಯಿತು ಏನುಕೆಲಸ ಮಾಡಿದ್ದನ್ನು ಬರೆಯಬೇಕು. ಒಂದು ವರ್ಷದೊಳಗಾಗಿ ಎಷ್ಟೆಷ್ಟುಕೆಲ್ಸಮಾಡಿರು ವರೋ ಅವುಗಳ ರಿಪೋರ್ಟುಗಳನ್ನು ತಯಾರುಮಾಡಿಕೊಂಡು ಸಮ್ಮೇಲಕಾಲಕ್ಕೆ ತಮ್ಮ ತಮ್ಮ ರಿಪೋರ್ಟಿನವರದಿಯನ್ನು ಸರ್ವರಿಗೂಗೊತ್ತುಪಡಿಸಬೇಕು. ಹಾಗೂ ಪೀಠದವರಿಗೂ ಸಮ್ಮೇಲನದಲ್ಲಿ ಕೂಡಿದ ಸರ್ವಅಧಿಕಾರಿಗಳ ರಿಪೋರ್ಟುಗಳ ತನಿಖೆ ಯನ್ನು ಕಳುಹಿಸಬೇಕು.

ಒಂದು ಗ್ರಾಮದಲ್ಲಿ ಅಧಿಕಾರಿಗಳಿದ್ದು ಆ ಗ್ರಾಮದವರು ಅಧಿಕಾರಿಗಳ ಸಂಗಡ ವೈಷಮ್ಯದಿಂದ ಅವರನ್ನು ಬಿಟ್ಟು ಎರಡನೆ ಅಧಿಕಾರಿಗಳ ಕಡೆ ತಮ್ಮ ಕಾರ್ಯ ನಿಮಿತ್ಯವಾಗಿ ಹೋದರೆ, ಆ ಅಧಿಕಾರಿಗಳು ಭಕ್ತರಿಗೆ ಒಪ್ಪಿಗೆಯನ್ನು ಕೊಡದೆ ಅವ ರಿಗೆ ಬೋಧಮಾಡಬೇಕು. ತಮ್ಮ ಪ್ರಾಂತದಲ್ಲಿ ಅಧಿಕಾರಿಗಳು ಇದ್ದು ಅವರ ಸಂಗಡ ಸಹಕರಿಸದೆ ನಮ್ಮ ಹತ್ತರಬಂದರೆ, ಅಧಿಕಾರಿಗಳು ಎಂಬುವದು ಎಲ್ಲರೂ ಒಂದೇ ಸ್ವರೂಪಿಗಳು ನಮ್ಮ ಸ್ವರೂಪವೇ ಅಲ್ಲೇ ಅದೆ. ಅವರನ್ನು ಬಿಟ್ಟು ನಮ್ಮಲ್ಲಿ ಬಂದರೆ ಏನು ಅದೆ ಆದೇಸ್ವರೂಪವೂ ಅಲ್ಲೇ ಅದೆ ಹೀಗಮಾಡಬಾರದೆಂದು ಹೇಳಿ, ಅವರಿಗೆ ಬಂದಿರುವ ವೈಷಮ್ಯದರೀತಿಯನ್ನು ತಿಳಿದುಕೊಂಡು ಆ ಗ್ರಾಮದ ಅಧಿಕಾರಿ ಗಳ ಕಡೆಗೆಹೋಗಿ ಅವರ ವೈಷಮ್ಯವನ್ನು ಮುರಿದು ಅವರವರಿಗೆ ಹಿತವಾಗುವಂತೆ ಮಾಡಿ ಅವರಿಂದಲೇ ಕಾರ್ಯ ತೀರಿಸಿಕೊಳ್ಳಿರೆಂದು ಹೇಳಬರತಕ್ಕದ್ದು. ಒಬ್ಬ ಅಧಿ ಕಾರಿಗಳು ಭಕ್ತರ ಅನಾಚಾರವನ್ನು ತಿದ್ದುವದಕ್ಕಾಗಿ ಆತನನ್ನು ತಿರಸ್ಕರಿಸಿದ್ದರೆ ಇನ್ನೊಬ್ಬ ಅಧಿಕಾರಿ ಆ ಭಕ್ತನನ್ನು ತಿರಸ್ಕರಿಸಬಾರದು. ಯಾವ ಭಕ್ತ ಮಹೇ ಶ್ವರರೇ ಆಗಲಿ ಪೀಠಾಧಿಕಾರಿಗಳ ಅಧಿಕಾರವನ್ನು ಮೀರಿ ಮನಸ್ಸಿಗೆ ಬಂದಂತೆ ಯಾರಿ ಗಾದರೂ ಅಧಿಕಾರವನ್ನು ಮಾಡಿದ್ದರೆ ಅಂಥ ಅಧಿಕಾರಿಯನ್ನು ಮನ್ನಿಸಕೂಡದು. ಅಂಥವನನ್ನು ಅಧಿಕಾರಿ ಎಂದು ಯಾವಾಗಲೂ ತಿಳಿಯಬಾರದು, ಸಹಕರಿಸಬಾರದು.

# ನೀತಿಸಂಗ್ರಹ.



ಎಲವು ತೊಗಲಿನ ದೇಹ ।
ಹೊಲೆಮುಟ್ಟಲಂಜುವದು ॥
ಮಲರಾಶಿಯೊಡಲ ತುಂಬಿರಲು ಬಾಹ್ಯದೊಳು ॥
ಬಲುಡಂಬವೈಯ್ಯ ಸರ್ವಜ್ಞ ॥

★ ★ ★ ★ ★

ಬೆಲ್ಲದೂಟವನೊಲ್ಲ ।
ಪಲ್ಯ ಚಟ್ನಿಯನೊಲ್ಲ ॥
ನೆಲ್ಲಕ್ಕಿಯನ್ನ ಉಣಲೊಲ್ಲ ಏಕೊಲ್ಲ ॥
ಇಲ್ಲುಪಕ್ಕೊಲ್ಲ ಸರ್ವಜ್ಞ ॥

★ ★ ★ ★ ★

ಮೋಡದೊಳು ಮಿಂಚೊಡೆದು ।
ಕೋಡದೊಳು ಗುಡುಗೊಡೆದು ॥
ಜೋಡುಗಾಮನ ಬಿಲ್ಲು ಮೂಡಲೊಡೆ ಜಗವೆಲ್ಲ ॥
ರಾಡಿಮೇರಾಡಿ ಸರ್ವಜ್ಞ ॥

● ● ● ● ●

ಹಲ್ಲು ಹಡವಾಗಿರಲು ತಿನ್ನೆ ಕಡಲಿಗಳಿಲ್ಲ ।
ಬೆಲ್ಲ ಕಡಲಿಗಳಿರಲು ಹಲ್ಲಿಲ್ಲವು ॥
ಒಲ್ಲೆ ನೊಲ್ಲೆನು ದೇವ ಪಕ್ಷಪಾತಿಯತಿ ನೀನು ॥
ಸೊಲ್ಲಡಗಿಸ್ಸೈ ಸಾಕು ಸಂಸಾರವು ॥

— ಶ್ರೀ ಶಿವ.





ಶ್ರೀ ಜಗದ್ಗುರು ಪಂಚಾಚಾರ್ಯಾಃ ಪ್ರಸೀದತು.

# ಅನುಷ್ಠಾನಸಮಾಪ್ತಿ ಮಹೋತ್ಸವ.



ನಿಜಾಮು ಇಲಾಖಾ ಕೊಪ್ಪಳ ತಾಲೂಕು, ಯಲಬುರ್ಗಿ ಧರಮುರುಡಿ ಹಿರೇ ಮಠದ ಶ್ರೀ ॥ ಷ ॥ ಬ್ರ॥ ಪಟ್ಟಾಧ್ಯಕ್ಷ ವೃಷಭಲಿಂಗ ಶಿವಾಚಾರ್ಯ ಮಹಾ ಸ್ವಾಮಿಗಳವರು ಇದೇ ವಿಕ್ರಮ ಸಂ॥ ಶ್ರಾವಣ ಶು॥ ದಿಂದ ಒಪ್ಪತ್ತೀ ಕ್ಷೀರಾಹಾರಿ ಗಳಾಗಿ ಜಗತ್ತಿನ ಕಲ್ಯಾಣಕ್ಕೋಸ್ಕರ ಒಂದು ತಿಂಗಳವರೆಗೂ ಅನುಷ್ಠಾನಮಾಡಿ, ಭಾದ್ರಪದ ಶು॥ ೧೦ ಬುಧವಾರ ಸಮಾಪ್ತಿಗೊಳಿಸಿದರು.

ಆ ದಿವಸ ವಿಶೇಷ ಪೂಜೋತ್ಸವಗಳಿಂದ ೪–೬ ಸಾವಿರಾರು ಜನಗಳಿಗೆ ಅನ್ನಸತಂರ್ಪಣೆಯಾಯಿತು. ದಯಾಭರಿತರೂ, ಶಿವಪೂಜಾನಿರತರೂ, ಆದ ಮಹಾ ಸ್ವಾಮಿಗಳವರ ಪೂಜಾನುಷ್ಠಾನವು ಇದೇರೀತಿಯಾಗಿ ಪ್ರತಿವರ್ಷದ ಶ್ರಾವಣಮಾಸ ದಲ್ಲಿ ನಡೆದು ಸಕಲಜನಗಳಿಗೂ ಅನ್ನಸಂತರ್ಪಣೆಯಾಗುತ್ತಿರುವುದು.

ಹೀಗೆ ಅತ್ಯಂತ ವೈಭವದಿಂದ ನಡೆಯುತ್ತಿರುವ ಸಮಾರಾಧನೆಯ ಸಮಯಕ್ಕೆ ಸುಣಕಲ್ ಬಿದರಿ ಆರಾಳುಮಠದ ವೇ॥ ಪಂ॥ ಹರೀಶ್ವರ ಶಾಸ್ತ್ರಿಗಳು ಅಕಸ್ಮಾತ್ ಆಗಮಿಸಿದ್ದರಿಂದ ಪಂಡಿತರ ಮಧುರವಾಣಿಯಿಂದ ಪ್ರವಚನವನ್ನು ಕೇಳಬೇಕೆಂದು ಸದ್ಭಕ್ತ ಮಂಡಲಿಯು ಅಪೇಕ್ಷಿಸಿದಮೇರೆಗೆ ಸರ್ವರ ಇಚ್ಛೆಯನ್ನು ಮಾನ್ಯಮಾಡಿ ಪಂಡಿತರು ‘‘ ಶ್ರೀ ಜಗದ್ಗುರು ರೇಣುಕ ಶಿವಾಚಾರ್ಯರು ದುರ್ಮಾರ್ಗಿಯೂ, ದುರಾ ರಾಚಾರಿಯೂ, ಗುರುದ್ರೋಹಿಯೂ ಆದ ಗೋರಖನಾಥನ ಅಹಂಕಾರವನ್ನು ನಾಶ ಮಾಡಿ ವಿವೇಕೋದಯವಾಗುವಂತೆ ಸಮುಪದೇಶಮಾಡಿದ ಈ ಕಥೆಯನ್ನು ಎರಡು ದಿವಸಗಳವರೆಗೂ, ಬಹು ಸ್ವಾರಸ್ಯವಾಗಿಯೂ ಯುಕ್ತಿ ಶಕ್ತಿಗಳಿಂದಲೂ, ಮಧ್ಯ ಮಧ್ಯದಲ್ಲಿ ವಿನೋದಕರಗಳಾದ ಕಥೆಗಳಿಂದಲೂ, ಪ್ರವಚನವನ್ನು ಹೇಳಿ ಸಕಲ ಜನಗಳಿಗೆ ಆನಂದವನ್ನುಂಟುಮಾಡಿದರು.

ವಿದ್ಯಾವಂತರೂ, ಜಿತೇಂದ್ರಿಯರೂ, ಮಹಾತಪೋನಿಷ್ಠರೂ, ಆದ ಶ್ರೀಮಠದ ಸ್ವಾಮಿಗಳವರು ನಿಷ್ಕಾಮ ಬುದ್ಧಿಯಿಂದ ತಾವುಮಾಡಿದ ಒಂದು ತಿಂಗಳ ಅನುಷ್ಠಾನದ ಫಲವನ್ನು ಇಡೀ ಜಗತ್ತಿನ ಕಲ್ಯಾಣಕ್ಕಾಗಿ ಧಾರೆಯೆರೆದು ಯುದ್ಧದ ತೊಡರಿನೊಳಗೆ ಶಿಕ್ಕು ದಾರುಣಸ್ಥಿತಿಯೊಳಗಿರುವ ಜಗತ್ತು ಶೀಘ್ರದಲ್ಲಿಯೇ ಶಾಂತಿಮಯವಾಗಲೆಂದು, ಆಶೀರ್ವದಿಸಿ ವೇ॥ ಪಂಡಿತರಿಗೆ ಪುಷ್ಪಮಾಲಿಕೆಯಿಂದ ಬಹುಮಾನಪೂರ್ವಕವಾಗಿ ಗೌರವಿಸಿ ಸತ್ಕರಿಸಿದರು.

ಲೋಕಕಲ್ಯಾಣಕ್ಕಾಗಿ ಯತ್ನಿಸುವ ಮಹಾತ್ಮರಿಗೆ ಪರಮಾತ್ಮನು ಉದ್ದಂಡವಾದ ಆಯುಷ್ಯವನ್ನು ದಯಪಾಲಿಸಲಿ.

ಮತ್ತು ಅನುಷ್ಠಾನ ಸಮಾಪ್ತಿಯ ಸಮಾರಾಧನೆಯಲ್ಲಿ, ವಿಶೇಷವಾಗಿ ಸಹಾಯಮಾಡಿ, ಉತ್ಸಾಹದಿಂದ ಕಾರ್ಯಮಾಡಿದ ಯಲಬುರ್ಗಿ ಗ್ರಾಮದವರಿಗೆ ಉತ್ತರೋತ್ತರ ಕಲ್ಯಾಣವಾಗಲಿ, ಇದೇರೀತಿಯಾಗಿ ಪ್ರತಿವರ್ಷವೂ ಮಾಡುವ ಸದ್ಬುದ್ಧಿಯನ್ನು ದಯಾಪರನಾದ ಪರಶಿವನು ದಯಪಾಲಿಸಲಿ.

ಯಲಬುರ್ಗಿ ಓರ್ವ ಸದ್ಭಕ್ತರು.

ಶ್ರೀ ಮದ್ದುಗಿರು ಫಕೀರೇಶ್ವರ ಯತಿವರೇಣ್ಯ ಪ್ರಸನ್ನ.

## ಶ್ರೀ ಕರ್ತೃರ ಗದ್ದುಗೆಯ ರುದ್ರಾಭಿಷೇಕ ಮತ್ತು ಪುರಾಣ ಶ್ರೀ ಮಹಾಸ್ವಾಮಿಗಳವರ ಪಾದಪೂಜೆ ಸಮಾಪ್ತಿ.



( ಶಿರಃ ಪುರಸಂಸ್ಥಾನಮಠ. )

“ ಆರ್ಯಾವರ್ತಃ ಪುಣ್ಯಭೂಮಿರ್ಮಧ್ಯಂ ವಿಂಧ್ಯಹಿಮಾಲಯೋಃ ”

ಎಂಬಂತೆ ಅಮರಸಿಂಹನ ವಾಕ್ಯಾನುಸಾರವಾಗಿ ಇವೆರಡು ಪರ್ವತಗಳ ಮಧ್ಯದಲ್ಲಿ ಆರ್ಯರಿರುವರೆಂಬುದಾಗಿ ಹೇಳಿರುವರು. ಆಗಿನಕಾಲದಲ್ಲಿ ವಿಂಧ್ಯದಿಂದ

ದಕ್ಷಿಣ ಸಮುದ್ರದವರೆಗೂ, ದಂಡಕಾರಣ್ಯವೆಂತಲೂ, ಪ್ರತೀತಿಇತ್ತು ಭರತ ರಾಜನು ಒಂದು ಕಾಲದಲ್ಲಿ ಸಾರ್ವಭೌಮನಾಗಿ ಈ ಖಂಡವನ್ನಾಳಿರುವಕಾರಣ ಇದಕ್ಕೆ ಭರತಖಂಡವೆಂತಲೂ ಹೆಸರುಪ್ರಾಪ್ತವಾಗಿದೆ.

ಈ ಭರತಖಂಡವು ಅನಂತ ಸಂಪತ್ತಿನ ಸಾಗರವೆನಿಸಿ ಮಹಾಮಹಾ ತಪೋನಿಷ್ಠರಾದ ಅಗಸ್ತ್ಯಾದಿ ಋಷಿಗಳಿಗೂ, ವೀರಾಧಿವೀರರಿಗೂ, ದಾನಶೂರರಿಗೂ. ಅನಂತ ತ್ಯಾಗಿಗಳಿಗೂ, ವಿಭೂತಿಗಳಿಗೂ, ಜನನಸ್ಥಾನವಾಗಿ ಈಗಲೂ ನಿದರ್ಶನವೆನಿಸಿದೆ. ಇವರಲ್ಲಿ ಮುಖ್ಯವಾಗಿ ದಂಡಕಾರಣ್ಯದಲ್ಲೂ, ಅಗಸ್ತ್ಯ, ರಾಮಚಂದ್ರಾದಿ ಮಹಾ ಜನಗಳು ತಪವನ್ನಾಚರಿಸಿ ಈಶನನ್ನು ಕಂಡು ಕೊಂಡ ಅನೇಕ ಸ್ಥಾನಚಿನ್ಹೆಗಳುಂಟು ನಂತರ ಇತ್ತೀಚಿಗೆ ಅನೇಕರೂ ಇಲ್ಲಿಯೇ ಉದಯಿಸಿ, ತಮ್ಮ ಅಗಾಧವಾದ ತ್ಪೂಜಾಯೋಗಾದಿ ಸಾಮರ್ಥ್ಯವೆಂಬಅನಂತಪವಾಡುಗಳನ್ನೂ ಜಗತ್ತಿಗೆಬೀರಿ, ಅನೇಕ ರಾಜಾಧಿರಾಜರಿಂದ ಪೂಜದ ನಿಮಿತ್ತ್ಯಕ್ಕಾಗಿ ಮಠ, ಜಮೀನುಗಳು ನಿರ್ಮಿಸಲ್ಪಟ್ಟವು ಅವುಗಳಲ್ಲಿ ಒಂದಾದ ಪವಿತ್ರಸ್ಥಾನವೆನಿಸಿದ ಶಿರಹಟ್ಟಿ ಶ್ರೀಗುರು ಫಕೀರೇಶ್ವರ ಮೂಲಕರ್ತನ ಗದ್ದುಗೆಗೆ ಪ್ರತಿವರ್ಷ ಪದ್ಧತಿಯಂತೆ, ಈ ವರ್ಷವಾದರೂ ಇದೇ ಶ್ರಾವಣ ಶು॥ ೫ ರಿಂದ ನದರಿ ಸಂಸ್ಥಾನಮಠದಲ್ಲಿ ವೇ॥ ಸಿದ್ಧಾಂತ ಗಂಗಾಧರ ಶಾಸ್ತ್ರಿಗಳು ಮಂಗಳ ಪ್ರಸನ್ನದೇವರಮಠ ವರ ನೈದೀಕ ಜ್ಯೋತಿಷ್ಯಾಧ್ಯಾಪಕರ ತಮ್ಮ ಶಿಷ್ಯರಿಂದ ಪ್ರತಿದಿವಸ ಏಕಾದಶಿ ರುದ್ರಾಭಿಷೇಕ, ಸಹಸ್ರಬಿಲ್ವಾರ್ಚನೆ ಮೊದಲಾದ ಷೋಡಶೋಪಚಾರಗಳಿಂದ ವಿಜೃಂಭಣೆಯಿಂದ ಜರುಗಿಸಿ ಇದಲ್ಲದೆ ಮೂಲ ಕರ್ತೃವಿನ ಲೀಲಾತ್ಮಕವಾದ ಮಹಾಪುರಾಣವನ್ನು ವೇ॥ ಶಂಕರಯ್ಯನವರು ಗಾನಾಮೃತವಾಣಿಯಿಂದ ಓದಿ ವೇ॥ ಫಕೀರಪ್ಪಯ್ಯ, ಮಾಸ್ತರ ಇವರು ತಮ್ಮ ಅಮೃತ ವಾಣಿಯಿಂದ ಜನವೃಂದಕ್ಕೆ ಬಿಂಬಿಸುವಂತೆ ಶ್ರಾವಣಾಂತ್ಯದವರೆಗೂ ಬೋಧಿಸಿ, ಭಕ್ತರನ್ನು ಆನಂದ ಗೊಳಿಸಿದರು.

ಅರ್ಥಾತ್ ಶ್ರಾವಣಾಂತ್ಯದಿಂದ ಭಾದ್ರಪದ ಶು॥ ೪ ರ ವರೆಗೆ ಭಕ್ತವೃಂದ ದಾಗ್ರಾನುಸಾರವಾಗಿ (೫) ದಿವಸ ಪಾದಪೂಜೆ, ತೀರ್ಥಪ್ರಸಾದದ ಸಮಾರಂಭವು, ಸಾಧುಮಹಾತ್ಮರ ಮತ್ತು ಭಕ್ತಾದಿಗಳಿಂದಲೂ, ಪ್ರತಿನಿತ್ಯವೂ ನೆರವೇರುತ್ತಿತ್ತು.

ಪಾದಪೂಜಾಂತ್ಯದ ಭೂರಿಗಣಾರಾಧನೆಯು ರಂಭಾಸ್ತಂಭ, ತಳಿರು; ತೋರಣಾದಿಗಳಿಂದ ಅಲಂಕೃತವಾಗಿ ಮಠ ಸೋಭಿಸುತ್ತಿತ್ತು.

ಮತ್ತು ನಂತರ ಭಕ್ತಜನಗಳು ಭಕ್ತಿಸೇವೆಗಳನ್ನು ಅರ್ಪಿಸಿ ಹಾಗೂ ಆರಾಧನೆಗೆ ನೆರೆದ ೨-೩ ಸಹಸ್ರ ಜನಗಳಿಗೆ ಶಾಂತರೀತಿಯಿಂದ ತೃಪ್ತಿಯಂಮಾಡಿಸಿ ಮಾಹೇಶ್ವರರಿಗೆ ತಾಂಬೂಲ ದಕ್ಷಿಣೆಗಳನ್ನರ್ಪಿಸಿ ಉಳಿದ ಸರ್ವಜನಗಳಿಗೆ, ತಾಂಬೂಲಾದಿಗಳಿಂದ ಸಂತೋಷಪಡಿಸಿ ಗಣಾರಾಧನೆ ಪೂರ್ತಿಯಾದನಂತರ ಶಿವಭಜನೆ, ಕೀರ್ತನಾದಿಗಳಿಂದ ಜನಾನಂದಮಾಡಿ ಈ ಪ್ರಕಾರ ಈ ವರ್ಷದ ಆರಾಧನೆಯನ್ನು ಮುಗಿಸಿ ಶ್ರೀ ಫಕೀರೇಶ್ವರರ ಅನುವಂಶಕರಾದ (೯)ನೇ ಪಟ್ಟಾಧಿಕಾರಿಗಳಿಂದ ಶ್ರೀ ಚನ್ನವೀರ ಮಹಾಸ್ವಾಮಿಗಳ ಆಶೀರ್ವಾದವೀಯಲು ನೆರದ ಸರ್ವ ಜನಸಮೂಹವು ಜಯಘೋಷವಂಗೈದು, ಸಮಾಪ್ತಿಗೊಳಿಸಿದರು.

ಶಿವಂಭೂಯಾತ್.

ಸೂಚನೆ:— ಭಕ್ತಿಯ ಸೇವೆಯನ್ನು ಅರ್ಪಿಸಿದ ಜನರಿಗೂ, ಪುರಾಣ ಪ್ರವಚನಕಾರರಿಗೂ, ಅಥವಾ ಆಯಾಗ್ರಾಮಗಳಲ್ಲಿರುವ ಮಹಾಶಯರಿಗೂ, ಶ್ರೀ ಗುರುಮೂಲ ಫಕೀರೇಶ್ವರನು ಎಲ್ಲರಿಗೂ ಆಯುರಾರೋಗ್ಯಭಾಗ್ಯಾದಿ ಸಕಲಸಂಪದಗಳನ್ನಿತ್ತು ಅನುಗ್ರಹಿಸಲೆಂದು ಅನನ್ಯಭಾವದಿಂದ ಪ್ರಾರ್ಥಿಸುವೆವು,

ಓಂ. ತತ್. ಸತ್.

ಶಿರಹಟ್ಟಿ ಸಂ॥ ಮಠದಮುಕ್ತಾದಾರ,
ಗುರುಭಕ್ತ,
ಫಕೀರಪ್ಪ ಶಿವಜೋಗಪ್ಪ ಬೋರಶೆಟ್ರು.

---

ಲೇಖಕರಿಗೆ ಸೂಚನೆ:—

ನಮ್ಮ ಪತ್ರಿಕೆಗೆ ಬರೆದುಕಳುಹಿಸುವ ಲೇಖನವನ್ನು ತಪ್ಪಿಲ್ಲದಂತೆಯೂ, ಅಕ್ಷರಗಳನ್ನು ದುಂಡಾಗಿಯೂ, ಒರೆದುಕಳುಹಿಸಬೇಕು.

ಸಂಪಾದಕ,
" ಧರ್ಮರಾಜ್ಯ "

# —[ ಮಾಸ ಭವಿಷ್ಯ. ]—



ಬರೆದವರು:—

ಹೊಳಗುಂದಿ ಹಿರೇಮಠದ,

ವೇ|| ಶಿಂ|| ಶಿವರುದ್ರಶಾಸ್ತ್ರಿಗಳು.

ಹಿರೆಮೇಗಳಗೇರಿ, ಹರಪನಹಳ್ಳಿ ತಾಲೂಕು, ತೆಲಗಿ ಪೋಷ್ಟು.

ತಾ|| ೨—೧೦—೧೯೪೦ ರಿಂದ ೨೦—೧೧—೧೯೪೦ ರವರೆಗೆ ನಡೆಯುವ

( ಅಶ್ವೀಜಮಾಸದ ದ್ವಾದಶ ರಾಶಿಯ ಭ-ವಿಷ್ಯ ಮಳೆ ಭವಿಷ್ಯ ಸಹಿತ. )

**ಮೇಷ:**— ಸಂಪತ್ತು ಮಿತ್ರರನ್ನು ದೊರಕಿಸಿಕೊಡುವುದು. ವಿಪತ್ತು ಮಿತ್ರರಲ್ಲಿ ಕಲಹವನ್ನುಂಟುಮಾಡುವುದು. ಯಾವುದೋ ಒಂದು ವಿಷಯದ ಅನುಕೂಲತೆಯಾಗತೊಡಗಿದರೆ, ಬೇರೆಕಡೆಯಿಂದ ಸಹಾಯದೊರಕುವದು. ಇದರ ಅನುಭವವು ಈ ತಿಂಗಳಲ್ಲಿ ನಿಮಗೆ ತಿಳಿಯುವುದು. ಬೇರೇಕಾರಣದಿಂದ ಮನಸ್ಸಿನ ಕೆಲಸಗಳು ವಿರುದ್ಧವಾಗಿ ಆದಷ್ಟು ಕಷ್ಟಗಳು ಸಂಭವಿಸುವ ಯೋಗವಿದೆ. ವೈಯ್ಯಲ್ಲಿ ಒಂದು ಬಗೆಯ ಉಲ್ಲಾಸ ಉಂಟಾಗುವುದು. ದಿನೇ ದಿನೇ ಸಿಟ್ಟಿಗೇಳುವ ಪ್ರಸಂಗ ಬರುವುದು. ಗೃಹಕೃತ್ಯದ ಕೆಲಸದಲ್ಲಿಯೂ, ಧಾರ್ಮಿಕ ಕೆಲಸಗಳಲ್ಲಿಯೂ, ಅಲ್ಲಸಲ್ಲದ ಸಂಕಟಗಳು ಬಂದೊದಗುವವು. ಮನಸ್ಸಿನಲ್ಲಿ ಸಂಶಯದ ಪಿಶಾಚಿ ಬೆಳೆಯುವುದು. ಅವಿಚಾರಗಳು ಸಂಭವಿಸದಂತೆ ಹುಷಾರಿಯಿಂದಿರಬೇಕು ನಿಮ್ಮ ಉದ್ಯೋಗ ವ್ಯವಹಾರಗಳಲ್ಲಿ ಲಕ್ಷದಿಂದ ಕೆಲಸಮಾಡಿರಿ. ಭಾತೃವರ್ಗದಲ್ಲಿ ಕಲಹವಾಗುವ ಯೋಗವಿರುವುದು. ಶತೃಸ್ಥಾನದಲ್ಲಿ ರವಿ, ಮಂಗಳ, ರಾಹು, ಬುಧರು ವಾಸಮಾಡುವುದರಿಂದ ಪ್ರಾಣಭಯವು, ಸ್ತ್ರೀಮೂಲಕ ಕಲಹವು ಅನಾರೋಗ್ಯವುಂಟಾದೀತು. ವಿದ್ಯಾರ್ಥಿ—ವಿದ್ಯಾರ್ಥಿನಿಯರಿಗೆ, ಸಾಧಾರಣ ಸುಖವು. ನೌಕರಿಯ ಜನರಿಗೆ ಶುಭಯೋಗವಿರುವುದು, ಖರ್ಚಿನ ಸಂಭವವು ಒದಗುವದು.

ವೃಷಭ:— "ಮೂರ್ತಿ ಸಣ್ಣದಾದರೂ ಕೀರ್ತಿ ದೊಡ್ಡದು" ಎಂಬ ಭಾವನೆಯನ್ನು ಮನಸ್ಸಿನಲ್ಲಿಟ್ಟುಕೊಂಡು, ನೀವು ನಿಮ್ಮ ಸಂಸಾರವನ್ನು ಸಾಗಿಸುವಿರಿ. ಆದರೆ ಸಂಸಾರ ರಥವನ್ನು ಮುಂದಕ್ಕೆ ಸಾಗಿಸಿರಿ. ಮಾನ ಮರ್ಯಾದೆಯಿಂದ ನಿಮ್ಮ ಬಾಳುವೆ ಸಾಗುವುದು. ಹೆದರಬೇಡಿ, ಪುತ್ರವರ್ಗದಲ್ಲಿಯೂ, ಶುಭಕಾರ್ಯದಲ್ಲಿಯೂ ತೊಂದರೆಯು. ವ್ಯವಹಾರಗಳಲ್ಲಿ ಸಾಧಾರಣ ಸುಖವು, ಸಾಧಾರಣ ಲಾಭವು. ವ್ಯಾಪಾರಸ್ಥರಿಗೆ ಅನುಕೂಲತೆ, ಬಂಧು ಬಾಂಧವರ ಸಮಾಗಮವು, ಉತ್ತಮರಲ್ಲಿ ಮನಸ್ತಾಪವು, ಮಾತೃವರ್ಗಕ್ಕೆ ತೊಂದರೆಯು, ಸರಕಾರಿ ಜನರಿಂದ ಮಾನ ಮರ್ಯಾದೆ ದೊರೆಯುವುದು. ಪ್ರಯಾಣದಲ್ಲಿ ಸುಖ ವಿದ್ಯಾರ್ಥಿ-ವಿದ್ಯಾರ್ಥಿನಿಯರಿಗೆ ಸಾಧಾರಣ ಸುಖವು ಸರಕಾರಿ ಮೂಲಕ ಅನುಕೂಲತೆಗಳು. ಲಂಚಕೋರರಿಂದ ಕಲಹ ಕೆಂಪು ವಸ್ತು, ರಸವಸ್ತುಗಳಿಂದ ಲಾಭವು. ಕಳತ್ರವರ್ಗಕ್ಕೆ ವ್ಯಸನವು, ಪಿತ್ತಾಧಿಕದಿಂದ ದೇಹಬಾಧೆ ಜರುಗುತ್ತದೆ. ತನ್ನವರಿಂದ ಕಾರ್ಯಸಾಧಿಸಿಕೊಳ್ಳುವಿಕೆ.

ಮಿಥುನ:— ನಿಮ್ಮನ್ನು ದೊಡ್ಡವರು, ದಾನಶೂರರು ಎಂದು, ಜನರು ಹೊಗಳುವರು. ಅವರ ಹೊಗಳಿಕೆಗೆ ಬೆರಗಾಗಬೇಡಿ, ಕೈಯ್ಯಲ್ಲಿ ದುಡ್ಡು ನಿಲ್ಲದಂತೆ ಈ ತಿಂಗಳಲ್ಲಿ ಗ್ರಹಮಾನ ಚನ್ನಾಗಿದೆಂದು ಹೇಳಿದರೆ, ಸುಖಸ್ಥಾನದಲ್ಲಿ ಮಂಗಳ, ರಾಹು, ಕೂತಿರುವರು ಆದ್ದರಿಂದ ಗೃಹಕೃತ್ಯದ ಮೂಲಕ ತೊಂದರೆಗಳುಂಟಾಗುವವು, ಬಂಧುವರ್ಗದಲ್ಲಿ ತೊಂದರೆಗಳು, ಮರಣ ವಾರ್ತೆಯನ್ನು ಕೇಳುವಿಕೆಯು ಪ್ರಾಪಂಚಿಕ, ಮಾನಸಿಕ ಸುಖಕಡಿಮೆ. ಆದಾಯ ವ್ಯಯಸಮ. ಮಾತೃವರ್ಗ, ದಲ್ಲಿ ತೊಂದರೆ. ದೇವತಾಕಾರ್ಯಗಳು ನಡೆಯುವವು, ವ್ಯಾಪಾರ ದಂಧೆಗಳ ಮೂಲಕ ಅಲ್ಪ ಸುಖವುಂಟಾಗುವುದು. ಪ್ರಯಾಣದಲ್ಲಿ ಸುಖವು ಕಡಿಮೆ. ರಸವಸ್ತುಗಳಿಂದ ಲಾಭವು. ಜನರಲ್ಲಿ ಕಿಂಚಿತ್ ಕಿಂಚಿತ್ತು ಕಲಹಗಳುಂಟಾಗುವವು.

ಕರ್ಕ:— ದುಡ್ಡೇ ದೊಡ್ಡಪ್ಪ, ಹಣವಿಲ್ಲದವನು ಹೆಣಕ್ಕಿಂತ ಕಡೆ, ಮನಸ್ಸಿನ ಸರಳತನವೇ ಆದೆಷ್ಟೋಸಲ ನಿಮ್ಮ ಕೈಯಿಂದಲೇ ನಿಮ್ಮ ಕಾಲಮೇಲೆ ಕಲ್ಲು ಹಾಕಿಕೊಂಡಂತೆ ಆಗುವುದು. ಉದ್ಯೋಗದಲ್ಲಿ ನಿರಾಶೆತೋರುವದು. ಶತೃಗಳು ಶರಣಾಗುವರು... ಅಳಿಸಿ ಆಡಿಬಿಡುವರು. ಯಾರಿಗೂ ಉಪಕಾರಮಾಡು

ಣಂಥಸ್ಥಿತಿ ಉಳಿದಿಲ್ಲ ವೆಸಿಸುವ ಸಂಭವಿಸಿದೆ. ಮಾನಸ್ಸಿಕ ಪ್ರಪಂಚಿಕಸುಖವು, ಅಲ್ಪವು, ಕಾರ್ಯಮಲ್ಲಿ ಕಲಹ- ಖರ್ಚುಗಳಲ್ಲಿ ಚಿಕ್ಕ ಉಷ್ಣತೆಯಿಂದ ದೇಹ ಬಾದೆಯು ಜರುಗುವುದು. ಕೋರ್ಟು ಕಚೇರಿಗಳಿಗೆ [illegible] ವುದು. ಜನರಲ್ಲಿ ಮನಸ್ತಾಪ ಹುಟ್ಟುವವು. ದಾನ-ಧರ್ಮಗಳಲ್ಲಿ ಅಸಂತೋಷವು. ಭಾತೃ-ಭಗಿನಿ ವರ್ಗದವರಿಗೆ ದೇಹದಲ್ಲಿ ಆಯಾಸವು. [illegible]. ವಿದ್ಯಾರ್ಥಿ—ವಿದ್ಯಾರ್ಥಿನಿಯರಿಗೆ ಸಾಧಾರಣಸುಖ. ಅಧಿಕಾರಿವರ್ಗದವರಿಗೆ [illegible] ಪ್ರಸಂಗ ಬಂದೊದಗುವುದು. ಆದಾಯ-ವ್ಯಯ ಸಮ. ನೀವು ಮಾಡುವ ಕೆಲಸದಲ್ಲಿ ಹುಷಾರಿ.

ಸಿಂಹ:— ದುಃಖದಲ್ಲೇ [illegible] ಉಗವುವಾಗುತ್ತಿರುವದು, ಪ್ರಾಪ್ತಿಯು ಕಡಿಮೆ. ಖರ್ಚು ಬಹಳ, ಯಾಕೆಂದರೆ, ಮನುಷ್ಯಪ್ರಾಣಿಯು ಸುಖ ಭೋಗಗಳನ್ನು ಬಯಸುವದಾಗಿದೆ. ಯಾವಾಗಲೂ, ನೀವು ಸುಖದಲ್ಲಿಯೂ, ಆನಂದದಲ್ಲಿಯೂ, ಕಾಲ ಕಳೆಯುತ್ತಿರುವಿರೆಂದು ಹೇಳಲು ಅಡ್ಡಿಯಿಲ್ಲ. ಚಿಂತೆ, ವ್ಯಸನಗಳೇನು ಕಡಿಮೆಯಿಲ್ಲ, ನೌಕರಿಯಲ್ಲಿ ಅದಾಯ ಹೆಚ್ಚುದೊರೆಯಲಾರದು. ತೊಂದರೆಗಳಂತೂ, ಇದ್ದೇ ಇರುತ್ತವೆ. ನಿಮ್ಮ ಮನಸ್ಸಿನ ಕೆಲಸಗಳು ಆಲಶ್ಯದಿಂದ ನೆರವೇರುವವು. ಪ್ರಯಾಣದಲ್ಲಿ ತೊಂದರೆಯು, ಮಿತಿಯಾಗಿ ಊಟಮಾಡಿರಿ, ಅಜೀರ್ಣದಿಂದ ಹೊಟ್ಟೆನೋವು ಬರಬಹುದು. ವೃಷ್ಟಾನ್ನ ಭೋಜನವು ನೇತ್ರಸೂಲೆಯು ಕುಟುಂಬದಲ್ಲಿ ತೊಂದರೆಯು, ನಿದ್ರೆಕಡಿಮೆ, ಪ್ರಯಾಣದಲ್ಲಿ ತೊಂದರೆಯು ದೂರ ಪ್ರಯಾಣಮಾಡಬೇಡಿರಿ. ಉದ್ಯೋಗಸ್ಥರಿಗೆ ಸ್ವಲ್ಪಸುಖವು. ನೌಕರದಾರರಿಗೆ ವ್ಯಸನವು. ವಿದ್ಯಾರ್ಥಿ-ವಿದ್ಯಾರ್ಥಿನಿಯರಿಗೆ ಅಲ್ಪ ಸುಖ. ದೊಡ್ಡವರ ದರ್ಶನವು, ಮಾನ-ಸನ್ಮಾನವು ಲಭಿಸುವುದು.

ಕನ್ಯ:— ನಿಮ್ಮ ಜನ್ಮಸ್ಥಾನದಲ್ಲಿ ರವಿ, ಮಂಗಳ, ರಾಹು ಈ ಮೂರು ಗ್ರಹಗಳು ವಾಸಮಾಡಿಕೊಂಡಿರುವವು. ನಿಮ್ಮ ಮನಸ್ಸು ನೆಮ್ಮದಿಯಾಗಿರುವುದಿಲ್ಲ. ಮನಸ್ಸು ಒಂದುಕಡೆ, ಮಾತು ಒಂದುಕಡೆ, ಕುಟುಂಬ ವರ್ಗದವರಿಗೆ ದೇಹಪೀಡೆ ಪ್ರಾಣಭಯ ಇತ್ಯಾದಿಗಳಿಂದ ತೊಂದರೆಗಳುಂಟಾಗುವವು, ಅಕಾಲಭೋಜನವಾಗುವುದು. ಗ್ರಹಪೀಡೆ ಜರುಗುವುದು. ಮಾತೃವರ್ಗದಲ್ಲಿ ಕಲಹಯೋಗವು, ಪ್ರಾಪಂಚಿಕ [illegible]

ಧರ್ಮ ಕಾರ್ಯಗಳಲ್ಲಿ ವಿಘ್ನಗಳೊದಗುವವು, ಆತ್ಮ ಸ್ನೇಹಿತರಲ್ಲಿ ಕಲಹ ಯೋಗವಿರು ವುದು. ಪುತ್ರ-ಪುತ್ರಿಯರಿಗೆ ಅನಿಷ್ಟಯೋಗ ಕಂಡುಬರುವುದು. ವಿದ್ಯಾರ್ಥಿ-ವಿದ್ಯಾ ರ್ಥಿನಿಯರಿಗೆ ಅಲ್ಪ ಸುಖ. ತನ್ನವರಿಗೂಕೂಡ ತೊಂದರೆ ಖರ್ಚಿನ ಪ್ರಸಂಗ ಬಂದೇ ಬರುವುದು. ವ್ಯಾಪಾರ ಉದ್ಯೋಗಗಳಿಂದ ಅಲ್ಪಲಾಭ ಸಿಗುವುದು. ಅನುಕೂಲ ವರಿತು ಕಾರ್ಯಸಾಧಿಸಿರಿ.

**ತುಲ:—** ಶಕ್ತಿ-ಯುಕ್ತಿ ಇದ್ದ ಮನುಷ್ಯನಿಗೆ ಯಾವ ತೊಂದರೆಗಳು ಬರುವ ವು? ಅವು ಮನುಷ್ಯನನ್ನು ರಕ್ಷಣೆಮಾಡುತ್ತಿರುವವು. ಶಕ್ತಿಗಿಂತ ಯುಕ್ತಿಯೇಮೇಲು. ಈ ತಿಂಗಳಲ್ಲಿ ನೀವು ಯುಕ್ತಿಯಿಂದ ಕೆಲಸ ಮಾಡಿರಿ. ನೀವು ಮಾಡಿದ ಕಷ್ಟಕ್ಕೆ ತಕ್ಕಂತೆ ನಿಮ್ಮ ಫಲಗಳು ನಡೆಯುವವು. ೧೨ ನೇ ಮಂಗಳನು, ೧೨ ನೇ ರಾಹು, ೭ ನೇ ಶನಿಯುಕಾಟ ಈ ತಿಂಗಳಲ್ಲಿ ನಿಮ್ಮ ಬೆನ್ನುಹತ್ತಿರುವುದು. ನೀವು ಹುಷಾರಿ ಯಿಂದ ನಿಮ್ಮ ಕೆಲಸವನ್ನು ಮಾಡಿರಿ. ಮನೆಯಲ್ಲಿ ರುದ್ರಾಭಿಷೇಕ ದೇವತಾ ಪಾರಾ ಯಣವನ್ನು ಮಾಡಿರಿ. ಅಂದರೆ ಶಾಂತಿಯುಂಟಾಗಿ ನಿಮ್ಮ ಕೆಲಸಗಳು ಕೈಗೂಡು ವವು. ಮಾನ ಸನ್ಮಾನವು ಲಭಿಸುವುದು. ಉಷ್ಣ ವಿಕಾರದಿಂದ ತೊಂದರೆ, ನಿಮ್ಮ ಕೆಲಸಗಳು ಕೈಗೂಡುವುದಿಲ್ಲ. ಖರ್ಚಿನ ಪ್ರಸಂಗವು. ಭ್ರಾತೃವರ್ಗ ಭಗನಿವರ್ಗ ದವರಿಗೆ ಅನಿಷ್ಟ ಯೋಗವಿರುವುದು. ಮನೆಯಲ್ಲಿ ಯಾರಿಗಾದರೂ, ಕಾಟವುಂಟಾಗಿ ಧನವ್ಯಯವಾಗುವುದು. ಮಾಡುವ ಉದ್ಯೋಗ ವ್ಯವಹಾರಗಳಲ್ಲಿ ತೊಂದರೆ. ಧನದ ಅಡಚಣೆ ತುಂಬಾ ಉಂಟಾಗುವುದು. ಶುಭಕಾರ್ಯಗಳು ನಡೆಯುವವು.

**ವೃಶ್ಚಿಕ;—** ನಿಮ್ಮ ರಾಶಿಯು ಅಗ್ನಿಕಾರಕನಾದ ಮಂಗಳನ ರಾಶಿಯು ಈ ರಾಶಿಗೆ ಅಧಿಪತಿಯಾದ ಸ್ವಾಮಿ, ಲಾಭದಲ್ಲಿ ಕೂತಿರುವನು. ಅವನಿಗೆ ಬಲ ಕೊಡುವ ರವಿಯೂಕೂಡಾ ಸೇರಿರುವನು. ನೀವು ಧೈರ್ಯದಿಂದ ಕೆಲಸ ಮಾಡಿಕೊಳ್ಳು ವಿರಿ. ಯಾಕೆಂದರೆ ಗ್ರಹಗಳ ಬಲ ಚನ್ನಾಗಿದೆ. ವ್ಯಾಪಾರೋದ್ಯೋಗಗಳಿಂದಲೂ, ಸುಖ ದೊರೆಯುವುದು. ಆದಾಯವು ಲಭಿಸುವುದು. ಮಾತೃವರ್ಗದಲ್ಲಿ ಸಾಧಾರಣ ಸುಖವುಂಟಾಗುವುದು. ಬಂಧುವರ್ಗದಲ್ಲಿ ಕಲಹ ನೇತ್ರ ಪೀಡೆಯುಂಟಾಗುವದು. ತನ್ನವರನ್ನು ನಂಬಿ ಕೆಡಬೇಡಿ ಪ್ರಾಪಂಚಿಕ ಮಾನಸಿಕ ಸುಖವು ಕಡಿಮೆಯಾಗಲಾಗದು. ಉದ್ಯೋಗಸ್ಥನಿಗೆ ಅಲ್ಪ ಸುಖ

# ಧರ್ಮರಾಜ್ಯ.

| ಸಂ॥ ೨ | ಮುದೇನೂರು ಶಾ॥ ಶ॥ ೧೮೬೨. ವಿಕ್ರಮಸಂವತ್ಸರದ<br>ಆಶ್ವಯುಜ ಮಾಸಪತ್ರಿಕೆ | ಸಂಚಿಕೆ ೭. |
| --- | --- | --- |

## ಧರ್ಮರಾಜ್ಯಕ್ಕೆ ಸ್ಥಳಕೊಡುವುದೇಕೆ ?

ಬಲ್ಲಸಾಹಿತ್ಯವನುಕಾವ್ಯವ ।
ನೆಲ್ಲಮುಂ ವೇದಾಂತಶಾಸ್ತ್ರದಿ ।
ಬಲ್ಲಿದಂ ಜ್ಯೋತಿಷ್ಯದಲಿ ಬಲುಜಾಣನೆನಿಸಿಹನೂ ॥
ಬಲ್ಲನಾಯುರ್ವೇದಮರ್ಮವ ।
ಬಲ್ಲ ನಿತಿಹಾಸಗಳಶೋಧವ ।
ಸೊಲ್ಲಿಸಲಿಕಳವಲ್ಲವಾಗೀಶ್ವರನಬಿಜ್ಞಗಳಾ ॥ ೧ ॥

ನೀತಿಶಾಸ್ತ್ರವನರಿತುಬಲುಸಂ ।
ಪ್ರೀತಿಯಿಂದಲಿನಡೆಮುತೋರುತ ।
ಜಾತಿಸೂತ್ರದಿನುರಿತುಜನರೋಳ್ಕೈರೆತುಬೀರುವನೂ ॥
ಮಾತುಮಾ.ಲಿಧರ್ಮಮಾರ್ಗವ ।
ರೀತಿಯನುತೆರೆದಿಡುವಜಗದೊಳ ।
ಗೀತಗೆಣೆಯಾರಿಹರೊಕಾಣೆನುಸಟೆಯಿದಲ್ಲವಲಾ ॥ ೨ ॥

ಅರಿತಿಹನು ಕರ್ಣಾಟಹಿಂದಿಯ ।
ನರಿತಿಹನುಸಂಸ್ಕೃತವನುರ್ದುವ ।
ನರಿತಿಹನುತದ್ಭಾಷಶಾಸ್ತ್ರಗಳೆಲ್ಲವನುಬಿಡದೇ ॥
ಅರಿತಿಹನುನಿಜಮಾಡುದೆಲ್ಲವ ।
ಅರಿಯನ್ನೈದುಮಾರ್ಗನೊಂದಂ ।
ಬರಿಯಪೌರುಷದೊಡನೆಮಲ್ಲಿ[illegible] ॥ ೩ ॥

ತೀರ್ಥನಹುಪಳೆ ಕಾಷ್ಟದೊಳು ಬಲು |
ಪಾರ್ಥನೌವೇದಾಂತ ಶಾಸ್ತ್ರಾದಿ |
ಸಾರ್ಥಕವಲಾಚಾರ್ಯಸಾಹಿತ್ಯದಲಿ ಎಂಬೊಚನಾ ||
ಕೀರ್ತಿಗಳಿಸಿಹ ಕವಿತೆಯೊಳುಸ |
ದ್ವಾರ್ತೆಗಳಿಸಿಹ ನಟನೆಪುಡಿಯಲುಂ |
ಕರ್ತನೆನಿಸಿಹ ಧರ್ಮಬೋಧಕ ಧರ್ಮರಾಜ್ಯಕೇ || ೩ ||

ಕವಿವರ್ರೀತನಪಾದಯುಗಳದಿ |
ಭುವಿವರರಮಣಿಮಯಕಿರೀಟಂ |
ಸವಿಸಯದಿಸೋಗವೆಡೆಪುದನುಕಣ್ಮುಟ್ಟ ಕಾಣುತಲಿ |
ಭುವಿಯೊಳೆಸ್ಪ್ರಿಯುನೆಲೆಯಗಾಣದೆ |
ಹವಣಿಸುತಲೀ ಬಿಜ್ಞನಿಧಿಯುನು |
ಅವಿರತಂ ಶೇವಿಸಲುಸೇರಿದೆಧರ್ಮರಾಜ್ಯವಲಾ || ೪ ||

ಈಶನೊಡೆಶನಗೋಂಡಮಾಸಿಕ |
ಜಾತಪತ್ರಿಕೆಧರ್ಮರಾಜ್ಯವು |
ಸಾತಿಶಯಪುಣ್ಯವನು ಜನ್ಮಾಂತರದಿಗಳಿಸಿಹುದೂ ||
ಆತೆರದಿ ಪುಣ್ಯವನುಗಳಿಸದೋ |
ಡೀತಕೀತನಸಂಗದೊರಕೇ |
ತಾತುರದಮುಗಳಿದುಯೋಜಿಸಿಸರ್ವಸಾತ್ವಿಕರೂ || ೫ ||

ವಂದನಾತ್ಮಕನಾಶ್ರಯ ದಿಶಾಂ |
ಚಂದದಲಿಪೊರಮೊಟ್ಟದುವರಿಂ |
ಇಂದಿನಿಂ ಈ ಧರ್ಮರಾಜ್ಯಕೆ ಠಾಣಕೊಡಲಾಗಿ ||
ಮುಂದೆಬನ್ನಿರಿಸರ್ವಸಜ್ಜನ |
ರೆಂದು ಬಿನ್ನೈಸುತಲಿ ಮುದದಿಂ |
ವಂದಿಸುವೆವಾಗೀಶಗಲ್ಲದೆನಿಮಗುಮನವರತಾ || ೬ ||

ಕವಿ :— ಕೆಸುಬಾಪುರದ ಕೆ. ಕೊಟ್ರಪ್ಪ

ಅಕಾಲ ಭೋಜನವುಂಟಾಗುವುದು. ಶತ್ರುಗಳನ್ನು ಜಯಿಸಲು ಅನುಕೂಲವಾಗಿರು ವುದು. ರಸವಸ್ತು ಕೆಂಪು ವಸ್ತುಗಳಿಂದ ಸುಖವು.

ಧನಸ್ಸು :— ನಿಮ್ಮ ರಾಶಿಯು ಧನಸ್ಸುರಾಶಿಗೆ ಅಧಿಪತಿ ಯಾದ ಗುರು ಮಹರಾಜನು ಪಂಚಮತ್ರಿಕೋಣದಲ್ಲಿ ಆತುಕೊಂಡು ನಿಮ್ಮ ರಾಶಿಯನ್ನು ನೋ ಡುತ್ತಿರುವನು. ನಿಮ್ಮ ರಾಶಿಯಂಥದಾವುದೂ ಇಲ್ಲ. ಒಳ್ಳೇಧೈರ್ಯ ಕೊಡುವ ರಾಶಿಯಾಗಿರುವುದು- ಈ ರಾಶಿಯಲ್ಲಿ ಹುಟ್ಟದನಿಮಗೆ ಯಾತರಭಯ? ನೀವು ಯಾರಿಗೂ ಹೆದರಬೇಕಾಗಿಲ್ಲ. ನೀವು ಮಾಡುವ ಕೆಲಸದಲ್ಲಿ, ಉದ್ಯೋಗ ವ್ಯವ ಹಾರಗಳಲ್ಲಿಜಯ ಯೋಗವಿರುವದು. ಸರಕಾರೀ ಕೆಲಸಗಳಲ್ಲಿ ಅನುಕೂಲತೆ. ಮಾತೃವರ್ಗದಲ್ಲಿ ತೊಂದರೆ ಕಂಡುಬರುವುದು. ಜನರಲ್ಲಿ ಕಲಹ ಯೋಗವಿರು ವುದು. ತನ್ನವರಲ್ಲಿ ಪ್ರೀತಿಯು ಲಭಿಸುವುದು. ಆಪ್ತೇಷ್ಟರಿಂದಲೂ ಅಲ್ಪ ಸುಖ ಯೋಗ ಕಂಡುಬರುವುದು. ಭೂಮೂಲಕ ಲಾಭ ಯೋಗವಿರುವದು. ಪಶುಲಾಭ ವೂ ಪ್ರಯಾಣದಲ್ಲಿ ಸುಖವು. ಮನೆಯಲ್ಲಿ ಶುಭಶೋಭನ ಕೆಲಸಗಳು ನಡೆಯುತ್ತವೆ. ಆದಾಯದಷ್ಟು ಖರ್ಚು ಬರುವುದು. ವಾತ ರೋಗದಿಂದಲೂ, ಪಿತ್ಥ ವಿಕಾರದಿಂದ ಲೂ, ದೇಹಪೀಡೆ ಜರುಗುವುದು.

ಮಕರ — ವಿನೋದವು ಆನಂದವನ್ನುಂಟುಮಾಡುವುದು. ಆನಂದದಿಂ ದಲೇ, ಆರೋಗ್ಯ ಹೆಚ್ಚುವುದು. ಆರೋಗ್ಯವೇ ಭಾಗ್ಯ. ಅನಾರೋಗ್ಯ ವಿದ್ಧವನ ಬಾಳು ಎಷ್ಟು ಭಾಗ್ಯವಿದ್ದರೂ ಅನರ್ಥ. ಅದರಂತೆ ನೀವು ನಿಮ್ಮ ಆರೋಗ್ಯವನ್ನು ಕಾಪಾಡಿಕೊಳ್ಳುವುದು ಮುಖ್ಯ ಕರ್ತವ್ಯ. ಘಟ್ಟಿ ಆಹಾರವನ್ನು ಭುಂಜಿಸುವುದನ್ನು ಬಿಡುವುದು ಒಳ್ಳೇದು. ನೀವು ಮಾಡಿದ ಕೆಲಸದಲ್ಲಿ ತೊಂದರೆಗಳು ಪದೆ ಪದೇ ಬರುವವು. ಬಂದರೂ ಅದನ್ನು ದೂರಮಾಡಲು ನೀವು ಸಮರ್ಥರಿರುವಿರಿ. ಪಿತ ವರ್ಗದಲ್ಲಿ ಸುಖ. ಮಿತ್ರಮಾತೃವರ್ಗ ಸುಖವೆನ್ನಬಹುದು. ಶುಭಕಾರ್ಯದ ಆಲೋಚನೆ ನಡೆಯುವುದು. ವ್ಯಾಪಾರ ಉದ್ಯೋಗಸಂಘಗಳಲ್ಲಿ ಸಾಧಾರಣ ಸುಖವಿರುವುದು. ವಿದ್ಯಾರ್ಥಿ ವಿದ್ಯಾರ್ಥಿನಿಯರಿಗೆ ಅನುಕೂಲವು. ನೌಕರೀ ಕೂಲಿ ಕೆಲಸದವರಿಗೆ ಲಾಭ ಯೋಗವಿರುವುದು. ದಿನಾಲೂ ಖರ್ಚಿನ ಸಂಭವ ಬರುವುದು ಹುಷಾರು.

ಕುಂಭ:— ಯಾವಾಗಲೂ ಸಂಕಟಗಳು ಒಂಟಿಯಾಗಿ ಸಂಭವಿಸುತ್ತಿರಲಿಲ್ಲ. ಆದರೆ ಅವು ತಮ್ಮಂದಿಗೆ ತಮ್ಮ ಆಪ್ತಿಷರ್ವ್ಪಷ್ಟು ಕರೆದುಕೊಂಡು ಬರುವುದು. ದುಡ್ಡಿನ ತೊಂಪರೆಗಳನ್ನು ಹೆಚ್ಚುಮಾಡುವುದಕ್ಕೆ ನಿಮ್ಮ ಎಂಟನೆ ರಾಶಿಯಲ್ಲಿ ಮಂಗಳನು, ರಾಹು ಕಲತುಯಿರುವುದರಿಂದ, ಕಂಟಕ ಜರುಗುವುದು. ಉಷ್ಣ ಪಿತ್ಥದಿಂದ ದೇಹಪೀಡೆ ಜರುಗುತ್ತದೆ, ಪ್ರಾಣಭಯ ಜರುಗುವುದು. ಬಂಧು ಕಲಹ ಯೋಗವಿರುವುದು. ಆಪ್ತ ಜನರಲ್ಲಿ ಸಂಕಟಯೋಗವಿರುವುದು. ದುಡ್ಡು ಕೈಗೆ ಹತ್ತುವದಿಲ್ಲ. ಎಷ್ಟು ದುಡ್ಡು ಬಂದರೂ ನಿರರ್ಥಕವಾಗುವುದು. ಮನೆಯಲ್ಲಿ ಆರೋಗ್ಯಕೆಡುವುದು. ಪತ್ನಿಗೆ ದೇಹಪೀಡೆಯು ಜರುಗುವಯೋಗವಿರುವುದು. ಭೂಮೂಲಕ ಸಾಧಾರಣ ಸುಖವುಟಾಂಗುವುದು. ದೊಡ್ಡ ಶ್ರೀಮಂತಿಕೆ ಜನರಲ್ಲಿ ಕಲಹ ಯೋಗವಿರುವುದು. ವಿದ್ಯಾರ್ಥಿ ವಿದ್ಯಾರ್ಥಿನಿಯರಿಗೆ ನೌಕರಿಯರಿಗೆ ಸಾಧಾರಣ ಸುಖ ಯೋಗವಿರುವುದು.

ಮೀನ:— ನಿಮ್ಮ ರಾಸಿಯಲ್ಲಿ ಕೇತು ವಾಸವಾಗಿ ಸಪ್ತಮದಲ್ಲಿ ಮಂಗಳನು ಇರುವುದರಿಂದ ದೇಹಪೀಡೆ ಜರಗುವುದು. ಪ್ರಾಣಭಯವು, ಅಗ್ನಿಭಯವು, ವಿಷಮ ಜ್ವರಪೀಡೆಯು, ಅಕಾಲಭೋಜನವು, ಕಳತ್ರವರ್ಗಕ್ಕೆ ತೊಂದರೆಯು, ಸ್ತ್ರೀಮೂಲಕ ಕಲಹವು, ಆದರಲ್ಲಿ ತೊಂದರೆಯು ಪ್ರಯಾಣದಲ್ಲಿ ಚೋರಭಯವು, ಅಕಸ್ಮಾತ್ ಎತ್ತರ ಸ್ಥಳದಿಂದ ಬೀಳುವಿಕೆಯು. ಕುಸುಮಶೂಲೆಯು, ಗ್ರಹಪೀಡೆಯು, ಅಧಿಕ ಕಷ್ಟವು. ಗುರು ಬಲವಂತನಾಗಿರುವುದರಿಂದ, ಶುಭಕಾರ್ಯಗಳು, ವ್ಯಾಪಾರದಿಂದ ಧನಲಾಭವು, ಕಾರ್ಯದಲ್ಲಿ ಜಯವು, ಆದಾಯ ವ್ಯಯ ಸಮವು, ವಿದ್ಯಾರ್ಥಿ ವಿದ್ಯಾರ್ಥಿನಿಯರಿಗೆ ಅನುಕೂಲವು ಕಂಡುಬರುವದು. ಸರಕಾರಿ ನೌಕರರಿಗೆ ಲಾಭ ಯೋಗ ಉಂಟಾಗುವವು.

## ಅಶ್ವಯುಜ ಮಾಸದ ಭವಿಷ್ಯ.

ಶುಕ್ರನು ಮಘ ಪಂಚಕದಲ್ಲಿ ಸಂಚಾರ ಮಾಡುವುದರಿಂದ ಮಳೆಯು ಕೆಲವು ಕಡೆ ಸುವೃಷ್ಟಿ, ಕೆಲವುಕಡೆ ಸಾಧಾರಣ ... ದಲ್ಲಿ ಸಾಂ

ಕಾಮ್ರಿಕ ರೋಗಗಳು ಪ್ರಸಾರವಾಗುವವು. ಜನರಲ್ಲಿ ಆನಂದವು ಲಭಿಸುವುದು. ವ್ಯಾಪಾರ ಉದ್ಯೋಗಗಳು ಸಾಧಾರಣ ನಡೆಯುವವು.

## ಸಂಪೂರ್ಣ ಜಾತಕ.

ಜಾತಕವನ್ನು ಬರೆಯಿಸತಕ್ಕವರು, ನಿಮ್ಮ ಮಕ್ಕಳ, ಜನನ ಟಿಪ್ಪಣಿಯನ್ನು ಸರಿಯಾಗಿ ಬರೆದು ಕಳುಹಿಸಿದರೆ, ನಾವು ಲಗ್ನವನ್ನು ಶೋಧಿಸಿ ಲಗ್ನ, ಅಂಶ, ಭಾವ ಅಷ್ಟಕವರ್ಗ, ಆಯುರ್ದಾಯ ಧನ, ಪುತ್ರ ಮಿತ್ರ ಕಳತ್ರ, ಭೋಗಯೋಗ. ವಿದ್ಯಾಯೋಗ ವ್ಯಾಪಾರಯೋಗ ಪ್ರತಿವರ್ಷದಲ್ಲಿ ಜರುಗುವ ಶುಭಅಶುಭ ಫಲಗಳನ್ನು ಮಗ ಹುಟ್ಟಿದ ಎಷ್ಟುವರ್ಷದಲ್ಲಿ ತಂದೆಗೆ ಸುಖವಿದೆ ಎಂಬುದನ್ನು ಆಯುಷ್ಯ ನಿರ್ಣಯ ಶೋಧಿಸಿ ಲಗ್ನ ಯೋಗ ಇತ್ಯಾದಿ ಯೋಗವನ್ನು ಬಹು ಚನ್ನಾಗಿ ತಿಳಿಯುವಂತೆ ಬರೆಯುತ್ತೇವೆ.

ಸಂಪೂರ್ಣ ಜಾತಕಕ್ಕೆ ೧೦—೦—೦

ಸ್ಥೂಲರೀತಿ ೫—೦—೦

ಹೆಚ್. ಎಂ. ಶಿವರುದ್ರಶಾಸ್ತ್ರಿ,
ಹಿರೇಮ್ಯಾಗಳಗೇರಿ ಹರಪನಹಳ್ಳಿತಾಲೂಕು, ತೆಲಿಗಿ ಪೋ.

ಶ್ರೀ ಜಗದ್ಗುರುಭ್ಯೋ ನಮಃ

## ಶ್ರೀ ರುದ್ರಾಭಿಷೇಕ ಮಹಾಪೂಜಾ ಫಲವಿಚಾರ.



ಲೇಖಕ:— ವೇ॥ ಪಂಡಿತ ವಿರೂಪಾಕ್ಷಶಾಸ್ತ್ರಿಗಳು,
ಪುರಾಣಿಕಮಠ, ಹಿರೇಹಡಗಲಿ,
( ಬಳ್ಳಾರಿ ಡಿ॥ )

ಶ್ರೀಮತ್ಪರಶಿವನ ಲೀಲಾನಾಟಕ, ರಂಗಸ್ಥಲವಾದ, ಈ ಜಗತ್ತಿನಲ್ಲಿರುವ ಸಮಸ್ತ ಜನನ ಪ್ರಾಣಿಗಳ ಉದ್ಧಾರಕ್ಕಾಗಿ ನಿರ್ಮಿಸಲ್ಪಟ್ಟ ವೇದಾಗಮ ಪುರಾಣ

ಧರ್ಮ ಗ್ರಂಥಗಳಲ್ಲಿ, ಅನೇಕ ವಿಧವಾದ ಸಪ್ಪ್ರತ ನಿಯಮಗಳೂ, ನಿತ್ಯ-ನೈಮಿತ್ತಿಕ ಪೂಜಾದಿಗಳೂ, ಉಲ್ಲೇಖಸಿರುವದು, ಸುಪ್ರಸಿದ್ಧನಾಗಿದೆ. ಅಂತಹ ಧರ್ಮ ಶಾಸ್ತ್ರದ, ನಿಯಮ (ರೂಲ್ಸು) ಗಳಂತೆ ಮಾನವರು, ಆನುಷ್ಠಾನಗೈದು ಇಹಪರ ಗಳಲ್ಲಿ, ಸುಖಸಂಪದಗಳನ್ನು ಅನುಭವಿಸವುದು' ಮುಖ್ಯಕರ್ತವ್ಯವು. ಮತ್ತು ಪರಮಾತ್ಮನು ನಮಗೆ ಕೊಟ್ಟಿರುವಂಥ ದೇಹ, ಬುದ್ಧಿ, ಶಕ್ತಿ-ಯುಕ್ತಿ, ಸಾಹಸ ಗಳನ್ನೂ, ಧನ ಕನಕ ಆಯುಷ್ಯಾದಿಗಳನ್ನೂ, ಸತ್ಕಾರ್ಯಗಳಲ್ಲಿ ವಿನಿಯೋಗ ಮಾಡಿದ್ದಾರೆ, ಸತ್ಫಲಗಳೇ ದೊರೆಯುವವು ದುಷ್ಕಾರ್ಯಗಳಲ್ಲಿ ಉಪಯೋಗಿಸಿ ದರೆ, ದುಷ್ಫಲಗಳನ್ನೂ, ಅನಂತ ವಿಧವಾದ ಕಷ್ಟ-ನಷ್ಟಗಳನ್ನೂ, ಅನುಭವಿಸ ಬೇಕಾಗುವದು.

ಆದರೆ "ಅಭಿಷೇಕಪ್ರಿಯಶಿವಃ" ಎಂಬಂತೆ ಪರಶಿವನು ಸಂತುಷ್ಟನಾಗಬೇಕಾ ದರೆ ಅಭಿಷೇಕವೇ ಒಂದು ದೊಡ್ಡ ಸಾಧನವೆಂದು ಹೇಳಬಹುದು' ಆದ್ದರಿಂದಲೇ ಪೂರ್ವದಲ್ಲಿ ಅನೇಕ ದೇವತೆಗಳೂ, ಮಹರ್ಷಿಗಳೂ, ಮಹಾರಾಜಾಧಿರಾಜರೂ, ಆ ಪರಶಿವನಿಗೆ ಮಹಾಭಿಷೇಕದಿಂದ ಸಂತುಷ್ಟಪಡಿಸಿಯೇ ತಮ್ಮ ತಮ್ಮ ಇಷ್ಟಾರ್ಥ ಗಳನ್ನು, ಪಡೆದು ಧನ್ಯರಾದರೆಂಬುವದು ಶಾಸ್ತ್ರಪ್ರಸಿದ್ಧವಿದೆ. ಅಂದಮೇಲೆ ದುಃಖ ಮಯವಾದ ಸಂಸಾರ ಸಾಗರದಲ್ಲಿ ಪ್ರತಿಯೊಬ್ಬನೂ, ತನಗೆ ಪ್ರಾಪ್ತವಾಗುವ ತಾಪ ಲೋಪಗಳನ್ನು ದೂರಮಾಡಿಕೊಂಡು ಸುಖಹೊಂದಬೇಕಾದರೆ ಶ್ರೀ ಪರಶಿವ ಮೂರ್ತಿಯನ್ನು ಅಭಿಷೇಕದಿಂದ ಸಂತೈಸುವದು ಅತ್ಯಂತ ಯುಕ್ತವಾದದ್ದು.

ಅಭಿಷೇಕ ಮಾಡಬೇಕಾದರೆ ಜಲಾಭಿಷೇಕ, ಕ್ಷೀರಾಭಿಷೇಕ, ಘೃತಾಭಿಷೇಕ, ರಸಾಭಿಷೇಕವೆಂದು ಅನೇಕ ಪ್ರಕಾರಗಳುಂಟು. ಆದರೆ ಯಾವ ಅಭಿಷೇಕ ವನ್ನು ಮಾಡಿದರೂ, "ಶ್ರೀ ರುದ್ರಾಧ್ಯಾಯ" ವನ್ನು ಪಠಿಸುತ್ತಾ ಅಭಿಷೇಕ ಮಾಡಬೇಕು, ಅಂದರೆ ಶಾಸ್ತ್ರೋಕ್ತದಿಂದ ಮಹಾಪೂಜಾ ಮಾಡಿದುದಲ್ಲದೆ ಮಾಡಿ ಸಿದವರಿಗೂ, ಅಧಿಕವಾದ ಫಲಪ್ರಾಪ್ತಿಯಾಗುವದು. "ಶ್ರೀ ರುದ್ರಾಧ್ಯಾಯ ವನ್ನು" ಪಠಿಸುವ ಕ್ರಮವಾದರೂ, ಅನೇಕ ವಿಧಉಂಟು ಒಂದು ನಮಕ, ಒಂದು ಚಮಕವನ್ನು ಹೇಳಿದರೆ ಅದಕ್ಕೆ ಒಂದು "ರುದ್ರಿ" ಎಂದು ಹೆಸರು ಒಂದು ನಮಕ ಚಮಕದಂತೆ ಹನ್ನೊಂದು ಸಾರೆ, ಹೇಳಿದರೆ ಅದಕ್ಕೆ ಒಂದು "ಲಘುರುದ್ರ" ಎಂದು

ಹೆಸರು ಇದರಂತೆ (೧೧) ಲಘು ರುದ್ರಗಳಾದರೆ ಅದಕ್ಕೆ "ಮಹಾರುದ್ರ" ವೆಂದು ಹೆಸರು ಪುನಃ ಇದರಂತೆ (೧೧) ಮಹಾರುದ್ರಗಳಾದರೆ " ಅತಿರುದ್ರ " ವೆಂದೆನಿಸು ವದು, ಇವುಗಳಿಗೆ ಫಲಗಳಾದರೂ ಭಿನ್ನ ಭಿನ್ನವಾಗಿದ್ದು ಒಂದಕ್ಕಿಂತಲೂ ಒಂದರ ಫಲವು ಅಧಿಕಾಧಿಕವಾಗಿ ಪ್ರಾಪ್ತವಾಗುವದು.

ಈ ರುದ್ರಾಧ್ಯಾಯನವನ್ನು ಕುರಿತು ವೇದಾಗಮೋಪನಿಷತ್ಪುರಾಣ, ಸ್ಮೃತಿ ಮುಂತಾದವುಗಳು ಬಹಳವಾಗಿ ಪ್ರಶಂಸೆಮಾಡಿರುತ್ತವೆ. ಇಲ್ಲಿ ಅವುಗಳನ್ನು ವಿವರಿ ಸಲಾಗುವದು. ( ಜಾಬಾಲೋಪನಿಷತ್ತಿನಲ್ಲಿ ) " ಅಥ ಹೈನಂ ಬ್ರಹ್ಮಚಾರಿಣಃ ಊಚುಃ-ಕಿಂಜಪ್ಯೇನಾಮೃತತ್ವ ಮಶ್ನುತೇ ಬ್ರೂಹೀತಿ ಸಹೋವಾಚಯಾಜ್ಞವಲ್ಕ್ಯಃ ಶತರುದ್ರೀಯೇಣೇ ಅಂದರೆ ಯಾವುದನ್ನು ಜಪಿಸುವುದರಿಂದ ಅಮೃತತ್ವ ರೂಪ ವಾದ ಮೋಕ್ಷವು ಲಭಿಸುತ್ತದೆಂದು ಬ್ರಹ್ಮಚಾರಿಗಳು ಯಾಜ್ಞವಲ್ಕ್ಯರನ್ನು ಕೇಳಲು ಅವಕ್ಕೆ ಯಾಜ್ಞವಲ್ಕ್ಯರು "ಶತರುದ್ರೀ" ಯನ್ನು ಜಪಮಾಡೋಣದರಿಂದ ಎಂದು ಉತ್ತರವನ್ನಿತ್ತರು.

(ಕೈವಲ್ಯೋಪನಿಷತ್ತಿನಲ್ಲಿ) ಯಃ ಶತರುದ್ರೀಯಮಧೀತೇಸೋಗ್ನಿಪೂತೋಭವತಿ ಸ್ವರ್ಣಸ್ತೇಯಾತ್ಪೂತೋಭವತಿಸುರಾಪಾನ ಬ್ರಹ್ಮಹತ್ಯಾ ಕೃತ್ಯಾಕೃತ್ಯಾತ್ಪೂತೋಭವತಿ ತಸ್ಮಾದವಿಮುಕ್ತಮಾಶ್ರಿತೋಭವತಿ, ಅತ್ಯಾಶ್ರಮೀಸರ್ವದಾ, ಸಕೃದ್ವಾಜಗೇದನೇನ, ಜ್ಞಾನಮಾಪ್ನೋತಿ, ಸಂಸಾರಾರ್ಣವನಾಶನಂ. ತಸ್ಮಾದೇವಂವಿದಿತ್ವೈನಂ, ಕೈವಲ್ಯಂ ಫಲಮಶ್ನುತೆ, ಕೈವಲ್ಯಂಫಲಮಶ್ನುತೆ, ( ಅಂದರೆ ಯಾವನು ಶ್ರೀ ರುದ್ರಾಧ್ಯಾಯ ವನ್ನು ಪಠಿಸುತ್ತಾನೋ ಆವನು ಅಗ್ನಿಪೂತನಾಗುವನಲ್ಲದೆ, ಸ್ವರ್ಣಸ್ತೇಯ, ಸುರಾ ಪಾನ, ಬ್ರಹ್ಮಹತ್ಯಾ ಕೃತ್ಯಾಕೃತ್ಯಗಳಿಂದಲೂ, ಮಹಾಪಾಪಗಳಿಂದಲೂ, ಬಿಡಲ್ಪಟ್ಟ ವನಾಗಿ, ಪುನರ್ಜನ್ಮ ರಹಿತನಾಗುವನು. ಇತ್ಯಾದಿ (ಶಾತಾತಪಸ್ಮೃತಿಯ) ಸ್ತೇ ಯಂಕೃತ್ವಾ ಗುರುದಾರಾಂಶ್ಚಗತ್ವಾ, ಮದ್ಯಂಪೀತ್ವಾ, ಬ್ರಹ್ಮಹತ್ಯಾಂಚ ಕೃತ್ವಾ, ಭಸ್ಮ ಛನ್ನೋ ಭಸ್ಮಶಯ್ಯಾಶಯನೋ ರುದ್ರಾಧ್ಯಾಯೀ ಮುಚ್ಯತೇ ಸರ್ವಪಾಪೈಃ॥ ಅಂದರೆ ಚೋರತನ ಗುರುಪತ್ನೀಗಮನ ಮದ್ಯಪಾನ ಬ್ರಹ್ಮಹತ್ಯಾದಿ ಮಹಾಪಾತಕ ಗಳನ್ನು ಮಾಡಿದವನಾದರೂ, ಭಸ್ಮಲೇಪಿತ ಶರೀರವುಳ್ಳವನಾಗಿ ಭಸ್ಮಶಯ್ಯೆಯಲ್ಲಿ ಮಲಗುವಂಥವನಾಗಿ ಶ್ರೀ ರುದ್ರಾಧ್ಯಾಯುವನ್ನು ಜ ಪಿ ಸು ತ್ತಾ ನೆ ಯೋ ಅವನು ಸಮಸ್ತ ಪಾಪಗಳಿಂದ ಬಿಡಲ್ಪಟ್ಟು ಮುಕ್ತಿಯನ್ನು ಹೊಂದುವನು.

( ಯಾಜ್ಞವಲ್ಕ್ಯಸ್ಮೃತಿಯಲ್ಲಿ ) ಸುರಾಪ ಸ್ವರ್ಣಹಾರೀಚ । ರುದ್ರಜಾಪೀ ಜಲೇಸ್ಥಿತಃ ॥ ಸಹಸ್ರಶೀರ್ಷಾಜಾಪೀಚ । ಮುಚ್ಯತೆನಾತ್ರಸಂಶಯಃ ॥ ೧ ॥
(ಶಿವಗೀತೆಯಲ್ಲಿ ) ಯಸ್ತುರುದ್ರಂಜಪೇನ್ನಿತ್ಯಂ । ಚಿಂತಯೇನ್ಮಾಮನನ್ಯಧೀಃ॥ ಸತೇನೈವಚ ದೇಹೇನ । ಶಿವಃಸಂಜಾಯತೇಸ್ಫುಟಂ ॥೭॥

ಜಪದ್ಯೋರುದ್ರ ಸೂಕ್ತಾನಿ (ತದಾರಾಭ್ಯ) ತತಃಪರತರೋಭಕ್ತೋ ಮಮಲೋಕೇನವಿದ್ಯತೇ ॥

(ವಾಯುಪುರಾಣದಲ್ಲಿ) ಯಶ್ಚರುದ್ರಾನ್ ಜಪೇನ್ನಿತ್ಯಂ । ಧ್ಯಾಯಮಾನೋ ಮಹೇಶ್ವರಂ ॥ (ಇತ್ಯಾರಭ್ಯ) ಅಹಂಚಪರಮೇಶಸ್ಯ ಸಾಮಿಪ್ಯಂಲಬ್ಧವಾಂಸ್ತದಾ॥ (ಸ್ಕಾಂದಸಂಹಿತಾ ಯಜ್ಞವೈಭವ ಕಾಂಡದ ದ್ವಿತೀಯಾಧ್ಯಾಯದಲ್ಲಿ)

ಗೃಹಸ್ಥೈಶ್ಚ ವನಸ್ಥೈಶ್ಚ। ತದನ್ಯೈರ್ಬ್ರಹ್ಮಚಾರಿಭಿಃ। ಶತರುದ್ರೀಯಸಂಜ್ಞಸ್ತುಮಂತ್ರೋಜಪ್ಯೋಮಹತ್ತರಃ ॥೧॥ ಶ್ರೀರುದ್ರಜಾಪೀಮುಚ್ಯೇತ । ಮಹಾಪಾತಕಪಂಜರಾತ್ ॥ ಸಮ್ಯಜ್ಞಾನಂಚ ಲಭತೇ । ತೇನ ಮುಚ್ಯೇತ ಬಂಧನಾತ್ ॥೨॥ ಅನೇನ ಸದೃಶಂಜಪ್ಯಂ । ನಾಸ್ತಿ ನಾಸ್ತಿ ಶೃತೌ ಸ್ಮೃತೌ ॥ ಇತ್ಯಾದಿ.

(ಬ್ರಹ್ಮೋತ್ತರಕಾಂಡದಲ್ಲಿ) ಶಿವಾತ್ಮಕಂ ಪರಂ ತತ್ವಂ । ರುದ್ರಾಧ್ಯಾಯೇ ಪ್ರತಿಷ್ಠಿತಂ । ರುದ್ರಾಧ್ಯಾಯಂತತಃಪುಂಸಾಂ । ಸ್ಮೃತಂಕೈವಲ್ಯಸಾಧನಂ ॥೧॥ ಯೇ ಮಹಾಪಾತಕೈರ್ಯುಕ್ತಾ । ಉಪಪಾತಕಿನಶ್ಚ ಯೇ ॥ ರುದ್ರಾಧ್ಯಾಯಜಪಾತ್ಸದ್ಯ। ಸ್ತೇಪಿಯಾಂತಿ ಪರಾಂಗತಿಂ ॥೨॥ ಪೂರ್ವಜನ್ಮಕೃತೈಃ ಪಾಪೈಃ ಜಾಯಂತೇ ಲ್ಪಾಯಷೋನರಾಃ ॥ ತಾನಿ ಪಾಪಾನಿ ನಶ್ಯಂತಿ। ರುದ್ರಜಾಪ್ಯವತಾಂ ನೃಣಾಂ ॥೩॥ ಕ್ಷೀಣೇಷು ಸರ್ವಪಾಪೇಷು । ದೀರ್ಘಮಾಯುರ್ಬಲಂ ಯಶಃ । ಆರೋಗ್ಯಂಜ್ಞಾನಮೈಶರ್ಯಂ । ವರ್ಧತೆಸರ್ವ ದೇಹಿನಾಂ ॥೪॥ ಇತ್ಯಾದಿ

ಈ ಪ್ರಕಾರ ಸಕಲ ಶಾಸ್ತ್ರಾಗಮಸಂಮತವಾದ ಶ್ರೀ ರುದ್ರಾಧ್ಯಾಯಪೂರ್ವಕ ಮಹಾಭಿಷೇಕ ವ್ರತವು ಅತ್ಯಂತ ಶ್ರೇಷ್ಠವಾದದ್ದೂ ಸತ್ಫಲದಾಯಕವಾದದ್ದೂ ಆಗಿರುವದರಿಂದ ಪ್ರತಿಯೊಬ್ಬನೂ, ಸೋಮವಾರ, ಶ್ರಾವಣಮಾಸ, ನವರಾತ್ರಿ ಶಿವರಾತ್ರಿ, ಪ್ರದೋಷಕಾಲ, ಸರ್ವಕಾಲಗಳಲ್ಲಿಯೂ, ಶಾಂತಿಕಾರ್ಯಗಳಲ್ಲಿಯೂ, ತ್ರಿಕರಣಶುದ್ಧವಾದ ಭಕ್ತಿಯಿಂದ ಸದಾಚಾರ ಸಂಪನ್ನರೂ, ಜಿತೇಂದ್ರಿಯರೂ, ಶಿವತತ್ವಜ್ಞರೂ, ಶಾಂತಿಯುತರೂ, ಆದಂಥ ಸದ್ಗುರುಗಳ ಸನ್ನಿಧಿಯಲ್ಲಿ ಪಂಡಿತರಿಂದ ಸಕ್ರಮವಾಗಿ ಈ ಶ್ರೀರುದ್ರಾಭಿಷೇಕ ಮಹಾಪೂಜೆಯನ್ನು ನೆರವೇರಿಸಿ ಇಹಪರ ಸುಖಭಾಜನರಾಗಬೇಕೆಂದು ಬಯಸುತ್ತೇನೆ.

ಸರ್ವೇಜನಾಃಸುಖಿನೋಭವಂತು.

( ಹಿಂದಿನ ಸಂಚಿಕೆಯಿಂದ ಮುಂದುವರಿದುದು. )

ಇಚ್ಛೆಯನ್ನು ತೊರೆದವನೂ, ವಚನದಲ್ಲಿ ಶಾಂತಿ, ಮನದಲ್ಲಿ ಪ್ರಣವಧ್ಯಾನ, ಮುಖದಲ್ಲಿ ಶಿವಮಂತ್ರಪಠನ, ಮಸ್ತಕಾದಿಸ್ಥಾನಗಳಲ್ಲಿ ಶಿವಲಿಂಗಧಾರಣ, ನುಡಿಯಲ್ಲಿ ಸತ್ಯ, ನಡೆ ನುಡಿವ ಕೊಡು-ಕೊಂಬುವ ಎಲ್ಲೆಡೆಯಲ್ಲಿಯೂ, ಲಿಂಗಮಯದೃಷ್ಟಿಯ ಮಾತ್ಸರ್ಯಗಳನ್ನು ತ್ಯಾಗಮಾಡಿದ ತನುತ್ರಯ, ಷಡ್ಲಿಂಗಾಂಗಗಳ ಷಟ್‌ಸ್ಥಲಗಳ ಪಂಚಚಕ್ರಗಳ ನಿಮರ್ಶಾತ್ಮಕಬುದ್ಧಿ, ಜ್ಞಾನ ಸರ್ವಾಂಗವಾಗಿ ಇಂದ್ರಿಯಗಳನ್ನೆಲ್ಲ ತಿಳಿದು-ತಿಳಿದು, ಸಕಲಕರ್ಮಗಳೆಂಬ ಮಾಯಾ ಪ್ರಪಂಚದ ಬಂಧನವ ಹರಿದು ವಿಷಯದ ದಂದುಗವ ಹೋಗಲಾಡಿಸುವುದರಲ್ಲಿ ಸಾಮರ್ಥ್ಯ ಇತ್ಯಾದಿ ಸಮಸ್ತ ಸದ್ಗುಣಸಂಪನ್ನನಾದ ಶ್ರೀಗುರುವನ್ನು ಹುಡುಕಿಕೊಂಡುಹೋಗಿ ಆಗುರುವಿಗೆ ದಂಡಪ್ರಣಾಮವನ್ನು ಮಾಡಿ ಪ್ರಾರ್ಥಿಸಲು ಶ್ರೀ ಗುರುವು ಆತನ ಆದಿಯಕೇಳಿ ಪೂರ್ವಜಾತದ ಭವಂಗಳನಳಿದು ಪುನರ್ಜಾತನ ಮಾಡಿದ ಪರಿಯೆಂತೆಂದರೆ:—

ಅಷ್ಟದಳದ ನವ ಬ್ರಹ್ಮಪುರದೊಳಗೆ ಪೃಥ್ವಿಚಕ್ರದ ನಾಲ್ಕುಚಕ್ರ ನಾಲ್ಕುದಳದ ಪೂರ್ವದಳದ ಬ್ರಹ್ಮನ ಉತ್ಪತ್ತಿಯಂ ಕೆಡಿಸಿ ಉರುಪಿಯ ಕಾರುಣ್ಯವನ್ನು ತೊಗೆದು ಕುಂಬಕ ದಳದ ವಿಷ್ಣುವಿನ ಮೂಲವನಾಶಮಾಡಿದರೆ: ಶಕದಳದ ಮಹೇಶ್ವರನಲಯವನಳಿದುಬಂದು ತ್ರಾಟಕಾಸ್ತರದಳದ ತಪವನಂಗಗೊಂಡು ಪರಶಿವ ಶಂಕರನ ಲಿಂಗಧ್ಯಾನದಲ್ಲಿ ಸರ್ವಾಂಗವನೆಲ್ಲ ಲಿಂಗಸಾಹಿತ್ಯವಮಾಡಿ ಆ ಲಿಂಗವೇ ಅಂಗ, ಅಂಗವೇ ಲಿಂಗ, ಎಂದು ಆ ಲಿಂಗಧ್ಯಾನದಲ್ಲಿ ಮನವ ನೆಲಗೊಳಿಸಿ ನಿರ್ದೇಹಿ ನಿರುಪಾದಿಕನಾಗಿ ಅಷ್ಟಮದಳಗಳ ಸುಟ್ಟು ಸಂಸಾರ ಪ್ರಪಂಚದ ಕಂಟಕಗಳ ನೀಗಿ ಆಶಾಪಾಶ ವೆಂಬ ಗ್ರಹವ ದಹನಮಾಡಿ ಪ್ರಣವ ವೆಂಬ ಶಿವಧ್ಯಾನದಿಂದ ಹೊನ್ನು, ಹೆಣ್ಣು ಮಣ್ಣೆಂಬ ... ವೆಂಬ ... ಸುಟ್ಟು ... ಚಕ್ರದ ... ವನ್ನು ...



ಕೊಳ್ಳವನ್ನು ಮುಕ್ತಿವೆಂಬ ... ವನ್ನು ...

ಕ್ಕೈತ್ತಿ ಭಕ್ತಿ ಎಂಬ ಪಿಂಡವನ್ನು ಧರಿಸಿ ಕ್ಷಮೆಯನ್ನು ಅಲಂಕಾರಮಾಡಿಕೊಂಡು ಆಚಾರ ಲಿಂಗವನ್ನು ಕಂಡು ಕುಚಿತ್ತವಳಿದು ಸುಚಿತ್ತನೆಲೆಗೊಂಡ ಹಸ್ತದಿಂದ ಪೂಜೆ ಮಾಡಿ ಪ್ರಾಣಮುಖದಿಂದ ಬಂದ ಗಂಧವ ಲಿಂಗಕ್ಕೆ ನೈವೇದ್ಯ ಮಾಡಿ ಭೇದಾಭೇದ ದಿಂದ ಪ್ರಣವ ಮೂಲವನ್ನು ತಿಳಿದು ನಾಸದ ಕೊನೆಮೊನೆಯ ಮೇಲಿನ ಬೆಳಗನೋಡಿ ಬೆರಗಾಗಿ ಪ್ರತಿಬಿಂಬ ಛಾಯೆಯಿಂದ ಲಿಂಗ ಚಕ್ರವನ್ನು ಕಂಡು ಅಲ್ಲಿದ್ದ ಷಡಾಕ್ಷರ ವೇಷಷ್ಠಳವಾದ ಮಹೇಶ್ವರನ ಅಪ್ಪುವಿನ ಉದ್ರೇಕವನ್ನು ನಿಲ್ಲಿಸಿ ನೇತ್ರದ ಆಲಿಯ ನಿಲ್ಲಿಸಿದರೆ ಸುಳಿದು ಸೂಸುವ ಗಾಳಿನಿಲ್ಲುವುದು. ಪವನದ ಊರ್ಧ್ವಗರೆಯಿಂದ ಬಿಂದು ನಿಲ್ಲುವಡೆ ಜಿಹ್ವೆಯ ಚಲನೆನಿಲ್ಲುವುದು ನಿಂದಾ ಗುರುಲಿಂಗದ ಕುಬುದ್ಧಿಯಿಳಿದು ಸುಬುದ್ಧಿನೆಲೆಗೊಳಿಸಿ ಜಿಹ್ವೆಯ ಮುಖದ ರಸದ್ರವ್ಯದಿಂದ ಆಲಿಂಗಕ್ಕೆನೈವೇದ್ಯವನ್ನು ಮಾಡಿ ಷಡ್ವರ್ಗ ಷಡೂರ್ಮಿಷಡ್ಭ್ರಮೆ ಷಡ್ ವಿಕಾರಗಳೆಂಬ ಕರಣಾದಿ ಗುಣಗಳ ನಿಯುವರಸಿ ನಾಭಿಚಕ್ರದ ಕುಂಡಲಿಯ ನಂಡಲಿದು ಹತ್ತು ಮುಖದಲ್ಲಿ ಹರಿವಾಯು ಗಳೆಂಬ ಫಣಿಯನೊಂದುಮಾಡಿ ಕಾಮನ ಸುಟ್ಟು ಬಹು ಭ್ರಮೆಗಳ ಮರೆದು ತೇಜೋ ದ್ರೇಕವನಿಲ್ಲಿಸಿ ಶಿವಲಿಂಗವ ಹಸ್ತದಲ್ಲಿ ಪೂಜಿಸಿ ನೇತ್ರ ಮುಖದಿಂದ ಕರ್ಪೂರವುಂಡ ಉರಿಯ ನೈವೇದ್ಯವ ಲಿಂಗಕೆ ಸಮರ್ಪಿಸಿ ಪಶ್ಚಿಮದ್ವಾರ ತೆರವುಮಾಡಿದ ಶ್ರೋತ್ರೇಂದ್ರಿಯವ ದಹನಮಾಡಿ ವಾಯುಚಕ್ರದ ಪ್ರಾಣಲಿಂಗವನ್ನು ಕಂಡು ಕುಮನವಳಿದು ಸುಹಸ್ತ ದಿಂದ ಪೂಜಿಸಿ ತನು, ಗುರು, ಮನ,ಲಿಂಗ ಧನಜಂಗಮ ಇಂತು ಈ ಮೂರು ಮೂರ್ತಿ ಗಳಿಗೆ ಮೂರುವಸ್ತುಗಳನ್ನು ಕೊಟ್ಟು ಆ ಕುಂಚವಗ್ಗೈದು ನೆಟ್ಟನೆ ಬಿಟ್ಟುಕಣ್ಣುಬಿಗಿದು ದುವ್ರಬಂಧಉಡ್ಯಾಣಬಂಧ ಎಂಬೀ ಆಸನಗಳ ರಚಿಸಿ ಅಂಧಕನು ಮೂರು ಲೋಕವ ನುಂಗಿಹುದ ಕಂಡು ಕಾಲಿಲ್ಲದೆ ಹೆಳವನು ನಡೆಮುದ ಹೋಗಿ ಹದಿನಾಲ್ಕು ಲೋಕ ಗಳನ್ನು ಕಿತ್ತು ಎತ್ತಿ ಮುಂಗೈಮೇಲಿಟ್ಟಿಹನ್ನು ಕಂಡೆಕೈಯಿಲ್ಲದ ಮೋಟನು ಕಮಲವ ಹಿಡಿದು ತನ್ನ ಪ್ರಾಣಲಿಂಗಕ್ಕೆ ಮಜ್ಜನಕ್ಕೆರೆಯುವನ್ನು ಕಂಡೆ ಎಂದು ಶಿಷ್ಯನು ಆನಂದಿ ಸುತ್ತಿರಬೇಕು. ಇದುವೇ ಗುರುವು ಶಿಷ್ಯನನ್ನು ಉದ್ಧರಿಸುವ ಕ್ರಮವು.

ಪ್ರಶ್ನೆ:— ಅಂಧಕ ಮೂರುಲೋಕವ ನುಂಗಿಮುದಕಂಡೆ, ಮುಂತಾದ ವಾಕ್ಯಗಳ ಸ್ಪಷ್ಟಾರ್ಥವೇನು ?

ಉತ್ತರ:—

ಇಲ್ಲಿ ಅಂಧಕನೆಂದರೆ ವಾಯು, ಹೆಳವನೆಂದರೆ ಮನವು, ಮೋಟನೆಂದರೆ ಚಿತ್ತವು. ಹದಿನಾಲ್ಕುಲೋಕವೆಂದರೆ ಪಿಂಡವು, ಕಮಲನೆಂದರೆ ಮರವು, ಪ್ರಾಣಲಿಂಗಕ್ಕೆ ಮಜ್ಜನಕ್ಕೆರೆಮವ ಕಂಡೆನೆಂದರೆ ಭವದ ಬಳ್ಳಿಯಸುಟ್ಟು ವರವೆಯನ್ನು ಮರಳುಕಂತೆ ಯನಮಾಡಿ, ಎಂದರ್ಥ. ಅರುಲಿನ ತಿರುಳೆ ಪ್ರಾಣಲಿಂಗ, ಸಜ್ಜನವೇ ಮಜ್ಜನ, ಎರೆವುದೇ ಕುರುಹು,ಅರುಹು ಕುರುಹುಗಳೆಂಬ ರವಿಚಂದ್ರರು, ಮರವೆಂಬಕತ್ತಲೆಯ ಪರಿಹರಿಸಿ ಪೃಥ್ವಿ ಮೊದಮೊದಲು ಅತ್ಮದಕಡೆ ಆಷ್ಟುಮುದ ಅ ಾ ಜೆ ಇಮ ಜ್ಞಾನ ಈ ಜ್ಞಾನವೆಂಬ ಕತ್ತಲೆಯನ್ನು ಶಾಶ್ವತ ಗೊಳಿಸುವುದೇ ಆಶೆ, ಈ ಆಶಾಪಾಶವೇ ದುರುಳ ದುರಾಚಾರ ಮುಕ್ಕರಿತ್ರಿಯು. ಈಡ, ಪಿಂಗಳ, ಸುಷುಮ್ನ ನಾಳಗಳೆಂಬ ಶ್ವಾಸ ನಿಶ್ವಾಸಗಳಿಂದ ನಾಲ್ಕಂಗುಲ ನಷ್ಟಮಾಡಿ ಸಮಾನವನ್ನು ಮಾಡಿದರೆ ಆ ಪ್ರಾಣಾಯಾಮದಿಂದ ಪ್ರಾಣಲಿಂಗ ಸಂಬಂಧವಹುದು. ಅಲ್ಲಿಂದ ಮುಂದೆ ಆ ಕಾಲ ಚಕ್ರವನ್ನು ಹೊಕ್ಕು ಶಿವಲಿಂಗವನ್ನು ಕಂಡು ಕುಭಾವವನಳಿದು ಸದ್ಭಾವ ಹಸ್ತ ಗಳಿಂದ ಪೂಜಿಸಿ ರಾಗ, ದ್ವೇಷ, ಭಯ, ಲಜ್ಜೆ, ಮೋಹಗಳೆಂಬ ಆಕಾಶದ ಗುಣ ವಳಿದು ಶಬ್ದ ವಿಷಯವನ್ನು ಪರಿಹರಿಸಿ, ಮೃದು, ಕಠಿಣ, ಸೀತೋಷ್ಣಗಳೆಂಬ ಸ್ಪರ್ಶ ಜ್ಞಾನದಿಂದ ನಿರ್ಮೋಹದ ಬೇರನ್ನು ಕಿತ್ತು ಅಜ್ಞಾನವಳಿದು ಸುಜ್ಞಾನ ಪರಮ ಪಾವನ ಚರಿತ್ರದ ಬ್ರಹ್ಮಾನಂದರ ಸಾದಾಪ್ರಸಾದವನ್ನು ಆಲಿಂಗಕ್ಕೆ ಅರ್ಪಿಸಿ, ನಾದ ವೇಗುರುಮುಖ, ಬಿಂಧುವೇ ಲಿಂಗಮುಖ, ಕಳೆಯೇ ಚರಮುಖ ವೆಂದು ಈ ಮೂ ರನ್ನ ಆಕಾಶ ತತ್ವದೊಳು ಬೆರಿಸಿ ಮೇಲಕ್ಕೇರಿ ಹಂಸ ಚಕ್ರದ ಮಹಾಲಿಂಗವನ್ನು ದರ್ಶನಮಾಡಿ ಸಗುಣ ನಿರ್ಗುಣವಳಿದು ಸದ್ಗುಣ ಹಸ್ತದಿಂದ ಪೂಜಿಸಿ ಹೃನ್ಮುಖ ದಿಂದ ಸದ್ಯೋಮುಕ್ತಿಯೆಂಬ ನೈವೇದ್ಯವನ್ನು ಸಮರ್ಪಿಸಿ ಮೂಲಸ್ಥಾನವೆಂಬ ಆಧಾರ

ಚಕ್ರ ಸ್ವಾಧಿಷ್ಠಾನವೆಂಬ ಲಿಂಗಸ್ಥಾನ, ಮಣಿಪೂರಕವೆಂಬ ಅಗ್ನಿಸ್ಥಾನ ಈ ಮೂರು ಚಕ್ರಗಳನ್ನು ಊರ್ಧ್ವಮುಖವ ಮಾಡಿದರೆ ಆಕಾಶದ ಬಾಗಿಲು ತೆರೆವು ಮಹಾಲಿಂಗದ ದರ್ಶನವನ್ನು ಮಾಡಿನಿಲ್ಲುವುದು, ಹಂಸನಿಂದಾದ ಜೀವನವನ್ನು ಪರಮೈಕ್ಯಗೊಳಿಸಿ ಜೀವ ಪರಮಗುಣವನಳಿದು ಸಂಜೀವ ಲಿಂಗದ ಯೋಗವನೆಲೆಗೊಳಿಸಿ ಹಂಸನ ಗುಣಾ ಧಳಿಯ ಮುರಿದು ಪರಮ ಹಂಸನ ಮಾಡಿ ಪರಮ ಹಂಸನ ಜಪಿಸುವ ಜಪಬಲಿದು ಸಾಕರ್ಮ ದುಷ್ಕರ್ಮ ವೆಂಬ ಜಾಡ್ಯವನಳಿದು ತ್ರಿಕೂಟದ ಭ್ರೂಮಧ್ಯದಿಂದ ಬ್ರಹ್ಮ ರಂಧ್ರದ ಬ್ರಹ್ಮಚಕ್ರದ ಇಷ್ಟಲಿಂಗವನ್ನು ಕಂಡು ಆಕಾರವಳಿದು ನಿರಾಕಾರ ಹಸ್ತ ದಿಂದ ಪೂಜಿಸಿ ಸರ್ವಾತ್ಮ ಸಂಪೂರ್ಣವಾದ ಪದಾರ್ಥ ಪ್ರಸಾದವ ಮಹಾಲಿಂಗಕ್ಕೆ ಸಮರ್ಪಿಸಬೇಕು.

ಇಲ್ಲಿ ಶ-ಷ-ಸ ಗಳೆಂಬ ನಾಲ್ಕಕ್ಷರದಳವುಳ್ಳುದೇ ಆಧಾರ ಚಕ್ರ ವ-ಭ-ಮ ಯ-ರ-ಲ ಗಳೆಂಬ ಷಡಕ್ಷರ ದಳವುಳ್ಳುದೇ ಸ್ವಾದಿಷ್ಠಾನಚಕ್ರ, ಡ-ಢ-ಣ-ತ.ಥ-ದ-ಧ ನ-ಪ-ಫ ಗಳೆಂಬ ದಶಾಕ್ಷರ ದಳವುಳ್ಳುದೇ ಮಣಿಪೂರಕ ಚಕ್ರ, ಕ-ಖ ಗ,ಘ.ಙ ಚ-ಛ,ಜ-ಝ-ಞ-ಟಠ ಎಂಬ ದ್ವಾದಶಾಕ್ಷರ ದಳವುಳ್ಳುದೇ ಅನಾಹತ ಚಕ್ರ, ಅ.ಆ ಇ-ಈ-ಉ.ಊ-ಋ-ೠ-ಌ-ೡ-ಏ-ಐ-ಓ-ಔ-ಅಂ-ಅಃ ಎಂಬ ಷೋಡಶಾಕ್ಷರದಳ ವುಳ್ಳುದೇ ವಿಶುದ್ಧಿ ಚಕ್ರ, ಹಂ-ಕ್ಷಂ ಎಂಬ ಎರಡಕ್ಷರದಳವುಳ್ಳುದೇ ಆಜ್ಞಾ ಚಕ್ರ, ಓಂ-ಳಂ ಎಂಬ ಅಕ್ಷರಗಳ ಸಹಸ್ರದಳವುಳ್ಳುದೇ ಬ್ರಹ್ಮ ಚಕ್ರ, ಈ ೫೦ ಅಕ್ಷರಗ ಳಿಂದ ಹುಟ್ಟಿದ ಷಟ್ ಸ್ಥಲ ಬ್ರಹ್ಮನು ನೊಡಗೂಡಿಹನೆಂದರೆ ಆ ಷಟ್ ಸ್ಥಲವು ಯಾರಿಗೆ ನಿಲುಕುವುದು ? ಬ್ರಹ್ಮನೊಡಗೂಡಿ ಮೇಲಣ ಹೃತ್ಕಮಲಕರ್ಣಿಕಾವಾಸದ ಶಿವಾಚಕ್ರಪ್ರಾಣಲಿಂಗವಕಂಡು ಉನ್ಮನಾವಸ್ಥೆಯ ಸ್ಥಾನದ ತುಟ್ಟ ತುದಿಯ ಬಟ್ಟ ಬಯಲು ಶೂನ್ಯವೆಂಬ ಕದಳಿಯಂಪೊಕ್ಕು.

( ಹಿಂದಿನ ಸಂಚಿಕೆಯಿಂದ ಮುಂದುವರಿದುದು. )

ಅವುಗಳನ್ನು ಓದಿನೋಡಿ ತಿಳಿದುಕೊಳ್ಳುವ ಸಾಮರ್ಥ್ಯವಿದ್ದರೆ ಈಶ್ವರ ಪ್ರಮಥ ರನ್ನಾದರೂ ಕ್ರಮವಾಗಿ ಹೇಳಬಹುದಾಗಿದ್ದಿತು. ವೀರಶೈವ ಪ್ರಥಮರು ವೀರ, ನಂದಿ, ಭೃಂಗಿ, ವೃಷಭ, ಸ್ಕಂದರೇ ಆದಿಯಾಗುಳ್ಳವರೆಂಬುದು ಸಾಮಾನ್ಯವಾಗಿ ಸರ್ವರಿಗೂ ತಿಳಿದ ವಿಷಯವಾಗಿದೆ. ಇದೂ ಕೂಡ ಈ ಕವಿಗೆ ತಿಳಿಯಬಾರದೆಂದರೆ ಬಹಳ ಆಶ್ಚರ್ಯವೆನಿಸುವುದು. ಶಿವಪ್ರಮಥರನ್ನು ಕಾವ್ಯದಲ್ಲೆಲ್ಲಿಯೂ ಕ್ರಮವಾಗಿ ಬರೆದಿಲ್ಲ. ಅಥವಾ ಮೂಲ ಗ್ರಂಥದಲ್ಲಿದ್ದಂತೆಯೇ ಅನುವಾದಿಸಿರುವನೋ ? ತಿಳಿಯದಾಗಿದೆ.

೨ ನೆಯ ಸಂಧಿ ಪದ್ಯ ೪೦ ರಲ್ಲಿ :— ಕೈ ಲಾ ಸ ದ ಲ್ಲಿ ನಂದಿಕೇಶ್ವರನು ಋಗ್ವೇದವನ್ನೂ, ವೀರಭದ್ರನು ಯಜುರ್ವೇದವನ್ನೂ, ರುದ್ರರು ಸಾ ಮ ವೇ ದ ವನ್ನೂ, ಪ್ರಮಥಗಣರು ಅಥರ್ವಣ ವೇದವನ್ನೂ ಪಠಿಸುತ್ತಿರುವರೆಂದು ಮಾತ್ರ ಬರೆದಿದ್ದಾನೆ.

ಈ ಕಾವ್ಯದಲ್ಲಿ ವಿಷಯಗಳು ಕ್ರಮದಪ್ಪಿರುವುದು ಈತನ ದೋ ಷ ವ ಲ್ಲ. ಈತನು ಕೇವಲ ಅನುವಾದಕನಾದುದರಿಂದ ತೆಲುಗು ಪ್ರತಿಯನ್ನು ಬರೆದ ಕವಿಯದೇ ದೋಷವೆಂದು ಗಣಿಸಬಹುದಾದರೂ ಈ ಮಾತು ಸಮಂಜಸವಾಗುವುದಿಲ್ಲ. ಏಕೆಂದರೆ:— ತೆಲಗು ಪ್ರ ತಿ ಯ ನ್ನು ಬರೆದ ಕವಿಯು ಅಕ್ರಮವಾಗಿ ಒಂದು ವೇಳೆ ಬರೆದಿದ್ದರೂ ಆತನಿಗಿಂತಲೂ ಕನ್ನಡಿಸಿದ ಕವಿಯು ಪಂಡಿತನಾಗಿದ್ದ ಪಕ್ಷದಲ್ಲಿ ಮೂಲ ಪ್ರತಿಯ ದೋಷಗಳನ್ನು ಖಂಡಿಸಿ ಕ್ರಮವಾಗಿ ಬರೆಯಬಹುದಾಗಿದ್ದಿತು. ಆದುದರಿಂದ ಈತನು ಅಂತಹ ಪ್ರಾಮಾಣಿಕ ಕವಿಯೆಂದು ನಂಬಲಿಕ್ಕಾಗುವುದಿಲ್ಲವಾದರೂ ಸ್ವಲ್ಪ ಲಕ್ಷ್ಯಕೊಡಬೇಕಾಗಿದೆ.

ಪಂಚಾಚಾರ್ಯರೂ, ಪಂಚಕಲಶ ನಿರ್ಣಯವೂ, ಈ ಕವಿಯು ಚತುರಾಚಾರ್ಯರನ್ನೇ ಹೇಳುವನಾದರೂ ಆತನ ಮಾತಿನಿಂದಲೇ ಪಂಚಾಚಾರ್ಯರನ್ನು ಸುಲಭವಾಗಿ ನಿರ್ಣಯಿಸಬಹುದಾಗಿದೆ-

**ಹೇಗೆಂದರೆ:—** ಲಿಂಗಗಳಿಂದ ಆಚಾರ್ಯರ ಉದಯವನ್ನು ಹೇಳುವಾಗ

" ಲೀಲೆಯಿಂದೀಶ್ವರ, ಸದಾಶಿವ । ಶೀಲರುದ್ರ ಮಹೇಶ್ವರರುಸುವಿ ।
ಶಾಲಕೆಂಜಡೆ ಕುಂಡಲಿ ಯಜ್ಞೋಪವೀತ ರುದ್ರಾಕ್ಷ॥ ಮಾಲಿಭಸ್ಮೋದ್ಧೂ
ಳನವುಕ । ಪಾಲಕಂಥೆಯು ಯೋಗದಂಡವು । ಕಾಲಗೆಜ್ಜೆಯು ಮಠದ
ಮುದ್ರೆಯು ಪ್ರಾಣಲಿಂಗಿಗಳು ॥ ೧೩ ॥ (ಸಂ ೩)

ಈಶ್ವರ, ಸದಾಶಿವ, ರುದ್ರ, ಮಹೇಶ್ವರರು, ಯಜ್ಞೋಪವೀತ, ಮಠದ ಮುದ್ರೆ, (ಮುದ್ರಾಬಟ್ಟಲು) ಪ್ರಾಣಲಿಂಗವುಳ್ಳವರಾಗಿ ಸೋಮನಾಥಲಿಂಗದಿಂದ ಮೊದಲು ಜನಿಸಿದರೆಂತಲೂ, ಇವರಿಗೇನೆ ಪುನಃ ದೀಕ್ಷೆಮಾಡಿ ಚತುರಾಚಾರ್ಯರ ನಾಮಕರಣಮಾಡಲು ಶಿವನೇ ಬಂದಿದ್ದನೆಂತಲೂ, ಕವಿಯು ಬರೆದಿದ್ದಾನೆ.

" ಪಂಚ ಗುರುಸ್ಥಾನದಲಿ ನೆಟ್ಟನೆ । ಪಂಚಕಲಶವ ನಿರ್ಮಿಸುತ ಘನ ।
ಪಂಚತೀರ್ಥವನೆರೆದು ಪಂಚವಿಭೂತಿಯನೆಥರಿಸಿ ॥
ಪಂಚವರ್ಣವು ಪಂಚ ಭಕ್ಷ್ಯವು । ಪಂಚದಂಡವು ಪಂಚವರ್ಣದಿ ।
ಪಂಚಮುಖಶಾಮಿಂಚುತ ಪುನದೀಕ್ಷೆಮಾಡಿದನು. ॥೧೪॥ (ಸಂ ೩)
" ಶುದ್ಧ ರೇವಣಸಿದ್ಧ, ಮರುಳ । ಸಿದ್ಧ, ನೇಕೋರಾಮಪಂಡಿತಾ
ರಾಧ್ಯರೆಂಭಿದಾನವಿಟ್ಟು.............................. ॥೧೯॥ (ಸಂ ೩ )

**ವಿಚಾರ:—** ಚತುರಾಚಾರ್ಯರ ಶಿವದೀಕ್ಷೆಯಲ್ಲಿ ಚತುಃಸಂಖ್ಯಾತಗಳಾದ ವಸ್ತುಗಳೇ ಕಾರ್ಯ ಸಮಾಪ್ತಿಯನ್ನು ಮಾಡಲು ಸಾಕು, ಹೀಗಿದ್ದೂ ಪಂಚಸಂಖ್ಯಾತ ವ್ಯವಹಾರವುಳ್ಳ ಪಂಚಗುರುಸ್ಥಾನ, ಪಂಚಕಲಶ, ಪಂಚವಿಭೂತಿ, ಪಂಚವರ್ಣ, ಪಂಚದಂಡಗಳೇತಕ್ಕೆ ಬೇಕಾದವು ? ಎಂಬ ಪ್ರಶ್ನೆಗೆ ಯಾವವಿಧದಿಂದಲೂ, ಉತ್ತರವು ದೊರೆಯುವಂತಿಲ್ಲವಾದುದರಿಂದ ಲಿಂಗೋದ್ಭವರಾದವರು ಐವರಿರಲೇಬೇಕಾಗುವುದು. ಹಾಗಿಲ್ಲದಿದ್ದರೆ ಐದನೆಯ ಸಂಖೆಯ ಕಾರ್ಯವಸ್ತುವಿಗೆ ಎಂದರೆ ಐದನೆಯ ಗುರುಸ್ಥಾನ, ಐದನೆಯಕಲಶ, ಐದನೆಯ ವಿಭೂತಿ, ಐದನಯವರ್ಣ, ಐದನೆಯ ದಂಡಗಳಿಗೆ ಆಶ್ರಯವಿಲ್ಲದೆಹೋಗಿ ಆ ಐದನೆಯದೆಲ್ಲವೂ ನಷ್ಟವಾಗುವ ಪ್ರಸಂಗ ವೊದಗುವುದು.

ಐದನೆಯ ಗುರುಗಳಾದ ವಿಶ್ವಾರಾಧ್ಯರು ಕನ್ನಡದೇಶಕ್ಕೆ ಬಹುದೂರವಾದ ಕಾಶಿಯಲ್ಲಿದ್ದುದರಿಂದಲೂ, ಇವರ ಲೀಲೆ ಸಂಸ್ಕೃತ ಗ್ರಂಥಗಳಲ್ಲಿ ಮಾತ್ರ ವರ್ಣಿತವಾಗಿರುವುದರಿಂದಲೂ, ಈವಿಷಯವು ಕವಿಗೆ ತಿಳಿಯದೆಹೋಗಿ ಹೀಗೆ ಅಸಂಬದ್ಧವಾಗಿ ಬರೆದುಕೊಳ್ಳುತ್ತ ಹೋಗಿರುವನೇ ಹೊರತು ತಿಳಿದಿದ್ದರೆ "ಪಂಚ ಗುರುಸ್ಥಾನದಲಿ" ಮುಂತಾಗಿಬರೆದ ಕವಿಯು ಅವಶ್ಯವಾಗಿಯೂ ವಿಶ್ವಾರಾಧ್ಯರ ಹೆಸರನ್ನು ಹಾಕಿ ಕಾವ್ಯವನ್ನು ಕ್ರಮಗೊಳಿಸುತ್ತಿದ್ದನು.

೧೮ ನೆಯ ಪದ್ಯದಲ್ಲಿ ಪಂಚ ಭಕ್ತವು ಎಂಬುದು ಆ ಸಂದರ್ಭಕ್ಕೆ ಸರಿಯಾಗಿಲ್ಲ. ಪಂಚಗುರುಸ್ಥಾನದಲಿ ಮುಂತಾಗಿ ಪಂಚಾಚಾರ್ಯರಿಗೆ ಸಲ್ಲಬೇಕಾದ ಮರ್ಯಾದೆಗಳುಳ್ಳ ಪದ್ಯದಿಂದಲೂ, ೩-೪ ನಯ ಸಂಧಿಪದ್ಯದಲ್ಲಿ "ಶ್ರೀ ರೇವಣಸಿದ್ಧರು ನೀಲಗಲ ಚಕ್ರವರ್ತಿಗೆ ಶಿವದೀಕ್ಷೆಯನ್ನು ಮಾಡುವಾಗ ಪಂಚ ಕಲಶಗಳನ್ನು ಸ್ಥಾಪಿಸಿದ್ದರೆಂತಲೂ, ನಾಲ್ಕು ದಿಕ್ಕಿಗೆ ಗುರುಗಳನ್ನು ನಿಲ್ಲಿಸಿದ್ದರೆಂತಲೂ, ಹೇಳುವುದರಿಂದ ರೇವಣಸಿದ್ಧರನ್ನು ಬಿಟ್ಟು ನಾಲ್ಕು ಜನ ಆಚಾರ್ಯರು ಎಂದರೆ ರೇವಣಸಿದ್ಧರನ್ನು ಕೂಡಿಕೊಂಡು ಪಂಚಾಚಾರ್ಯರು ಇದ್ದರೆಂದು ಸುಲಭವಾಗಿ ತಿಳಿಯಬರುವುದು.

ಪಂಚಕಲಶ ಶಬ್ದವಂತೂ ಮೇಲೆ ಉದಾಹರಿಸಿದಂತೆ ಮುಂದೆ ಮತ್ತೆ ೨—೩ ಸ್ಥಳಗಳಲ್ಲಿ ಬಂದಿರುವುದರಿಂದ ಪಂಚಕಲಶ ಸ್ಥಾಪನೆಯು ಎಂದೆಂದಿಗೂ ಪ್ರಚಾರದಲ್ಲಿದ್ದಿತೆಂದು ತರುಣರು ಅರಿತುಕೊಳ್ಳಬಹುದು.

"ಆಚಾರ್ಯರ ವಿಷಯದಲ್ಲುಂಟಾಗಿರುವ ಪ್ರಮಾದ"

ಈಶ್ವರನು ಲಿಂಗೋದ್ಭವರಾದ ನಾಲ್ವರಿಗೆ ದೀಕ್ಷೆಮಾಡಿ ರೇವಣಸಿದ್ಧಾದಿ ನಾಮಕರಣ ಮಾಡಿದಮೇಲೆ ನೀವು ನಿಮ್ಮ ಕಾರ್ಯಗಳನ್ನು ಮುಗಿಸಿ ಯುಗಕ್ಕೊಬ್ಬರು ನನ್ನ ಲಿಂಗಗರ್ಭದಲ್ಲಿ ಪ್ರವೇಶಿಸಿರೆಂದು ಅಪ್ಪಣೆಮಾಡಿ ಅಡಗುವನು. ಆಮೇಲೆ:—

" ಅಷ್ಟರಲಿ ಗುರುವರರು ನಾಲ್ವರು ತುಷ್ಟರಾಗಿರುತಿರ್ದು ಹರಿಪರ ।
ಮೇಷಿ ಮೊದಲಾದಷ್ಟದಿಕ್ಕಿನ ನರಸುರರಿಂಗೆಲ್ಲ ॥

ಇಷ್ಟಲಿಂಗವ ಧರಿಸಿ ಪರಮವಿಷ್ಟ ಭೂ ೯ ಧ ನೆ ಮಾ ಡು ತ ಲಿ ಸ್ವ।
ರ್ವೇಷ್ಟರದಿ ಕುಳಿತರು ತ್ರಿಭುವನಾರಾಧ್ಯರುಗಳಾಗಿ॥ (ಸಂ೩ ಪದ್ಯ ೨೧)

ವಿಚಾರ:— ಈ ಪದ್ಯದಿಂದ ನಾಲ್ಕು ಜನ ಆಚಾರ್ಯರೂ ತಮ್ಮ ತಮ್ಮ ಕಾರ್ಯದಲ್ಲಿ ನಿರತರಾಗಿದ್ದರೆಂದು ತಿಳಿದು ಬರುವದಷ್ಟೆ? ಇದರಿಂದ ನಾಲ್ವರು ಆಚಾರ್ಯರ ಕಾಲವು ಒಂದೇ ಆದಂತಾಯಿತು.

ಹೀಗಿದ್ದರೂ ಕವಿಯು ಮುಂದೆ ನಾಲ್ಕು ಜನ ಆಚಾರ್ಯರಿಗೆ ನಾಲ್ಕು ಯುಗಗಳನ್ನು ಹೇಳುತ್ತ ರೇವಣ ಸಿದ್ಧರು ಮರುಳುಸಿದ್ಧರೆಂಬುವರಿಗೆ ತಮ್ಮ ಪಟ್ಟಕಟ್ಟಿ ಸೋಮೇಶನಲ್ಲಿ ಐಕ್ಯವಾದರೆಂತಲೂ, ಮರುಳಸಿದ್ಧರು ಏಕೋರಾಮರಿಗೆ ಪಟ್ಟಗಟ್ಟಿ ಸೋಮೇಶಲಿಂಗದಲ್ಲಿ ಐಕ್ಯವಾದರೆಂತಲೂ ಏಕೋರಾಮರು ಪಂಡಿತಾರಾಧ್ಯರಿಗೆ ಪಟ್ಟಗಟ್ಟಲು ಹೋದರೆ ಈಗ ನಾನೊಲ್ಲೆ. ಶಿವಾಜ್ಞೆಯಿಂದ ಪುನಃ ಲಿಂಗದಲ್ಲುದಯಿಸಿ ಸ್ವೀಕರಿಸುವೆನೆಂದೆನಲು ಏಕೋರಾಮ, ಪಂಡಿತರೀರ್ವರೂ ಮಲ್ಲಿಕಾರ್ಜುನ ಲಿಂಗದಲ್ಲಿ ಐಕ್ಯವಾದಂತೆಯೂ, ಬರೆದಿದ್ದಾನೆ.

ಹೀಗೆಬರೆಯುತ್ತ ಸಮಾನಾಧಿಕಾರವುಳ್ಳ ಆಚಾರ್ಯರಲ್ಲಿ ಗುರು ಶಿಷ್ಯಭಾವಗಳನ್ನು ಕಲ್ಪಿಸಿರುವುದು ಬಹಳ ಅಸಂಗತವಾಗಿ ತೋರುವುದು.

ನಾಲ್ವರು ಆಚಾರ್ಯರು ಒಂದೇಕಾಲದಲ್ಲಿಯೇ ಲಿಂಗೋದ್ಭವರಾಗಿ ತಮ್ಮ ತಮ್ಮ ಕಾರ್ಯಗಳಲ್ಲಿ ತತ್ಪರರಾಗಿರುವುದನ್ನು ಬರೆದ ಕವಿಯು ತನ್ನ ವಾಕ್ಯಕ್ಕೆ ದೋಷವುಂಟಾದೀತೆಂಬ ಕಡೆಗೆ ದೃಷ್ಟಿಯನ್ನೇ ಕೊಟ್ಟಂತೆ ಕಾಣುವುದಿಲ್ಲ. ಆದಕಾರಣವೇ ಯುಗಕ್ಕೊರ್ವ ಆಚಾರ್ಯರು ಎಂದು ಬರೆಯುತ್ತಾನೆ. ಈ ಕವಿಯು ಹೇಳಿದಂತೆ ಯುಗಕ್ಕೊಬ್ಬ ಆಚಾರ್ಯರಾದರೆ ಲಿಂಗದಿಂದ ಯುಗಕ್ಕೊಬ್ಬರೇ ಉದಯವಾಗಬೇಕಾಗಿದ್ದಿತು. ಹೀಗೆ ಉದಯವಾಗದೆ ಎಲ್ಲರೂ ಒಮ್ಮೆಲೇ ಉದಯಹೊಂದಿದ್ದಾರೆ, ಮತ್ತು ಎಲ್ಲರೂ ಒಮ್ಮೆಲೇ ತಮ್ಮ ತಮ್ಮ ಕಾರ್ಯಗಳಲ್ಲಿ ನಿರತರಾಗಿದ್ದಾರೆ. ಎಂಬ ವಿಷಯವನ್ನೂ ಇದೇ ಕವಿಯೇ ಬರೆದು ಮತ್ತು ಈತನೇ ಯುಗಕ್ಕೊಬ್ಬ ಆಚಾರ್ಯರು ಎಂದು ಬರೆದಿರುವುದು ತೀರಾ ಅಸಂಗತವು.

"ಕನ್ನಡಮ್ಮನ ಹೆಮ್ಮೆಯು ಹಿರಿದಾಗಲಿ"

# DHARMARAJYA

# ಧರ್ಮ ರಾಜ್ಯ.

The monthly Kanada Magazine **MUDENUR.**



ಮುದೇನೂರು ಶಾ|| ಶ|| ೧೮೬೨. ವಿಕ್ರಮಸಂವತ್ಸರ ಕಾರ್ತೀಕಮಾಸ ಪತ್ರಿಕೆ.

ಸಂಪುಟ ೨. ಸಂ

VOL. 2. 20th NOVEMBER 1940.

## ವಿಷಯಾನುಕ್ರಮಣಿಕೆ.

# ಧರ್ಮರಾಜ್ಯ.



ಮುದೇನೂರು. ಶಾ॥ ಶ॥ ೧೮೬೨. ವಿಕ್ರಮಸಂವತ್ಸರ ಕಾರ್ತೀಕ ಮಾಸಪತ್ರಿಕೆ.
ಸಂ॥ ೨. ಸಂಚಿಕೆ ೮.
VOL. 2.) 20th. NOVEMBER. 1940. (NO. 8.

ಶ್ರೀ ಜಗದ್ಗುರುಭ್ಯೋನಮಃ

## ವಿದ್ಯೆ.

ತನಗೂ ಮತ್ತು ಸರ್ವರಿಗೂ ಹಿತವಾಗುವದಕ್ಕಾಗಿ ಯಾವದಾದರೊಂದು ವಿಷಯವನ್ನು ಕಲಿಯುವದಕ್ಕೆ ವಿದ್ಯೆ ಎನ್ನುವರು.

ವಿದ್ಯೆಯು ಎಲ್ಲಕ್ಕೂ ಶ್ರೇಷ್ಠವಾದದ್ದು. ವಿದ್ಯೆಯಿಂದಲೇ ರಾಷ್ಟ್ರವಾಗಲಿ ಸಮಾಜವಾಗಲಿ, ಉನ್ನತಸ್ಥಿತಿಗೆ ಬರುತ್ತದೆ. ದ್ರವ್ಯಸಂಪಾದನೆಯಾಗುತ್ತದೆ. ಲೋಕದಲ್ಲಿ ವಿದ್ವಾಂಸನು ಗೌರವವನ್ನು ಹೊಂದುತ್ತಾನೆ. ಇವನಷ್ಟು ಮನ್ನಣೆಯನ್ನು ರಾಜನಾಗಲಿ, ಶ್ರೀಮಂತರಾಗಲಿ, ಹೊಂದಲಾರರು. ಹೊಂದಿದರೂ ತಮ್ಮ ದೇಶದಲ್ಲಿಯಾಗಲಿ, ತಮ್ಮ ಪರಿಚಯದ ಜನರಲ್ಲಾಗಲಿ, ಹೊಂದುವರೇ ಹೊರತು ಅನ್ಯದೇಶದಲ್ಲಿಯಾಗಲಿ, ಅಪರಿಚಿತ ಜನರಲ್ಲಿಯಾಗಲಿ, ಎಂದೂ ಹೊಂದಲಾರರು. ಇದೇ ವಿಷಯವನ್ನು ಕುರಿತು ಒಬ್ಬ ಶಾಸ್ತ್ರಕಾರನು—

ವಿದ್ವತ್ವಂಚ ನೃಪತ್ವಂಚ ನೈವ ತುಲ್ಯಂ ಕದಾಚನ ॥
ಸ್ವದೇಶೇ ಪೂಜ್ಯತೇ ರಾಜಾ ವಿದ್ವಾನ್ ಸರ್ವತ್ರ ಪೂಜ್ಯತೇ ॥

ಎಂದು ಮತ್ತಿಷ್ಟು ಸ್ಪಷ್ಟಪಡಿಸಿದ್ದಾನೆ. ರಾಜ್ಯವಾಗಲಿ, ಶ್ರೀಮಂತಿಕೆಯಾಗಲಿ ಇವೆರಡು ಸ್ಥಿರವಾದವುಗಳಲ್ಲ. ಒಬ್ಬ ರಾಜನನ್ನು ಮತ್ತೊಬ್ಬ ರಾಜನು ದಂಡೆತ್ತಿ ಬಂದು ಸೋಲಿಸಿ ತಾನೇ ರಾಜನಾಗಬಹುದು. ಅಥವಾ ಹಂಚಿಕೊಳ್ಳಬಹುದು. ಇಲ್ಲವೆ ದುರ್ದೈವದಿಂದ ತಾನೇ ನಾಶವಾಗಬಹುದು. ಇದರಂತೆ ದುಡ್ಡನ್ನು ಅಣ್ಣತಮ್ಮಂದಿರು ಪಾಲುಮಾಡಿಕೊಳ್ಳಬಹುದು. ಯಾರಾದರೂ ಕದ್ದುಕೊಂಡುಹೋಗಬಹುದು. ಅಥವಾ ಪಾಪಕರ್ಮದಿಂದ ನಾಶವಾಗಿ ಹೋಗಬಹುದು. [illegible]

ಗಳನ್ನು ಶಾಸ್ತ್ರದಿಂದ ಕೇಳುತ್ತೇವೆ. ಸರ್ವ್ಯಃ ಪ್ರತ್ಯಕ್ಷ ನೋಡುತ್ತೇವೆ. ಆದ್ದರಿಂದ ಇವು ಸ್ವರಾಷ್ಟ್ರಯಲ್ಲ. ವಿದ್ಯೆಯು ಹಾಗಲ್ಲ. ಇದನ್ನು ಯಾರೂ ಕದಿಯುವದಿಲ್ಲ. ಪಾಲಿಗೆ ಹಾಕುವದಿಲ್ಲ. ಇದು ಜನ್ಮಾಂತ್ಯದವರೆಗೂ ಅವನೊಡನೆ ಇದ್ದು ಅವನ ಕೂಡಹೋಗುತ್ತದೆ. ಆದ್ದರಿಂದ ವಿದ್ಯೆಗಿಂತ ಶ್ರೇಷ್ಠವಾದದ್ದು ಯಾವದೂ ಇಲ್ಲ.

ಇಂಥ ಶ್ರೇಷ್ಠವಾದ ವಿದ್ಯೆಯು ಬರಬೇಕಾದರೆ ತನ್ನಿಂದ ತಾನೇ ಬರಲಾರದು ಅಭ್ಯಾಸಮಾಡುವದರಿಂದ ವಿದ್ಯೆಯು ಬರುತ್ತದೆ. ಅಲ್ಲದೆ ಹಾಗೆಯೇ ಎಂದಿಗೂ ದೊರೆಕಲಾರದು. ಇದಕ್ಕೆ ಅಪವಾದ ಷಡಕ್ಷರಿಕವಿ, ನಿಜಗುಣಾರಾಧ್ಯ, ಕಾಲಿದಾಸ, ಇವರೇ ಮೊದಲಾದವರಿಗೆ ಅಭ್ಯಾಸಮಾಡದೆ ತನ್ನಿಂದ ತಾನೇ ಪಾಂಡಿತ್ಯವು ದೊರ ಕಿತು. ಇಂಥವರು ಲೋಕದಲ್ಲಿ ಹುಟ್ಟುವದು ಅಪರೂಪ. ಇಂಥ ಶಕ್ತಿ ಬರಬೇಕಾದರೆ ಪೂರ್ವದ ಪುಣ್ಯವಿಶೇಷದಿಂದ ತನ್ನಿಂದ ತಾನೇ ಬರುತ್ತದೆ. ಅಲ್ಲದೆ ಸ್ವಪ್ರಯತ್ನ ದಿಂದ ಬರತಕ್ಕದ್ದಲ್ಲ. ಇದು ಎಲ್ಲರಿಗೂ ಸಾಧ್ಯವಿಲ್ಲವು. ಅಂದಬಳಿಕ ಸರ್ವರೂ ಅಭ್ಯಾಸ ಮಾಡುವದಕ್ಕೆ ಪ್ರಯತ್ನ ಮಾಡಿ ಪರಮಾತ್ಮನ ಕೃಪೆಯಿಂದ ವಿದ್ಯೆಯನ್ನು ಸಂಪಾದಿಸಬೇಕಾಗಿದೆ.

ವಿದ್ಯೆಗಳಲ್ಲಿ ಶಾಸ್ತ್ರವಿದ್ಯೆಯೆಂತಲೂ, ಲೌಕೀಕವಿದ್ಯೆಯೆಂತಲೂ ಎರಡು ಪ್ರಕಾರಗಳುಂಟು. ಈ ಉಭಯ ವಿದ್ಯೆಗಳಲ್ಲಿ ಶಾಸ್ತ್ರವಿದ್ಯೆಯೇ ಶ್ರೇಷ್ಠವಾಗಿದೆ. ಯಾಕಂದರೆ ಲೌಕೀಕವಿದ್ಯೆಯನ್ನು ಕಲಿತು ಬೇಕಾದಂಥ ಡಿಗ್ರಿಯನ್ನು ಪಡೆದರೂ ವಿಶೇಷ ದ್ರವ್ಯ ಸಂಪಾದನೆಯಾಗಿ ಐಹಿಕಸುಖವುಮಾತ್ರ ದೊರಕುತ್ತದೆಯೇ ಹೊರ್ತು ಆಮುಷ್ಮಿಕ ಸುಖವು ಎಂದೂ ದೊರೆಯಲಾರದು. ಐಹಿಕಸುಖವು ನಿತ್ಯವಾದದ್ದಲ್ಲ. ಲೋಕದಲ್ಲಿ ಪ್ರತಿಯೊಬ್ಬ ಮನುಷ್ಯನಿಗೂ ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳು ಬೇಕೇಬೇಕು. ಶಾಸ್ತ್ರಾಭ್ಯಾಸದಿಂದ ಮೇಲೆಬರೆದ ನಾಲ್ಕುಪುರುಷಾರ್ಥದೊರಕುತ್ತವೆ. ಲೌಕೀಕವಿದ್ಯೆಗಳಿಂದ ಅರ್ಥ, ಕಾಮಗಳೆಂಬೆರಡು ಪುರುಷಾರ್ಥಗಳು ಮಾತ್ರ ಸಿಗುತ್ತವೆ ನಾಲ್ಕುಪುರುಷಾರ್ಥಗಳನ್ನು ಪಡೆಯಬೇಕೆಂಬು ವವರು ಲೌಕೀಕವಿದ್ಯೆಗಳಲ್ಲಿಬೇಕಾದಷ್ಟು ಪಾಂಡಿತ್ಯವನ್ನು ಸಂಪಾದಿಸಿದರೂ ಶಾಸ್ತ್ರಜ್ಞ ರಸ್ನೇಹವನ್ನು ಮಾಡಿ ಅವರತತ್ವದಂತೆ ನಡೆಯಲೇಬೇಕು. ಆದ್ದರಿಂದ ಶಾಸ್ತ್ರವಿದ್ಯೆ ಯು ಶ್ರೇಷ್ಠವಾಗಿದೆ.

"ವಿದ್ಯಾ ವಿಹೀನಃ ಪಶುಭಿಸ್ಸಮಾನಃ" ಅಂದರೇ ವಿದ್ಯೆಯಿಲ್ಲದವನು ಪಶು ವಿಗೆಸಮಾನವೆಂಬ ಆರ್ಯೋಕ್ತಿಯಿರುವದರಿಂದಲೂ, ವಿದ್ಯೆಯಿಲ್ಲದವನು ಹದ್ದಿಗಿಂತಲೂ ಕಡೆ ಎಂಬನೀತಿವಾಕ್ಯ ಯಿರುವದರಿಂದಲೂ, ಮನುಷ್ಯನಾದ ಬಳಿಕ ಯಾವದಾದ ರೊಂದು ವಿದ್ಯೆಯಲ್ಲಿ ಪ್ರವೀಣನಾಗಬೇಕು. ವಿದ್ಯೆಯನ್ನು ಕಲಿಯುವದು ಹೊಟ್ಟೆಯ ಉಪಜೀವನಕ್ಕಾಗಿ ಎಂದು ಯಾರೂ ತಿಳಿಯಬಾರದು. ಅಜ್ಞಾನದೆಸೆಯಲ್ಲಿರುವ ಪಶು

ಪಕ್ಷಿಗಳುಸಹ ತಮ್ಮತಮ್ಮ ಹೊಟ್ಟೆಯನ್ನು ತುಂಬಿಸಿಕೊಳ್ಳುತ್ತವೆ. ಅಂದಮೇಲೆ ಜ್ಞಾನದಿಂದಕೂಡಿದ ಮನುಷ್ಯಜನ್ಮಕ್ಕೆ ಬಂದಬಳಿಕ ಹೊಟ್ಟೆಯನ್ನು ತುಂಬಿಸಿಕೊಳ್ಳು ವದು ದೊಡ್ಡಮಾತಲ್ಲ. ವಿದ್ಯೆಯನ್ನು ಕಲಿಯುವದು ತನ್ನ ಸ್ವಂತಹಿತಕ್ಕಾಗಿಯೂ, ಪರಹಿತಕ್ಕಾಗಿಯೂ ಎಂದು ತಿಳಿಯಬೇಕು.

ವಿದ್ಯೆಗಿಂತಲೂ ನಡತೆಯೇ ಶ್ರೇಷ್ಠವಾದುದೆಂದು ಎಣಿಸಲ್ಪಟ್ಟಿದೆ. ನಮ್ಮ ಮುಂದಿನ ಜನಾಂಗದ ಮೇಲ್ಮೆಗೆ ನಾವು ಬಿಟ್ಟು ಹೋಗಬಹುದಾದ ಅತ್ಯಂತ ಆದಾ ಯವೆಂದರೆ ಒಳ್ಳೆಯನಡತೆಯೆಂದುನ್ಯಾಯವಾಗಿ ಹೇಳಲ್ಪಟ್ಟಿದೆ. ಈ ವಿಷಯದಲ್ಲಿ ಒಬ್ಬ ಶ್ರೇಷ್ಠ ಗ್ರಂಥಕಾರನು ಈರೀತಿಹೇಳಿದುತ್ತಾನೆ. ಎಲ್ಲಸಂದರ್ಭಗಳಲ್ಲಿಯೂ ಶ್ರೇಷ್ಠನಡತೆಯು ಸ್ವಪ್ರಯತ್ನದ ಫಲವಾಗಿದೆ. ಇದು ಹುಟ್ಟುಗುಣವಾಗಿ ತಾಯಿ ತಂದೆಗಳಿಂದ ಬರತಕ್ಕದ್ದಲ್ಲ. ಇದು ಬಾಹ್ಯದ ಅನುಕೂಲಗಳಿಂದ ಉಂಟಾಗತಕ್ಕದ್ದಲ್ಲ. ಇದು ವಂಶ, ಐಶ್ವರ್ಯ, ವಿದ್ಯೆ, ಅಥವಾ ಅಧಿಕಾರ ಇವುಗಳೊಂದಿಗೆ ಕೂಡಿಬರ ತಕ್ಕದ್ದಲ್ಲ ಆದರೆ ಅದು ಸ್ವಪ್ರಯತ್ನದಿಂದ ಬರುವಂಥಾದ್ದು, ಧರ್ಮಯುಕ್ತವಾದ ಸತ್ಕರ್ಮಗಳನ್ನು ಮಾಡುವವದರಿಂದ ಉಂಟಾಗತಕ್ಕ ಸತ್ಕರ್ಮದ ಫಲವಾಗಿರುತ್ತದೆ. ಇದೇಅಭಿಪ್ರಾಯವನ್ನು ಕುರಿತು ಮತ್ತೊಬ್ಬನೀತಿಕಾರನು,

ಗುಣಹೀನ ಗರ್ಧೋಗತಿನಿಜ ।
ಗುಣಿಗಂ ಸ್ವರ್ಗಾದಿ ಭೋಗಮಕ್ಕುಮೆನಲ್ಕಾ ॥
ಗುಣಹೀನರ ಶಿರಿಯಿಂದಂ ।
ಗುಣಿಗಳ ಬಡತನವೆ ಲೇಸು ಜೂಡಾರತ್ನಾ ॥

ಎಂದು ಸ್ಪಷ್ಟಪಡಿಸಿದ್ದಾನೆ. ಲೌಕಿಕವಿದ್ಯೆಯನ್ನಾಗಲಿ, ಪಾರಮಾರ್ಥಿಕವಿದ್ಯೆ ಕಲಿತು ಬೇಕಾದಷ್ಟು ಪಾಂಡಿತ್ಯವನ್ನು ಸಂಪಾದಿಸಿದರೂ ಅದಕ್ಕೆ ಸರಿಯಾಗಿ ಒಳ್ಳೇ ನಡತೆಯು ಬೇಕು, ನಡತೆಯೊಂದಿರದಿದ್ದರೆ ಆ ವಿದ್ವತ್ತಕ್ಕೆ ಮನ್ನಣೆಸಿಗಲಾರದು. ಮತ್ತು ಪರಮಪುರುಷಾರ್ಥವು ದೊರಕಲಾರದು ಅಂಥವನು ಅಜ್ಞಾನಿಎನಿಸುವನಲ್ಲದೆ ಜ್ಞಾನಿಯನ್ನಿಸಲಾರನು. ಜ್ಞಾನಿ ಎಂದರೆ ತೋಡಿದ ಭಾವಿಗೆ ಜಲವೇ ಸಾಕ್ಷಿಯಾದಂತೆ ಜ್ಞಾನೋದಯಕ್ಕೆ ದುರ್ಮತಿ ದುರಾಚಾರಗಳಿಲ್ಲದಿರುವಿಕೆಯೇ ಜ್ಞಾನದ ಕುರುಹು.

ಮೇಲೆ ಹೇಳಿದಂತೆ ಬರೀ ಅಕ್ಷರ ವಿದ್ಯೆಯಿಂದ ಪೂರ್ಣರಾಗದೆ ಖರೇ ಜ್ಞಾನಿ ಅಂದರೆ ನಾವು ಸಾವಿರಗಟ್ಲೆ ರೂಪಾಯಿ ಖರ್ಚುಮಾಡಿ ೧೦-೧೫ ವರ್ಷಗಳ ವರೆಗೆ ಶ್ರಮಬಟ್ಟು ಕಾಶಿ, ಕಲಕತ್ತಾ, ಮುಂಬೈ ಮೊದಲಾದ ಪಟ್ಟಣಗಳಿಗೆ ಹೋಗಿ ಕಾಲೇ ಜದಲ್ಲಿ ಪರೀಕ್ಷೆಗಳನ್ನು ಕೊಟ್ಟು ಉತ್ತೀರ್ಣರಾಗಿ ಪದವೀಧರರಾದದ್ದಕ್ಕೂ ನಿಮ್ಮ ಜನ್ಮಸಾರ್ಥಕವಾದಂತಾಯಿತು. ಇಲ್ಲವಿದ್ದರೆ ...

ನಿಮ್ಮ ವಿದ್ಯೆಯು ನಿರರ್ಥಕವಾಗುವುದು. ಇಂಥ ಸ್ಥಿತಿಯನ್ನು ತಂದುಕೊಳ್ಳದೆ ಸದ್ಗುಣಗಳಿಂದ ಕೂಡಿದ್ದಾದರೆ ಬಂಗಾರಕ್ಕೆ ಸುಗಂಧವನ್ನು ಕೂಡಿಸಿದಂತೆ ಮತ್ತಿಷ್ಟು ಘನತೆಯನ್ನು ಹೊಂದುವಿರಿ. ನಮ್ಮ ಯಾವತ್ತೂ ಪಂಡಿತರು ಇಂಥ ಯೋಗ್ಯತೆಯನ್ನು ಹೊಂದಲೆಂದೂ ಪರಮಾತ್ಮನು ಇಂಥ ಶಕ್ತಿಯನ್ನು ಅನುಗ್ರಹಿಸಲೆಂದೂ ಆ ದಯಾನಿಧಿಯಾದ ಪರಮಾತ್ಮನನ್ನು ಪ್ರಾರ್ಥಿಸುವೆನು.

( ಲೇಖಕರು— ಶ್ರೀ ಪಟ್ಟದಸ್ವಾಮಿಗಳು ಹಿರೇಮಠ ಕೊಣ್ಣೂರು )

—★ಶ್ರೀ ಜಗದ್ಗುರು ಪಂಚಾಚಾರ್ಯೇಭ್ಯೋನಮಃ★—

ಶ್ರೀಮಜ್ಜಗದ್ಗುರು ಶ್ರೀ ಗಿರಿರಾಜ ಸೂರ್ಯ ಸಿಂಹಾಸನಾಧ್ಯಕ್ಷ ಶ್ರೀ ೧೦೮ ಜಗದ್ಗುರು ವಾಗೀಶ ಪಂಡಿತಾರಾಧ್ಯ ಶಿವಾಚಾರ್ಯ ಮಹಾಸ್ವಾಮಿಗಳವರ ದಿವ್ಯಚರಣಾರವಿಂದಗಳಲ್ಲಿ ಭಕ್ತಿಯಿಂದರ್ಪಿಸಿದ,

# ಭಾವಪುಷ್ಪ



ಜ್ಯೋತಿರ್ಲಿಂಗದ ಸಿರಿಯವಿಖ್ಯಾತ ಶಿಲೆಗಿರಿಯಂತೆ ಮಲ್ಲಿಕಾರ್ಜುನ।
ನಾಥನಲ್ಲಿಗಧಿಪತಿಯಂತೆ, ವೀರಶಿವರಾಚಾರ್ಯ ಪಂಡಿತೋತ್ತಮ।
ತಾತನಾಥಂಗೆ ಸುತನಂತೆ ನಿನ್ನಯತಪಕೆ ಶಿರದೂಗಿ ಹರುಷದಿಂಮನ।
ಸೋತು ನಿನ್ನೊಳೊಡಗೂಡಿ ಈ ಜಗದಿ ನಿನ್ನರೂಪದಿತೋರುತಿಹನಂತೆ।
ಘಾತದೀನರರಾಯ ಗುರುರಾಯ ವಾಗೀಶಗುರುರಾಯ ರಾಯ ॥೧॥

ನಿಚ್ಚನಮ್ಮೆದೆಗಳಲಿ ಹೆಣೆಹೆಣೆದು ಎಣಿಸಿರ್ದ ಗುಣಸಿರ್ದ ಈ ಹಿಂದೆ।
ಹುಚ್ಚುಸವಿಗನಸೊಂದು ನೀನೊಂದುದಿನ ತಾತಗುರುವಾಗಿ ಮೆರೆವೆ ಎಂದು।
ಕೆಚ್ಚಿದೆಯ ಶಿವಯೋಗಿ ಆ ಕನಸುನಿಜದಿಂದು ಕಣ್ಮುಂದೆ ನಲಿಯುತಿದೆ ಕಿಲಿಯುತಿದೆ।
ಕೆಚ್ಚುನಿನ್ನಯತಪದ ಮೆಚ್ಚಿಸಿತುಶಂಕರನ ತಣ್ಣನೆಯ ಕಣ್ಣನಿಗಳಲಿತಾಮಿಂದು!
ಅಚ್ಚುಬೆಲ್ಲದಸವಿಯ ಬೆಚ್ಚಿಬೀರಿತುಜಗಕೆ ವಾಗೀಶಗುರುರಾಯ ರಾಯ ॥೨॥

ಅಂದಿನಾವಾಗೀಶ ಇಂದಿನಾಜಗದೀಶ ಮುಂಪೆಯೂ ಜಗದೀಶ ।
ನೆಂದೆಂದಿಗೂ ಜಗದೀಶ ನಮ್ಮೊಡೆಯ ನಮ್ಮೊಡೆಯ ಅನಿತೇ ಅಲ್ಲ ।
ಮುಂದಭಾಗ್ಯರ ವಯದಿಕರನಿಡಿದು ಕರುಣೆಯಿಂ ಪೊರೆವ ಘನಪೊಡವೀಶ ।
ಕಂಧರದಿಯಿಸನುಂಡ ದಂಡಧ ನಂಜುಂಡ ಶ್ರೀಶೈಲಗಿರಿಮಲ್ಲ ।
ನಂದಣದಿ ಮೆರೆವಸೊಬಗಿನಾ ಜೆಲುಕಂದ ವಾಗೀಶಗುರುರಾಯರಾಯ ॥ ೩ ॥

ಕಂಡೆವ್ವೈ ಬಹುದಿನಕೆ ದಂಡ ಕಮಂಡಲುಧರಿಸಿ ಕರವೆರಡಲೀ ।
ಚಂಡಕಿರಣನಮಹೋದ್ಧಂಡ ಹರಿಪೀಠದಲಿ ರನ್ನಹೊನ್ನಿನಮುಕುಟ ಧರಿಸಿಶಿರದಲ್ಲಿ ।
ಮಂಡಿಸಿಕಂಡು ನಸುನಗುತ ಇಂಪಿಸಿಂಪೊಂಪಿನಿಂ
ಪಂಡಿತಾರಾಧ್ಯಘನಗುರುವರನೆ ಗುರುವರರ ಗುರುಧೀರತಾತ ಅಹುದುನೀಂ ।
ಗಂಡುಗವಿಮಂಡಲದ ಕಿರಿಚುಕ್ಕಿಗಳಜೆಳ್ಳಿ ವಾಗೀಶಗುರುರಾಯ ರಾಯ ॥ ೪ ॥

ಮುಕುಟಹೊತ್ತಾತಲೆಯು ಮುಳ್ಳಿನಾಪೆದೆಯಂತೆ ಎಳ್ಳಿನಿತುಸುಖವಿಲ್ಲವಂತೆ ।
ಮುಕುಟನೀಪೊತ್ತಿರುವುದಂತಹುದಲ್ಲ ಅಲ್ಲಲ್ಲವದು ಜೇರೆನರಗಣದಮುಕುಟ ।
ಅಕಟಕಟ ಎನ್ನೊಡೆಯನ್ಮೈದೋರೆಂದು ಕರವೆತ್ತಿ ಶಿರಬಾಗಿ ಒರಲುತಿರುವಾಗ ।
ಭಕುತರುಣ್ಣಿವ ಭವದ ದಳ್ಳುರಿಯ ನಾರಿಪಾಗುರುಮುಕುಟ ವರಮುಕುಟ ।
ಮುಕುಟನಿನ್ನದು ವೀರಧರ್ಮರಾಜ್ಯದಮುಕುಟ ವಾಗೀಶಗುರುರಾಯ ರಾಯ ॥ ೫ ॥

ದಂಡಧರಿಸಿಹರೆಲ್ಲ ಸುಲಿದುತಿಂಬುವರಂತೆ ಅಂಥವಲ್ಲವುನೀನುಧರಿಸಿರ್ಪದಂಡ ।
ಖಂಡಿಸುವಪಾಷಂಡ ಮತಗಣದದಂಡ ಪಾಪಿನರಗುರಿಗಳಿಗೆ ಯಮುನಭೀಕರ ದಂಡ ।
ಚಂಡಶೈವರಮತವ ಜೀವನದಬಾಗಿಸುವ ಹನನಸ್ಕೃತನ ಧರ್ಮಕೋದಂಡ ।
ನುಂಡೆಮಣಿಪರಿಗುಂಟು ನಿನ್ನಕೋಮಲಡಿ ನೆರೆಯು ಉಂಡು ತಣಿವರಿಗುಂಟು ನಿನ್ನಪ್ರೇಮನುಡಿ ಮೊರೆಯು ।
ಕಂಡುಕುಣಿವರಿಗುಂಟು ನಿನ್ನಪರತತ್ವದತೆರೆಯು ವಾಗೀಶಗುರುರಾಯರಾಯ ॥ ೬ ॥

ಜೋಳಿಗೆಯಪಿಡಿದವರು ತಿರಿದುಣ್ಣರೆಂದು ಕೀಳುನುಡಿಯಾಡುವರು ಅದುಬೇರೆ ಮಾತು ।
ಹಾಳುನಮ್ಮಯಬಾಳು ಕೀಳುಕೋಪಕೆತಳ್ಳಿ ಕೊರಳಿಸಿತು ಉರಳಿಸಿತು ಆಳದಲಿ ಹೂತು ।
ಬಾಳತಳಮುಳಿಸಿಬೇಯಿಸಿತು ಈ ವೇಳೆಯೊಳು ಅರಿಹದುಹೇಳಯ್ಯ ನಿನ್ನನುಳಿದು ।
ಜೋಳಿಗೆಯತಿಳಿದುಪ್ಪದಡ್ಡಿ ಪೆಡ್ಡಂತಿರುವ ನಿಜಬೋಧನೊರೆಹಾಲ ನೆರೆವಾ ಕಮಂಡಲದಿ ।
ಜೋಳ್ಳೈಸಿಮೇಲೆತ್ತು ಕರುಣ ಕಡಲೆರಾಯ ವಾಗೀಶಗುರುರಾಯ ರಾಯ ॥ ೭ ॥

ಎಲ್ಲಬಲ್ಲವರಿಲ್ಲ ಬಲ್ಲವರುಬಹಳಿಲ್ಲವೆಂದೂ ಸುಳ್ಳಲ್ಲ ಅಕವಿಯು ಸರ್ವಜ್ಞನಾ ಸೊಲ್ಲು ।
ಮಲ್ಲಿನಾಥಸುತನು ಅಗೋಚಿಲ್ಲಿ ಶ್ರೀಶೈಲಗಿರಿಯಲ್ಲಿ ಒಬ್ಬನೇ ನಿನ್ನುಳಿದುಇಲ್ಲ!
ಇಲ್ಲಿ ನಿನ್ನೆದೆಯೊಳೂನೆಲಸಿ ನಲಿದಾಟನಾಡುವನು ಕಲಿನೋಟನೋಡುವನು ಬಣ್ಣಿಸಲು ।
ಖುಲ್ಲಕಾಮರಸನಗೆ ಒಂದೆನಾಲಿಗೆ ಇರುದು ನಾನೇನಬಲ್ಲೆ ಸಾಸಿರದನಾಲಿಗೆಯ ಹಾವುನಾನಲ್ಲ ।
ಎಲ್ಲರೂ ನಿನ್ನರಿಯಲಾರಿಗಳವಲ್ಲ ಚಲ್ವವಾಗೀಶಗುರುರಾಯ ರಾಯ ॥೮॥

ಒಡೆಯಜಗದೊಡೆಯನೆನಿಸಿನೀಂ ಕೊಡುವುದಿನ್ನೇನಿಹುದು ಬೇಡುವೆನಗೆ ।
ಬಿಡುಹಂಬಲವಮನದಿ ಕೊಡಲೇನೆಂದು ಕೊರಗುವಿಚಾರಾಜೀಯಾ ।
ಕೊಡುಗೈಲಿ ಹಿಡಿಎಂದು ಕರುಣೆಯಂತೋರಿಸಿದರದು ಸಾಲದೆರಾಯ ।
ಕಡುಗಾಂಪನಾನಿನಗೆ ಬಹುಭಾರವೇ ಜಡೆಮುತ್ತಿನಾಕುಚ್ಚುಓಲಿಗದುಭಾರವೇ।
ಆಡಿಗಳೆರಡನುಪಿಡಿದು ಶರಣೆಂಬೆಬಿಡಬೇಡಕೈಯ್ಯ ವಾಗೀಶಗುರುರಾಯರಾಯ॥೯॥

ಗುರುಚರಣಧೂಳಿ,

**ಶಂಭುಲಿಂಗ.**

★ ● ಆಯುರ್ವೇದ ವಿಭಾಗ. ● ★

ಶ್ರೀಗುರು ಪಂಡಿತಾರಾಧ್ಯ ಪ್ರಸೀದತು

## ಅಮೃತಬಳ್ಳಿ ( ಅಮೃದಬಳ್ಳಿ )

( ಚಿಕಿತ್ಸಕ ವೀರಶೈವ ಧರ್ಮಾಲಯ ( ಆಯುರ್ವೇದ ವಿಭಾಗ )

ಕೈಲಾಸವಾಸಂ ಕಮನೀಯರೂಪಂ ।
ಶೀತಾಂಸು ಸಂಶೋಭಿತ ದಿವ್ಯ ಶೀರ್ಷವ್ ॥
ದುಃಖೋಪರೋಧಂ ಸುರಸಂಘಸೇವ್ಯಂ ।
ವನಸ್ಪತಿ ಸಾಂಬಶಿವಂ ಚ ವಂದೇ ॥೧॥

ಹಿಂದೂದೇಶದ ಎಲ್ಲಾ ಚಿಕಿತ್ಸೆಗಳಲ್ಲಿಯೂ ವನೌಷಧಿ ಚಿಕಿತ್ಸೆಯೇ ಉತ್ಕೃ ... ಮತ್ತು ಸುಲಭವಾದದ್ದು, ಇದಲ್ಲಿ ಆಯುರ್ವೈದ್ಯಶಾಸ್ತ್ರ ...

ರುಮಾಡಲ್ಪಟ್ಟ ಟಿಂಚರುಗಳೂ ಚೂರ್ಣಗಳೂ ಮಾತ್ರೆಗಳೇ ಮೊದಲಾದವುಗಳು ರೋಗಗಳನ್ನು ಗುಣಪಡಿಸುವದಕ್ಕಿಂತ ಹಸೀಮೂಲಿಕೆಗಳ ಸ್ವರಸಗಳೂ ನಾರು ಬೇರುಗಳು ಅತ್ಯದ್ಭುತವಾಗಿ ರೋಗಗಳನ್ನು ಗುಣಮಾಡುತ್ತವೆಂಬುದಕ್ಕೆ ದೃಷ್ಟಾಂತರ– ಒಂದುದಿನ ನಾನು ಕಟ್ಟಿಗೆಯನ್ನು ಒಡೆಯುತ್ತಾ ಅಜಾಗ್ರತೆಯಿಂದ ಕೊಡಲಿಯುಮನೆಯಿಂದ ನನ್ನ ಕಾಲು ಘಾಯ ಪಡೆದು ಸೋರುತ್ತಿರಲು ಕೂಡಲೆ ಆ ಘಾಯಕ್ಕೆ ಕಟ್ಟು ಕಟ್ಟಲು ಬಟ್ಟೆಯನ್ನು ಹುಡುಕಲು ಕಾಣದಿರಲು ಆಗ ಅಲ್ಲಿದ್ದ ಒಂದು ಮೂಲಿಕೆಯ ಎಲೆಯನ್ನು ತೆಗೆದುಕೊಂಡು ಘಾಯದಮೇಲೆ ಹಾಕಿ ಕಟ್ಟಿದೆನು, ಬಹು ಜಾಗ್ರತೆಯಾಗಿ ಘಾಯವು ಮಾಯವಾಯಿತು, ಹಾಗೆ ಮಾಡದಪಕ್ಷದಲ್ಲಿ ಘಾಯವು ವಾಸಿಯಾಗಲು ಬಹಳಕಾಲ ಬೇಕಾಗುತ್ತಿತ್ತು, ಆಹಾ! ಮೂಲಿಕೆಗಳ ಸಹಜವಾದ ಸತ್ವಗುಣವನ್ನು ಎಷ್ಟು ವರ್ಣಿಸಿದರೂ ತೀರದು' ಇಂಥ ನನ್ನೀ ಅನುಭವದ ಬೇಲಿಗಳಲ್ಲಿಯೂ, ಹಿತ್ತಲಲ್ಲೂ, ಮನೆಗಳ ಅಕ್ಕಪಕ್ಕಗಳಲ್ಲೂ ಸುಲಭವಾಗಿ ದೊರೆಯುವ ಮೂಲಿಕೆಗಳಿಂದ ಜಗತ್ತಿನ ಜನಗಳಿಗೆ ಪ್ರಯೋಜನವಾಗಿ ನಾನು ಶ್ರಮಿಸಿ ಬರೆವ ಈ ಲೇಖನವು ಸಾರ್ಥಕವಾಗಲೆಂದು ಆ ಜಗನ್ನಿಯಾಮಕನನ್ನು ಪ್ರಾರ್ಥಿಸುತ್ತೇನಲ್ಲದೆ ಈ ನನ್ನ ಸೇವೆಯನ್ನು ಪ್ರತಿ ತಿಂಗಳ ಈ ಪತ್ರಿಕೆಯ ಅವಲೋಕನದಿಂದ ಈ ಕೆಳಗೆ ವಿವರಿಸಿದ ಉಪಯೋಗವನ್ನು ಮಾಡಿ ತಮಗಾದ ಪ್ರಯೋಜನವು ಸಾರ್ಥಕವಾಗಲೆಂದು ಹಾರೈಸಿಸಿ ಮುಂದುವರಿಸುತ್ತೇನೆ.

## ಅಮೃತಬಳ್ಳಿ ( ಜನಿವಾರದ ಬಳ್ಳಿ )

| | |
|---|---|
| ಸಂಸ್ಕೃತ:— ಅಮೃತವಲ್ಲಿ | ಹಿಂದೀ:— ಗಿಲೋಯ್, ಗಡೂಚೀ |
| ಮರಾಠಿ:— ಗುಳವೇಲ್ | ಗುಜರಾಥಿ:— ಗಲೋ |
| ತೆಲಗು:— ತಿಪ್ಪತೀಗೆ | ತಮಿಳು:— ಶೀಂದಲ್‌ಕೋಡಿ |

ಇದು ತೋಟದ ಹಿತ್ತಲಬೇಲಿಮರಗಳಿಗೆ ಜನಿವಾರದಂತೆ ಹಬ್ಬಿರುತ್ತದೆ. :— ಇದರ ಎಲೆ ಚಿಕ್ಕ ವಿಳ್ಳೆಯದೆಲೆಯಂತೆ ಇರುತ್ತದೆ.

ಗುಣ :— ಬಲಕಾರಕ, ಮಲಶೋಧಕ, ತ್ರಿದೋಷನಾಶಕ, ರಸಾಯನ, ಅಗ್ನಿದೀಪಕ, ಮಧುರ, ಹೃದಯಕ್ಕೆಹಿತಕಾರಿ, ಆಯುಷ್ಪ್ರದವಾದದ್ದು, ಜ್ವರ - ದಾಹ - ರಕ್ತವಮನ, ವಾತ್ಯವ್ಯಾಧಿ, ಭ್ರಮೆ ಪಾಂಡುಪ್ರಮೇಹ, ಕಾಮಿಲಾ ಆಮ, ಕೆಮ್ಮು ಕುಷ್ಟ ಕ್ರಿಮಿ, ರಕ್ತಮೂಳೆಜಾಡ್ಯ, ವಾತರಕ್ತ ಕಂಡೂವಿಸರ್ಪ, ಪಿತ್ತ, ಕಫಗಳಿಗೆ ರಾಮಬಾಣ

ಇದರ ಸಮೂಲವನ್ನು ತಣ್ಣೀರಿನಲ್ಲಿ ನೆನೆಹಾಕಿ ಸ್ವಲ್ಪಹೊತ್ತು ಗಾಳಿಸಿ ತೆಗೆದು ಅದನ್ನು ದಿನಕ್ಕೆ ಮೂರಾವರ್ತಿ ಕುಡಿಯುವದು.



ಇದಕ್ಕೆ ಅಷ್ಟೇ ಲವಂಗ, ಚಕ್ಕೆ, ನೀರು ಇವೆಲ್ಲವನ್ನು

ಇದು ದೇಹದ ಅಶಕ್ತಿಗೂ, ಅಜೀರ್ಣರೋಗಕ್ಕೂ, ಸಾಧಾರಣ ಜ್ವರಕ್ಕೂ ಅರುಚಿಗೂ, ದೀರ್ಘಕಾಲದ ವಾತಕ್ಕೂ, ಒಳ್ಳೇ ಗುಣಕಾರಿಯು. ಇದರ ಸತ್ತ್ವವು ವಿಷಜಂತುಗಳು ಕಚ್ಚಿದ್ದಕ್ಕೆ ಒಳ್ಳೇ ಔಷಧವು, ಇದ್ದರ ಎಲೆಗಳನ್ನು ಅರೆದು ಜೇನು ತುಪ್ಪದಲ್ಲಿ ಕಲಿಸಿ ವ್ರಣಗಳಿಗೆ ಹಚ್ಚಿದರೆ ಒಳ್ಳೇದು.

ಅಮೃತಬಳ್ಳಿಯ ಘೃತದ ಅನುಪಾನದಿಂದ ವಾಯುವಿಗೂ ಕಲ್ಲುಸಕ್ಕರೆಯೊಡನೆ ಪಿತ್ತಕ್ಕೂ, ಜೇನುತುಪ್ಪದೊಡನೆ ಕಫಕ್ಕೂ ಬೆಲ್ಲದೊಡನೆ ಮಲಬದ್ಧತೆಗೂ ಚಿಟ್ಟಹರ ಳೆಣ್ಣೆಯೊಡನೆ ವಾತವ್ಯಾಧಿಗಳಿಗೂ ಶುಂಠಿಚೂರ್ಣದೊಂದಿಗೆ ಆಮವಾತಕ್ಕೂ ನಾಶ ಕಾರಿಯಾಗುವದು, ಅಮೃತಬಳ್ಳಿಯ ಅರ್ಕ ಸೇವಿಸಿದರೆ ಜಠರಾಗ್ನಿಯು ದೀಪನ ವಾಗುವದು, ಮಲವನ್ನು ನಿಲ್ಲಿಸುತ್ತದೆ, ಕಾಮ, ಪಾಂಡು, ಜ್ವರ ಇವುಗಳಿಗೆ ರಾಮಾಸ್ತ್ರವು. ಅಮೃತಬಳ್ಳಿಯನ್ನೂ ನಿಂಬೇಹಣ್ಣನ್ನೂ ಸಣ್ಣಾಗಿ ಕತ್ತರಿಸಿ ಅರ್ಧ ಶೀಸೆ ಬಿಸಿನೀರಿನಲ್ಲಿ ನೆನೆಹಾಕಿಟ್ಟು ಸೋಸಿಕೊಂಡು ಜ್ವರವಿರುವ ಸಮಯದಲ್ಲಿ ೧ ಔಂಸ ಈ ಕಷಾಯಕ್ಕೆ ೧೦ ಔಂಸ ಉಪ್ಪನ್ನು ಸೇರಿಸಿ ೨ ಘಂಟೆಗೆ ಒಂದಾವರ್ತಿ ೨-೩ ಸಾರೆ ಕೊಡಲು ಜ್ವರತಗ್ಗುವದು- ಈ ಜೀನಸುಗಳ ಜೊತೆಗೆ ಶ್ರೀಗಂಧದೊಡನೆ ತಣ್ಣೀರಿನಲ್ಲಿ ನೆನೆಯಿಟ್ಟು ಅದರಲ್ಲಿ ೧½ ಸಾರೆಗೆ ೧ ಔಂಸ ಪ್ರಕಾರ ಸೇವಿಸುತ್ತಾ ಬಂದರೆ ವಿಷಮಜ್ವರ, ಸನ್ನಿಪಾತಜ್ವರ ಮುಂತಾದವೆಲ್ಲ ಶಮನವಾಗುವವು. ಇದರ ಜೊತೆ ಯಲ್ಲಿ ಶುಂಠಿಕಷಾಯವನ್ನು ಸೇರಿಸಿ ಕುಡಿಯುವದರಿಂದ ಚಳಿಜ್ವರ ನಾಶವಾಗುವದು.

ಕೇವಲ ಈ ಬಳ್ಳಿಯ ಚೂರ್ಣವನ್ನು ಹಸುವಿನ ಹಾಲಿನಲ್ಲಿ ಹಾಕಿ ಸಕ್ಕರೆಬೆರಿಸಿ ಕುಡಿಸಲು ಮೇಹವಾಯು – ಬಹುಮೂತ್ರ – ಪಿತ್ತಪಾಂಡು ಇವು ತೊಲಗುವವು.

ಅಮೃತಬಳ್ಳಿ, ನೆಲ್ಲೀಚಿಟ್ಟು, ಜೀರಿಗೆ, ಶುಂಠಿ, ಮಾದಲದ ಎಲೆ ಇವನ್ನು ಸಮತೂಕವಾಗಿ ಸೇರಿಸಿ ಸಮಸಕ್ಕರೆಯನ್ನು ಸೇರಿಸಿ ಬೆಳಿಗ್ಗೆ ಪಾವಲಿ ತೂಕನ್ನು ಸೇವಿ ಸುವದರಿಂದ ವಾತವಿಕಾರ ಪರಿಹಾರವಾಗುವದು-

ಅಮೃತಬಳ್ಳಿಯಕ್ಷೀರ ಕಷಾಯಮಾಡಿ ನಿತ್ಯದಲ್ಲೂ ಸಕ್ಕರೆಬೆರಿಸಿ ಸೇವಿಸುತ್ತಾ ಬಂದರೆ ಸದಾಸೌಖ್ಯವಿರುವದು. ಅಮೃತಬಳ್ಳಿ ನೆಲ್ಲಿಚಟ್ಟು ಲಾವಂಚ ಮುಡಿವಾಳ ಇವುಗಳ ಕಷಾಯಮಾಡಿ ಅದರಲ್ಲಿ ಆಕಳತುಪ್ಪ ಎಳ್ಳೆಣ್ಣೆ ಕೊಬರೆಣ್ಣೆ ಇವನ್ನು ಸಮ ನಾಗಿ ಸೇರಿಸಿ ಮಿಶ್ರಣವನ್ನು ಸುರಿದು ತೈಲವಿಧಿಯಂತೆ ಪಾಕಮಾಡುತ್ತಾ ಇರುವಾಗ ದಾಲ್ಚಿನ್ನಿ ಲವಂಗ ಪತ್ರೆ ಯಾಲಕ್ಕಿ ನಾಗಕೇಸರ ತ್ರಿಫಲೆ ಇವುಗಳ ಸಮತೂಕದ ಚೂರ್ಣವನ್ನು ಸೇರಿಸಿ ಕೆಳಕ್ಕಿಳಿಸುವದು. ಇದರ ಅಭ್ಯಂಗಸ್ನಾನಮಾಡುವದರಿಂದ ಶಿರೋರೋಗಗಳು, ತಲೆತಿರುಗುವಿಕೆ, ಅಶಕ್ತಿ, ಜ್ವರ, ಸನ್ನಿಪಾತ, ಮನೋವಿಕಾರ ಗಳು ನಿರ್ನಾಮವಾಗುವವು.

ಅಮೃತಬಳ್ಳಿ, ಬೆಲ್ಲವತ್ತದಬೇರು, ಕೊನ್ನಾರೆಗಡ್ಡೆ ಕಳ್ಳಂಗಡಲೆ ಕೊತ್ತುಂಬರೆ

ಶುಂಠಿ ಇವುಗಳ ಕಷಾಯದಿಂದ ವಾತಜ್ವರ ವಾಸಿಯಾಗುವದು. ಅಮೃತಬಳ್ಳಿ ಕಚೋರ, ವೃದ್ಧದಾರು, ತ್ರಿಫಲೆ,ಶತಾವರಿ ಇವುಗಳ ಕಷಾಯದಲ್ಲಿ ಶುದ್ಧಿಗುಗ್ಗಲ ವನ್ನು ಸೇರಿಸಿ ಕುಡಿಸಲು ಸಂಧಿಕಸನ್ನಿಪಾತವು ತೊಲಗುವದು.

ಅಮೃತಬಳ್ಳಿ' ತ್ರಿಕಟುಕ, ಕಹಿಪಡುವಲ, ಇವುಗಳನ್ನು ಸಮಗೊಂಡ ಕಷಾಯ ವನ್ನು ಕುಡಿಸಲು ತಾಂದ್ರಿಕಸನ್ನಿಪಾತವು ಹರಣವಾಗುವದು.

ಅಮೃತಬಳ್ಳಿ, ನೆಲ್ಲಿಚಟ್ಟು, ಶುಂಠಿ, ಅಶ್ವಗಂಧಿ, ನೆಗ್ಗಿಲು ಇವನ್ನು ಸಮನಾಗಿ ಸೇರಿಸಿ ಕಷಾಯಮಾಡಿ ಕುಡಿಸಲು ಮೂತ್ರಕೃಚ್ಛ ಶಮನವಾಗುವದು.

ಅಮೃತಬಳ್ಳಿ, ಚಿತ್ರಮೂಲ, ಅಗಲುಶುಂಠಿ, ಅರಳುಮಾಡಿದ ಇಂಗು, ಕಟುಕ ರೋಹಿಣಿ, ಚಂಗಲಕೋಷ್ಟ ಇವನ್ನು ಸಮನಾಗಿಸೇರಿಸಿ ವಸ್ತ್ರಗಾಳಿತಮಾಡಿದ ಚೂ ರ್ಣವನ್ನು ಮುಕ್ಕಾಲುತೊಲೆಯಲ್ಲ ಆಕಳತುಪ್ಪದಲ್ಲಿ ಕಲಸಿ ಸೇವಿಸಲು ಘೃತಪ್ರಮೇಹ ನಿವೃತ್ತಿಯಾಗುವದು.

ಅಮೃತಬಳ್ಳಿ, ಯಾಲಕ್ಕಿ, ನೆಲ್ಲಿಚಿಟ್ಟು ಇವನ್ನು ಏಕೋತ್ತರವೃದ್ಧಿಯಾಗಿ ಸೇರಿಸಿ ಇವುಗಳ ಸಮತೂಕ ಶುದ್ಧ ಗುಗ್ಗಲವನ್ನು ಸೇರಿಸಿ ಜೇನುತುಪ್ಪದಲ್ಲಿ ಮೇಣ ದಂತೆ ಅರೆದು ಅರ್ಧತೊಲೆ ಜೇನುತುಪ್ಪದಲ್ಲಿ ಸೇವಿಸಲು, ಮೇಹರೋಗ, ಭಗಂದರ ಮುಂತಾದ ಎಷ್ಟೋ ಬಾಧ್ಯಗಳು ನಿವೃತ್ತಿಯಾಗುವವು.

ಲೇಖಕ:— ವೈದ್ಯರತ್ನ ಪಂಡಿತ ಯೋ. ಸಿದ್ದಪ್ಪಯ್ಯ ಹರಿಹರ.

---

## ಧರ್ಮರಾಜ್ಯಕ್ಕೆ ಚಂದಾದಾರರಾಗಿರಿ.

ವಾರ್ಷಿಕಚಂದಾ (೧—೪—೦) 1—4—0

### ಲೇಖಕಮಹಾಶಯರಲ್ಲಿ ವಿಜ್ಞಾಪನೆ.

ಮಹನೀಯರೇ :—

ಧಾರ್ಮಿಕ ಸಾಮಾಜಿಕ ನಾಟಕ ಕಾವ್ಯ ಕಾದಂಬರಿ. ಈ ವಿಷಯಗಳನ್ನೊಳಗೊಂಡ ಲೇಖಗಳನ್ನು ಕಳಿಸುವವರು ಲೇಖವನ್ನು ಮುದ್ದಾಗಿಯೂ ವಿರಳವಾಗಿ-ಯೂ ತಪ್ಪಿಲ್ಲದಂತೆಯೂ ಪ್ರತಿತಿಂಗಳು ೫ನೇ ತಾರೀಖಿನೊಳಗಾಗಿ ನಮ್ಮ 'ಧರ್ಮಾಲಯಕ್ಕೆ' ಕಳುಹಿಸಬೇಕು.

ಸರ್ವಮತೀಯರು ತಮ್ಮ ತಮ್ಮ ಮತಧರ್ಮಗಳ ಲೇಖನಗಳನ್ನು ಕಳಿಸಿದಲ್ಲಿ ಪ್ರಕಟಿಸುತ್ತೇವೆ.

## ೧೦.

# ನೀತಿಸಂಗ್ರಹ.



ಕನಕಸಿಂಹಾಸನದೋಳ್ ।
ಶುನುಕನ ತಂದಿರಿಸಿ ಪಟ್ಟಗಟ್ಟಲು ಮತ್ತಂ ॥
ಮನಕೆರಳಿ ಬೊಗಳ್ವುದಲ್ಲದೆ ।
ಘನತೆರಕೆಳಿಸುವದೆ ಮುಕ್ತಿ ರಾಮೇಶ್ವರನೇ ॥ ೧ ॥

ಚಿಂತಿ ಬಡತನಕೆ ಸಲ್ಲದು ।
ಭ್ರಾಂತಿನ ಸತಿಸುತರವರಿಜ್ಜಿ ಲೋಭಿತನ ಸಲ್ಲದು ॥
ಪಂಕ್ತಿಯೊಳು ಭೇದ ಸಲ್ಲದು ।
ಸಂತೆಯೊಳೇಕಾಂತ ಸಲ್ಲದು ಶ್ರೀ ಗೌರೀಶ ॥ ೨ ॥

ಬಲುಬಿಸಲಸುಣ್ಣ ಸಲ್ಲದು ।
ಹೊಲೆಯಗೆ ಸಾಲವನು ಕೊಟ್ಟು ನೆಚ್ಚಿರಸಲ್ಲದು ॥
ಗೆಲವಿನೊಳು ಜೂಜಸಲ್ಲದು ।
ಜುಲುಮೆಯ ಸ್ತ್ರೀಸಂಗ ಸಲ್ಲದು ಶ್ರೀ ಗೌರೀಶ ॥ ೩ ॥

ಹುಣ್ಣಿವೆಯೊಳೋದಸಲ್ಲದು ।
ಕಣ್ಣಿಲ್ಲದವಗ ಪಾರುಪತ್ಯ ಪಲ್ಲದು ॥
ಹೆಣ್ಣಿಗೆ ಮೈಭಾರ ಸಲ್ಲದು ।
ಕಣ್ಣಿನವೌಷಧವು ಸಲ್ಲದು ಶ್ರೀ ಗೌರೀಶ ॥ ೪ ॥

ನೀತಿಯನರಿವವನೆ ಪುರುಷಂ .
ಮಾತುಗಳ ಕೆಡಿಸಿ ನುಡಿಯದಾತನೆ ಚತುರಂ ॥
ಪ್ರೀತಿಯಮಾಳ್ಪನೆ ನೆಂಟಂ ।
ಭೀತಿಯೊಳಿಪ್ಪವಳೆ ಹೆಣ್ಣು ಶ್ರೀ ಗೌರೀಶ ॥ ೫ ॥

ಚಲುವಾವುದು ಸಚ್ಚರಿತಂ ।
ಬಲವಾವುದು ಸಕಲ ಕಲಿಯನರಿವುದು ಮೋಕ್ಷದ ॥
ನಿಲೆಯಾವುದು ಕ್ಷಮಬದುಕಿನ ।
ಫಲವಾವುದು ಪರಹಿತಾರ್ಥ ಸುಜನೋತ್ತಮಂ [illegible] ॥ ೬ ॥

ಕರಕಿರಿಯ ನಾದವಾಗಲಿ ।
ಗರ್ವತನ ವಿದ್ಯಾ ಬುದ್ಧಿ ಸ್ಥೈರಣೆಯುಳ್ಳಡೆ ॥
ಹಿರಿಯತನಕೆ ಯರಡುಕ್ಕೊಡೆ ।
ಮರಮುದ್ದ ಮನುಜನೇಕೆ ಸುಜನೋತ್ತಂಸ ॥ ೭ ॥

ತಾನುಣಲಿಲ್ಲದ ಬರನಂ ।
ತಾನಳಿವಾದಂಮ ಮೂರುಲೋಕಂ ಶೂನ್ಯಂ ॥
ತಾಮುಳುದಾದೆ ಸಮುದ್ರಂ ।
ತನಗಾಗದ ನೆಂಟನೇಕೆ ಸುಜನೋತ್ತಂಸ ॥ ೮ ॥

ಗಂಡಗಿಕ್ಕದ ಮಕ್ಕಳ ।
ಕಂಡಾಗಲೆ ಬಯ್ದು ಹೊಯ್ದು ಮನೆವಡೆವೆರ್ಗಂ ॥
ಕಂಡರಿಗಿಕ್ಕಿ ಕೆಡಿಸುವ ।
ಹೆಂಡತಿಯನು ಆಳುತಿಪ್ಪ ಗಂಡ ಬಂಡಂ ॥ ೯ ॥

ಕುವರಿ ಸತಿಯೆತ್ತು ಬಂಡಿಯು ।
ಕರಯೆಮ್ಮಿಯು ಅನ್ಯಗ್ರಹದೊಳುಯಿರಸಲು ಮತ್ತಂ ॥
ಕರೆಯದೆ ಹಡಿದೆ ಹೆರದೆ ।
ನರಿಯದೆ ಹಲ್ಲಣಿಸದಿಹರೆ ಸುಜನೋತ್ತಂಸ ॥ ೧೦ ॥

ಶ್ರೀ ಶಂಕರ ಕೊಣ್ಣೂರು.

ಪರಗರಾತಿಗುಂಡು ಪಗಲಗೊಟ್ಟಗವಚ್ಚು ।
ಕೊಂಡಲನ್ನಿಯ ಪಿಂಡಿ ಕೊಟ್ಟವಚ್ಚು ।
ಕಠಿನಚಿತ್ತುನಿಮನಸು ಕರಗಿಂಪಗಾ ರಾದಯ್ಯ ।
ವಿಶ್ವದಾಭಿರಾಮ ವಿನುರವೇಮ ॥ (ಶ್ರೀ ಹರಿಹರ.)

# "ಚಂದಾದಾರರಲ್ಲಿ ವಿಜ್ಞಾಪನೆ"

ಪ್ರಿಯ ಮಹಾಶಯರೆ :-

ಇನ್ನು ಮುಂದೆ ನಮ್ಮ "ಧರ್ಮರಾಜ್ಯ" ಮಾಸ ಪತ್ರಿಕೆಯುಕ್ರಮವಾಗಿ ಪ್ರತಿತಿಂಗಳೂ ತಪ್ಪದೆ ತಾ|| ೨೦ ಕ್ಕೆ ಪ್ರಕಟವಾಗುವದು. ಇಲ್ಲಿಯ ವರೆಗೂ ನಮ್ಮ ಪತ್ರಿಕೆಯು ರಿಜಿಷ್ಟರ್ ಆಗದೇ ಇದ್ದುದರಿಂದ ನಮ್ಮ ಪತ್ರಿಕೆಯು ಸರಿಯಾಗಿ ಚಂದಾದಾರರಿಗೆ ಮುಟ್ಟುತ್ತಿದ್ದಿಲ್ಲ, ಈಗ ರಿಜಿಷ್ಟರ್ ಆಗಿರುವಮೂಲಕ ನಮ್ಮ ಎಲ್ಲಾ ತೊಂದರೆಗಳುತಪ್ಪಿ ಇನ್ನು ಮುಂದೆ ಸರಿಯಾಗಿ ಎಲ್ಲಾ ಚಂದಾದಾರರಿಗೂ ಮುಟ್ಟುವವು ಎಂದಿನಂತೆ ತಾವುಗಳು ಸಹಾನುಭೂತಿ ಸಹಕಾರಗಳನ್ನು ಎಸಗುವಿರಾಗಿಯೂ ಮತ್ತು ತಾವು ತಮ್ಮ ಮಿತ್ರ ಬಾಂಧವರೆಲ್ಲರಲ್ಲಿಯೂ ನಮ್ಮ ಪತ್ರಿಕೆಯ ಪ್ರಚಾರವನ್ನುಮಾಡಿ ನಮ್ಮ ಪತ್ರಿಕೆಯ ಸಂಖೆಯನ್ನುಹೆಚ್ಚಿಸಿ ಸಮಾಜಸೇವೆಯಲ್ಲಿ ತೊಡಗಿರುವಂಥ ನಮಗೆ ಸಹಾಯಮಾಡುವಿರಾಗಿ ಬೇಡುತ್ತೇನೆ.

ತಮ್ಮ ವಿನೀತ ಸಂಪಾದಕ,

M. V. Mathad.

ಧರ್ಮರಾಜ್ಯ

ಶ್ರೀಮಜ್ಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು

## ಶ್ರೀಶೈಲ ಸೂರ್ಯಸಿಂಹಾಸನಾಧೀಶ್ವರ ಶ್ರೀ ೧೦೮ ಜಗದ್ಗುರು ವಾಗೀಶ ಪಂಡಿತಾರಾಧ್ಯ ಶಿವಾಚಾರ್ಯ ಮಹಾಸ್ವಾಮಿಗಳವರ :—

# ದಸರಾ ಮಹೋತ್ಸವವು

## ಮುದೇನೂರು.



ಈ ಮೊದಲು ಪತ್ರಿಕೆಯಲ್ಲಿ ಪ್ರಸಿದ್ಧಪಡಿಸಿದಂತೆ ಧಾರವಾಡ ಜಿಲ್ಲಾ ರಾಣೇಬೆನ್ನೂರು ತಾಲೂಕು ಕಸ್ಬೈಕಿ ಮುದೇನೂರು ಗ್ರಾಮದಲ್ಲಿ ಇದೇ ೧೮೬೨ ನೇ ವಿಕ್ರಮ ಸಂವತ್ಸರದ ಅಶ್ವಯುಜ ಶು|| ಪ್ರತಿಪದದಿಂದ ವಿಜಯದಶಮಿಯ ವರೆಗೆ ಶ್ರೀ ಶೈಲ ಜಗದ್ಗುರಗಳವರ ದಸರಾಮಹೋತ್ಸವವು ಅತಿವಿಜೃಂಭಣೆಯಿಂದ ನೆರವೇರಿತು.

ಈ ಗ್ರಾಮದ ಸರ್ವಮತೀಯ ಸದ್ಭಕ್ತಮಂಡಳಿಯು ಮಹಾಸ್ವಾಮಿಯ ಆಗಮನವನ್ನು ನಿರೀಕ್ಷಿಸುತ್ತಿರುವಲ್ಲಿ ಹರಿಹರಮಾರ್ಗವಾಗಿ ಸನ್ನಿಧಾನದ ಆಗಮವಾದ ಕೂಡಲೆ ಜಗದ್ಗುರುಗಳವರ ಜಯಘೋಷದೊಡನೆ ಪ್ರಮುಖರು ಪುಸ್ತಕಪಾಲವನ್ನು ಒಪ್ಪಿಸಿ ದರ್ಶನಾಲಾಭದಿಂದುಂಟಾದ ಆನಂದವನ್ನು ವ್ಯಕ್ತಗೊಳಿಸಿ ಗ್ರಾಮಪ್ರವೇಶಕ್ಕೆ ಪ್ರಾರ್ಥಿಸಿದಕೂಡಲೇ ಶೃಂಗರಿಸಲ್ಪಟ್ಟ ಆಂದೋಲಿಕಾ (ಪಲ್ಲಕ್ಕಿ) ಆರೋಹಣವಾಯಿತು. ಆಗ ಅನೇಕ ಗ್ರಾಮಗಳ ಭಜನಾಸಂಘಗಳ ಜಯಘೋಷದಿಂದಲೂ ಅನೇಕ ವಾದ್ಯ ವೈಭವಗಳ ಸಮುದಾಯದಿಂದಲೂ ಉಂಟಾದ ಧ್ವನಿಯು ಬಹು ಗಂಭೀರವಾಗಿತ್ತು,

ಈ ರೀತಿಯಾಗಿ ಉತ್ಸವವು ತಳಿರು ತೋರಣಗಳಿಂದಲಂಕೃತವಾಗಿದ್ದ ಪ್ರತಿಯೊಂದು ಬೀದಿಗಳಲ್ಲಿ ಸಾಗುವಾಗ ಸುಮಂಗಲೆಯರು ಆರತಿಯನ್ನು ಬೆಳಗುತ್ತಿದ್ದರು. ಸದ್ಭಕ್ತರು ಫಲಾದಿಗಳನ್ನು ಅರ್ಪಿಸುತ್ತಿದ್ದರು. ಶ್ರೀ ಮಹಾಸನ್ನಿಧಿಯು ಭಕ್ತರ ಭಕ್ತಿಗೆ ಆನಂದಪಟ್ಟು ಹಸನ್ಮುಖಿಗಳಾಗಿ ಆಶೀರ್ವದಿಸುತ್ತಿದ್ದರು. ಇದಲ್ಲದೆ ಎಲ್ಲ ಬೀದಿಗಳಲ್ಲಿ ಸಾಗಿ ರಂಭಾಸ್ತಂಭಗಳಿಂದಲೂ, ತಳಿರುತೋರಣಗಳಿಂದಲೂ, ಅನೇಕ ಪುಷ್ಪಮಾಲಿಕೆಗಳಿಂದಲೂ, ಅಲಂಕೃತವಾಗಿದ್ದ, ಸಭಾಮಂಟಪಕ್ಕೆ ಬಿಜಯಂ

ಗೈಸಿ, ಬಹುಸುಂದರವಾಗಿ ರಚಿಸಲ್ಪಟ್ಟ ಉನ್ನತ ಪೀಠವನ್ನು ಸರ್ವರ ಜಯಘೋಷ ದೊಡನೆ ಆರೋಹಣಮಾಡಿದರು. ಆಮೇಲೆ ಶ್ರೀ ಮಹಾಸನ್ನಿಧಿಯವರು ಸದ್ಭಕ್ತ ರಿಗೆ ಶ್ರೇಯಸ್ಸನ್ನು ಕೋರಿದ ತರುವಾಯ ಅನುಷ್ಠಾನ ಸಮಯವಾದ್ದರಿಂದ ಅಂದಿನ ಸಭೆಯು ಸಮಾಪ್ತಗೊಳಿಸಲ್ಪಟ್ಟಿತು.

ಮರುದಿವಸ ಗುರುವಾರ ಪದ್ಧತಿಯಪ್ರಕಾರವಾಗಿ ಸಾಯಂಕಾಲ ೩ ಘಂ ಗೆ ಸಭೆಯುಪ್ರಾರಂಭವಾಗಿ ಚಿಕ್ಕಮಣ್ಣೂರು ಬೃಹನ್ಮಠಾಧ್ಯಕ್ಷರಾದ ಶ್ರೀ॥ ಷ॥ ಬ್ರ॥ ಗುರುದೇವ ಶಿವಾಚಾರ್ಯರು ಗುರುದರ್ಶನ ದಿಂದ ಲಾಭವೇನು ಎಂಬ ಮುಂ ತಾದ ವಿಷಯಗಳಲ್ಲಿ ಬಹು ಸುಲಲಿತವಾಗಿ ಶ್ರೋತೃವೃಂದಕ್ಕೆ ಆನಂದವಾಗುವಂತೆ, ವ್ಯಾಖ್ಯಾನಮಾಡಿದರು. ಆತರುವಾಯ ಶ್ರೀ ಮಹಾಸನ್ನಿಧಿಯು ಪ್ರಸಾದವಾಣಿ ಯಿಂದ "ಶ್ರೀ ಜಗದ್ಗುರು ಪಂಚಾಚಾರ್ಯರ ಅವತಾರ" ಎಂಬ ವಿಷಯದಲ್ಲಿಯೂ "ಜಗದ್ಗುರುತ್ವ ಅಂದರೇನು" ಎಂಬ ವಿಷಯದಲ್ಲಿಯೂ, ಜನಸೇವೆಯಿಂದ ಆಗುವ ಮಹತ್ತರವಾದ ಫಲವಿಷಯದಲ್ಲಿಯೂ ಎಂತಹ ನಾಸ್ತಿಕ ನಾದರೂ ಆಸ್ತಿಕನಾಗುವಂತೆ, ಅನೇಕ ಲೌಕಿಕ ಉದಾಹರಣೆಗಳೊಂದಿಗೆ ಸುಗಮ ಶೈಲಿಯಿಂದ ಬೋಧಿಸಿದರು. ಆಮೇಲೆ ಅಂದಿನ ಸಭೆಯು ಮಂಗಲಪೂರ್ವಕ ವಿಸರ್ಜನೆಯಾಯಿತು.

ಇದರಂತೆ ಪ್ರತಿನಿತ್ಯದಲ್ಲಿಯೂ ವೇ. ಬ್ರ. ಶ್ರೀ. ಸಿದ್ಧಾಂತ ರುದ್ರಾರಾಧ್ಯ ಶಾಸ್ತ್ರಿಗಳವರು ಬಸವನಾಳ ಮಠ ಇವರು ಅಷ್ಟಾವರಣಗಳಲ್ಲಿ ಪ್ರಥಮ ಆವರಣ ವಾದ 'ಗುರು' ಎಂಬ ವಿಷಯದಲ್ಲಿಯೂ, ವೇ. ಧರ್ಮರತ್ನ ಆಸ್ಥಾನ ವಿದ್ವಾನ್ ಉಮಚಿಗಿ ಮಳೇಮಠದ ಶಂಕರಶಾಸ್ತ್ರಿಗಳವರು ಇದೇ ಗುರು ಎಂಬ ವಿಷಯದಲ್ಲಿ ಉಪನ್ಯಾಸಮಾಡಿದರು. ಆಮೇಲೆ ಶ್ರೀಯುತ ಹಲಗೇರಿ ವೀರಪ್ಪನವರು "ಐಕ್ಯ-ಮತ್ಯ" "ಲಿಂಗತತ್ವ" ಈ ವಿಷಯಗಳಲ್ಲಿ ಬಹುಸ್ವಾರಸ್ಯವಾದ ಉಪನ್ಯಾಸಮಾಡಿ ದರು ಮತ್ತು ಸಂಸ್ಥಾನದ ಸರ್ವಾಧಿಕಾರಿಗಳಾದ ಶ್ರೀಯುತ ಮಲ್ಲಯ್ಯನವರು "ಪರೋಪಕಾರ" ಎಂಬ ವಿಷಯದಮೇಲೆ ಭಾಷಣಮಾಡಿದರು ನಂತರ ಮುತ್ತನಾಳ ಹಿರೇಮಠದ ಶ್ರೀ. ಷ. ಬ್ರ. ಪಟ್ಟಾಧ್ಯಕ್ಷ ಗುರುಶಾಂತ ಶಿವಾಚಾರ್ಯರವರು "ಗುರುಪ್ರಭಾವ" ಎಂಬ ವಿಷಯದಮೇಲೆ ಪ್ರತಿಪಾದಿಸಿದರು.

ಆಮೇಲೆ ಸೊಲ್ಲಾಪುರದ 'ಆಚಾರತತ್ವ ವಿಶಾರದೆ' ಎಂಬಬಿರುದಾಂಕಿತ ರಾದ ಸೌ॥ ಭಾಗೀರಥಿದೇವಿಯವರು ಕಟಾಪಯಿಯವರು 'ಗುರುಸೇವೆ' ಎಂಬ ವಿಷಯ ದಲ್ಲಿ ಆಬಾಲವೃದ್ಧರಿಗೆ ಸುಲಲಿತವಾಗಿಯೂ ಸುಗಮವಾಗಿಯೂ ಅನೇಕ ಲೌಕಿಕ ಉದಾಹರಣೆಗಳೊಂದಿಗೆ ಅವಿಚ್ಛಿನ್ನವಾಗಿ ಒಂದುವರೆ ಘಂಟೆಯವರೆಗೂ ಭಾಷಣ ಮಾಡಿದರು.

ಈ ಎಲ್ಲ ದಿವಸಗಳಲ್ಲಿಯೂ ಶ್ರೀಮಹಾಸನ್ನಿಧಿಯು ಸರ್ವಭಾಷಣಕರ್ತರುಗಳ ಭಾಷಣವನ್ನು ಸಮಾರೋಪಣ ಮಾಡುತ್ತ "ಅಷ್ಟಾವರ್ಣ ಪಂಚಾಚಾರ" ಈ ವಿಷಯಗಳಲ್ಲಿ ಅವಿಚ್ಛಿನ್ನವಾಗಿ ಸರ್ವರಿಗೂ ಬೋಧವಾಗುವಂತೆ ಅನೇಕ ಲೌಕಿಕ ಉದಾಹರಣಗಳ ಪೂರ್ವಕ ವ್ಯಾಖ್ಯಾನ ರೂಪದಿಂದ ಅಪ್ಪಣೆಕೊಡಿಸುವಾಗ ಆನಂದವನ್ನು ವ್ಯಕ್ತಗೊಳಿಸುತ್ತಿರುವಲ್ಲಿ "ಶ್ರೀ ಮಹಾಸನ್ನಿಧಿಯವರ" ಅಭಿದಾನದಲ್ಲಿ ಅಡಕವಾಗಿರುವ "ವಾಗೀಶ" ಎಂಬುದು ಸಾರ್ಥಕವಾಗಿದೆಯೆಂದು ಜನರು ತಮ್ಮ ತಮ್ಮೊಳಗೆ ಮಾತನಾಡಿಕೊಳ್ಳುತ್ತಿದ್ದರು.

ಪ್ರತಿನಿತ್ಯ ಬೆಳಗಿನ ಜಾವದಲ್ಲಿ ಅನೇಕ ವಾದ್ಯಗಳೊಂದಿಗೆ ಆಯುಧಪೂಜೆ ಧ್ವಜಾದಿಗಳ ಪೂಜೆಯು ಕ್ರಮದಿಂದ ಸಂಸ್ಥಾನ ಸಕಲ ಸಿಬ್ಬಂದಿ ಸಹಿತವಾಗಿ ಅಧಿಕಾರಿಜನರ ಮುಜರೇಗಳೊಡನೆ ನಡೆಯುತ್ತಿದ್ದವು.

ಇನ್ನು ವಿಜಯದಶಮಿಯ ಪ್ರಾತಃಕಾಲದಿಂದ ಮಧ್ಯಾಹ್ನದ ಎರಡು (೨) ಘಂಟೆಗಳವರೆಗೂ ಅನೇಕವಾದ್ಯಗಳೊಂದಿಗೆ ಪೂಜಾನುಷ್ಠಾನವೈಭವವು ನಡೆದು ತರುವಾಯ ಮಧ್ಯಾಹ್ನದ ನಾಲ್ಕು (೪) ಘಂಟೆಯಿಂದ ಸಕಲಬಿರುದಾವಳಿಸಮೇತವಾಗಿ ಅನೇಕತರಹದ ವಾದ್ಯಗಳಿಂದಲೂ ಅನೇಕ ಗ್ರಾಮಗಳ ಭಜನಾಮಂಡಲಗಳಿಂದಲೂ ಮಂಗಲಸೂಚಕವಾದ ಆರತಿಯನ್ನು ಹಿಡಿದಿರುವ ಅನೇಕ ಸುಮಂಗಲೆಯವರ ಸಮೂಹದಿಂದ್ಯುಕ್ತವಾಗಿ ಆಂದೋಲಿಕೋತ್ಸವವು ಹೊರಟು ಬನ್ನಿಮಂಟಪಕ್ಕೆ ತಲ್ಪಿತು. ಅಲ್ಲಿ ವೈದೀಕರು ವೇದಮಂತ್ರಗಳನ್ನು ಪಠಿಸುತ್ತಿರಲು ಶ್ರೀ ಮಹಾಸನ್ನಿಧಿಯವರು ಶಮೀಪೂಜೆಯನ್ನು ವಿಧ್ಯುಕ್ತವಾಗಿ ನೆರವೇರಿಸಿ ಪುನಃ ಬನ್ನಿಮಂಟಪದಿಂದ ಮಹೋತ್ಸವವು ಊರುಮುಖ್ಯಬೀದಿಗಳಲ್ಲಿ ಸಾಗಿ ಸಭಾಮಂಟಪಕ್ಕೆ ತಲ್ಪಿ ಶ್ರೀ ಮಹಾಸನ್ನಿಧಿಯವರು ಭಜನಸಂಘದವರ ಜಯಘೋಷದೊಡನೆ ಸಿಂಹಾಸನವನ್ನು ಅಲಂಕರಿಸುವಾಗ ಅನೇಕ ವಾದ್ಯಗಳು ಭೋರ್ಗರೆಯುತ್ತಿದ್ದವು.

ಆಮೇಲೆ ಸಂಗೀತ ವಿದ್ವಾನ್ ಕರೂರು ಗುರುಬಸವಗವಾಯಿಗಳವರ ಸಂಗೀತಕಚೇರಿಯು ಅರ್ಧಘಂಟೆಯವರೆಗೆ ನಡೆದು ಸಭಿಕರಿಗೆ ಆತ್ಮಾನಂದವನ್ನುಂಟುಮಾಡಿತು ನಂತರ ಬಸವನಾಳುಮಠಾಧ್ಯಕ್ಷರಾದ ರುದ್ರಾರಾಧ್ಯ ಶಾಸ್ತ್ರಿಗಳವರು ಪ್ರಾಸ್ತಾವಿಕ ಭಾಷಣವಾದನಂತರ ಹುಬ್ಬಳ್ಳಿ ಪಿ. ಐ. ಹಿರೇಮಠ ಹೈಕೋರ್ಟವಕೀಲರು "ಜಗದ್ಗುರುತ್ವ" ಎಂಬ ವಿಷಯದಲ್ಲಿ ಬಹಳ ಮನೋಹರವಾಗಿ ಭಾಷಣಮಾಡಿದರು. ಆನಂತರ 'ಆಚಾರತತ್ವವಿಶಾರದಾ' ಎಂಬ ಬಿರುದಾಂಕಿತರಾದ ಸೌ. ಭಾಗೀರತಿದೇವಿಯವರು ಕಟಾಪ್ ಸೊಲ್ಲಾಪುರ ಯಿವರು 'ಸ್ತ್ರೀನೀತಿ' ಎಂಬ ವಿಷಯದಲ್ಲಿ ವ್ಯಾಖ್ಯಾನ ನಡಿಸುತ್ತ ... ವಾಗ ಅನೇಕಜನ ಸ್ತ್ರೀಯರು ... ದೃಷ್ಟಾಂತಗಳನ್ನು ... ಸುತ್ತಿದ್ದರು

ಹಾಗೂ ಪುರುಷವರ್ಗವೂ ಕೂಡ ಸ್ತ್ರೀಯರಲ್ಲಿ ಇಂಥವ್ಯಕ್ತಿಯನ್ನು ಎಲ್ಲಿಯೂ ನೋಡ ಲಿಲ್ಲವೆಂದು ಆಶ್ಚರ್ಯಪಟ್ಟು ಅವರ ವಿದ್ವತ್ತಿಗೆ ತಲೆದೂಗುತ್ತಿದ್ದರು .ಹಾಗೂ ಶ್ರೀ ಸನ್ನಿಧಿಯವರೇ ಭಾಗೀರಥಿದೇವಿಯವರ ಗುಣಕಥನವನ್ನು ಅತ್ಯಾನಂದದಿಂದ ಮಾಡಿ ಅವರಬೋಧೆಯಂತೆ ನಡೆಯಬೇಕಾಗಿ ಸ್ತ್ರೀ ಪುರುಷರಿಗೂಕೂಡ ಅಪ್ಪಣೆ ಯನ್ನು ಕೊಡಿಸಿದರು ಆಮೇಲೆ ಯೋಗಾಸನಗಳ ಪ್ರದರ್ಶನವುನಡೆದು ಸಭಿಕರಿಗೆ ಆನಂದವನ್ನುಂಟುಮಾಡಿತು. ತದನಂತರ ಶ್ರೀ ಸನ್ನಿಧಿಯವರ ಅಪ್ಪಣೆಪ್ರಕಾರ ಸಂಸ್ಥಾನದ ಸರ್ವಾಧಿಕಾರಿಗಳವರಾದ ಶ್ರೀ ಮಲ್ಲಯ್ಯನವರೂ ಹುಜೂರು ಶಿಕ್ರೆಟರಿ ಗಳಾದ ರಾಯದುರ್ಗ ಹಿರೇಮಠದ ರಾಮಗಿರಿ ಮುರುಗೇಂದ್ರಯ್ಯನವರೂ ಗವಾಯಿ ಗಳವರಾದ ಹಿರಿಯಮಠದ ಗುರುಬಸಯ್ಯನವರಿಗೆ 'ಗಾನಗಂಧರ್ವ, ಎಂಬ ಪ್ರಶಸ್ತಿ ಯನ್ನು ಮತ್ತು ಹರಿಹರದ ಮೂಲೆಮಠದ ಶಿದ್ದಯ್ಯನವರಿಗೆ "ವೈದ್ಯರತ್ನ" ಎಂಬ ಪಶಸ್ತಿಯನ್ನು ಮತ್ತು ಬಸವನಾಳು ಮಠಾಧ್ಯಕ್ಷ ವೇ. ಶಿದ್ಧಾಂತಿರುದ್ರಾರಾಧ್ಯರವರಿ- ಗೆ "ಜ್ಯೋತಿರ್ಮಾರ್ತಾಂಡ"ಎಂಬಪ್ರಶಸ್ತಿಯನ್ನು ಜರತಾರಿಶೆಲ್ಲೆಗಳೊಡನೆ ಕೊಟ್ಟರು ಹಾಗೂ ಧರ್ಮರತ್ನ ಉಮಚಿಗಿ ಮಳೇಮಠದ ಪಂ. ಆ|| ವಿ|| ಶಂಕರಶಾಸ್ತ್ರಿಗಳವರಿಗೆ ಕೃಪಾಶೀರ್ವಾದವು ಶಾಲಿನರೂಪದಿಂದ ದೊರೆಯಿತು ಮತ್ತು ಹನಗವಾಡಿ ಕೆ. ಕೊಟ್ರ ಪ್ಪನವರು ಶ್ರೀ ಸನ್ನಿಧಿಯಲ್ಲಿ ನವರತ್ನಮಾಲಿಕೆ ಎಂಬ ಕವಿತೆಯನ್ನು ರಚಿಸಿ ಒಪ್ಪಿಸಿದ್ದ ರಿಂದ ಶ್ರೀ ಮಹಾಸನ್ನಿಧಿಯವರು ಆನಂದಭರಿತರಾಗಿ ಕಲಾಬತವುಡುಗುರೆಯನ್ನು ಆಶೀರ್ವದಿಸಿದರು ನಂತರ ಮರುದಿವಸಸಾಯಂಕಾಲ ಏಳು (೭) ಘಂಟೆಗೆ ಜನರ ಆಗ್ರಹದಮೇರೆಗೆ ಪುನಃ ಎರಡುದಿವಸನಿಂತು ಸೌ|| ಭಾಗೀರಥಿ ದೇವಿಯವರು "ವಿದ್ಯಾ" ಕ್ಕೆ "ಪಾತೀವ್ರತ್ಯ" ಈ ವಿಷಯಗಳಲ್ಲಿ ಬಹುಮನೋಹರವಾಗಿ ಭಾಷಣ ಮಾಡಿದಮೇಲೆ ಶ್ರೀ ಸನ್ನಿಧಿಯವರು ಸಮಾರೋಪಣ ಭಾಷಣಮಾಡಿ ಅಂದಿನಕಾರ್ಯ ವನ್ನು ಮಂಗಲದೊಡನೆ ಪೂರೈಸಿದರು ಶ್ರೀ ಸನ್ನಿಧಿಯವರಿಗೆ ಈ ಹತ್ತು ದಿವಸಗಳ ವರೆಗೂ ಸೇವೆಯನ್ನು ಸಮರ್ಪಿಸಿದ ಮುದೇನೂರು ಹಾಗೂ ದಾವಣಗೇರಿ, ಹರಿಹರ, ರಾಣೇಬೆನ್ನೂರು, ಬ್ಯಾಡಿಗಿ, ಚಳ್ಳಕೇರಿ, ಕರೂರು, ಹಾವೇರಿ, ಹುಬ್ಬಳ್ಳಿ ಮುತ್ತನಾಳು ಸೊಲ್ಲಾಪುರ ಹುಲಗೂರು ಇತ್ಯಾದಿ ಸುತ್ತು ಮುತ್ತಲಿನ ಮೂರು,ನಾಲ್ಕು ಸಾವಿರ ಜನರು ಈ ಮಹೋತ್ಸವದಲ್ಲಿ ಭಾಗಿಗಳಾಗಿದ್ದರು. ಇವರಿಗೂ ಮತ್ತೂ ಸಮಸ್ತ ದೈವದವರಿಗೂ ಸಂಸ್ಥಾನದ ಸರ್ವಾಧಿಕಾರಿ ಮತ್ತೂ ಹುಜೂರುಶಿಕ್ರೆಟರಿ ಮತ್ತೂ ಸರ್ವನೌಕರರಿಗೂ ಆಯುರಾರೈಶ್ವರ್ಯಾದಿ ಸಕಲಸಮೃದ್ಧಿಯಾಗಲೆಂದು ಅತ್ಯಾನಂದದಿಂದ ಆಶೀರ್ವದಿಸಿ ಈ ಉತ್ಸವವು "ಮಲ್ಲಿಕಾರ್ಜುನ" ಕೃಪೆಯಿಂದ ನಿರ್ವಿಘ್ನವಾಗಿ ಇಂದು ಸಮಾಪ್ತಿಯಾಯಿತೆಂದು ಬೋಧಿಸಿ ತರುವಾಯ ಮಂಗಲಾ- ಚರಣೆಯಾಗಿ ಸಭೆಯು ವಿಸರ್ಜನೆಯಾಯಿತು.

ಈ ಸಮಯದಲ್ಲಿ ಬ್ರಿಟಿಷ ಪ್ರಭುಗಳವರ ವಿಜಯವನ್ನು ಕೋರಿ ವಾರ್-ಫಂಡಿಗಾಗಿ ೨೫ ರೂಪಾಯಿಗಳನ್ನು ಶ್ರೀ ಮಹಾಸನ್ನಿಧಿಯವರು ಆಶೀರ್ವದಿಸಿದರು.

ವೀರಶೈವಮಂಡಲಿ ಮುಧೋಳ.



## ಮಾಸಭವಿಷ್ಯ.

ಬರೆದವರು:- ವೇ. ಬ್ರ. ಶ್ರೀ. ಸಿದ್ಧಾಂತಿ. ರುದ್ರಾರಾಧ್ಯ ಶಾಸ್ತ್ರಿಗಳು ಬಸವನಾಳ

ತಾ॥ ೨೦-೧೧-೧೯೪೦ರಿಂದ ತಾ॥ ೨೦-೧೨-೧೯೪೦ರ ವರೆಗೆ

ಇದೇ ಸಂವತ್ಸರದ ಕಾರ್ತಿಕ ಬಹುಳ ೫ ಬುಧವಾರದಿಂದ ಮಾರ್ಗಶಿರ ಬಹುಳ ೬ ಶುಕ್ರವಾರದ ವರೆಗೆ ದ್ವಾದಶ ರಾಶಿಯವರ ಭವಿಷ್ಯ.

### ಮೇಷ.

ಚೂ. ಚೇ. ಚೋ. ಲಾ. ಲೀ. ಲೂ. ಲೇ. ಲೋ. ಅ.

ಈ ರಾಶಿಯವರಿಗೆ ಈ ಮಾಸದಲ್ಲಿ "ಸಂತೋಷವೇ ಸುಖದಮೂಲ" ಎಂಬುವಂತೆ ಆನಂದವು ಹೆಚ್ಚಾಗುವದು. ಆದಿಯಲ್ಲಿ ನೆಂಟರು ಆಗಮಿಸುವಿಕೆ ಗುರುದೇವತಾ ಭಕ್ತಿಪ್ರಾಪ್ತಿ, ಪ್ರಯಾಣದಲ್ಲಿ ಸೌಖ್ಯ, ಸತ್ಕಾರ್ಯದಲ್ಲಿ ಧನವ್ರಯ ಕೃಷಿಕರ್ಮಾದಿಗಳಲ್ಲಿ ಮನಸ್ಸು ಉತ್ಸಾಹಗೊಳ್ಳುವದು, ವ್ಯಾಪಾರಾದಿಗಳಲ್ಲಿ ಧನಪ್ರಾಪ್ತಿ, ನೌಕರೀವರ್ಗಕ್ಕೆ ಸೌಖ್ಯ. ಮಧ್ಯ ಅಂತ್ಯದಲ್ಲಿ ದಾಯಾದಿಗಳಲ್ಲಿ ವಿರೋಧ. ಕಲಹಪ್ರಾಪ್ತಿ. ಅಧಿಕ ಧನವ್ರಯ, ಸರಕಾರೀ ತೊಂದರೆ ನೆಂಟರಲ್ಲಿ ಮನಸ್ತಾಪ-ಪ್ರಯಾಣದಲ್ಲಿ ತೊಂದರೆ ವ್ಯಾಪಾರದಲ್ಲಿ ಅಲ್ಪ ಲಾಭ, ಸ್ತ್ರೀಮೂಲಕ ವ್ಯಥೆ. ವಿದ್ಯಾರ್ಥಿಗಳಿಗೂ, ಬಾಲಕ ಬಾಲಕಿಯರಿಗೂ ಸಾಧಾರಣ ಸೌಖ್ಯವುಂಟು, ಅಂತೂ ಈ ರಾಶಿಯವರು ಗುರು-ಶನಿ-ಗ್ರಹ ಪೂಜೆಮಾಡುವುದರಿಂದ ಸಾಧಾರಣ ಸುಖವು.

## ವೃಷಭ.

( ಈ- ಊ. ಏ- ಓ. ವಾ, ವೀ. ವೂ- ವೇ. ವೋ- )

"ಈ ರಾಸಿಯವರಿಗೆ ಈ ಮಾಸದಲ್ಲಿ " ಸಂಕಟಬಂದಾಗ ವೆಂಕಟರಮಣ " ಎನ್ನುವ ಗಾದಿಯಂತೆ ಆದಿಯಲ್ಲಿ ಮನೋವ್ಯಥೆ, ಯತ್ನಕಾರ್ಯಭಂಗ, ಬಂಧು ವಿರೋಧ ಅನಾವಶ್ಯಧನವ್ಯಯ, ಎತ್ತರಪ್ರದೇಶಭೀತಿ ಹೆಚ್ಚುವದು, ಕೃಷಿಕರ್ಮಗಳಲ್ಲಿ ಲಾಭವಿಅಲ್ಪ, ಭಿಕ್ಷುಕರು ಅಧಿಕವಾಗುವರು. ಮನಸ್ಸು ಸ್ಥಿರವಿಲ್ಲದ್ದರಿಂದ ಮನೊವ್ಯಥೆ ಮಧ್ಯಅಂತ್ಯದಲ್ಲಿ, ಗೃಹದಲ್ಲಿ ಶುಭಶೋಭನಾದಿಕಾರ್ಯಗಳು ಜರಗುವಿಕೆ, ಹರಗುರು ದರ್ಶನ, ಪ್ರಯಾಣದಲ್ಲಿ ಮನಾನಂದ ಮಿತ್ರಸಮಾಗಮನ, ಬಂಧುವರ್ಗದಲ್ಲಿ ಪ್ರೀತಿ ಹೆಚ್ಚುವದು, ಖರ್ಚಿನಬಾಬ ಆದರೂ ಈ ತಿಂಗಳಲ್ಲಿ ವಿಶೇಷಪ್ರಾಪ್ತವಾಗುವದು. ಆದ್ದರಿಂದ ಈ ರಾಶಿಯವರು ಅಧಿಕವಾಗಿ ಪೂಜಾದಿಕಾರ್ಯಗಳಲ್ಲಿ ತೊಡಗಲುಶಾಂತಿಯುಂಟು.

## ಮಿಥುನ.

ಕಾ. ಕೀ. ಕೂ. ಘ. ಙ. ಛ. ಕೇ. ಕೋ. ಹಾ.

ಈ ರಾಶಿಯವರಿಗೆ ಈ ಮಾಸದಲ್ಲಿ " ಮೂರ್ತಿಯೇ ಕೀರ್ತಿಗೆಕಾರಣವು " ಎಂಬಂತೆ ಈ ಶರೀರಮೂರ್ತಿಯು ಮೋಕ್ಷಸಾಧನಕ್ಕೆ ಕೈಕೊಟ್ಟಲ್ಲಿ ಕೀರ್ತಿ, ಅಧಿಕವಾಗವುದರಲ್ಲಿ ಸಂದೆಹವೇನು, ಸಭ್ಯಜನರ ಸಹವಾಸ, ಗುರುದೇವತೆಯುದರ್ಶನ. ಮೃಷ್ಟಾನ್ನಭೊಜನ, ನೆಂಟರಿಂದಸೌಖ್ಯ, ಪ್ರಯಾಣಸುಖ, ನೌಕರಿವರ್ಗಕ್ಕೆಯಶ ಪ್ರಾಪ್ತಿ, ಕೃಷಿಕರ್ಮದಲ್ಲಿ ಮನಸ್ಸು ಅಲ್ಪ ಸಂತೋಷಗೊಳ್ಳುವದು, ಬಾಲಕ ಬಾಲಿಕಿ ವಿದ್ಯಾರ್ಥಿಗಳಿಗೆ ಅಲ್ಪ ಸ್ವಲ್ಪ ಸುಖಸಂತೋಷಗಳು ಒದಗುವವು, ಅಂತ್ಯದಲ್ಲಿ ಈ ರಾಸಿಯವರಿಗೆ ಕಾಡುವಗ್ರಹಗಳು ಹಿಂಬಾಲಿಸುವವು ಇದಕ್ಕೆ ಕ್ರೂರಗ್ರಹಶಾಂತಿ ಮಾಡಿಸಿ ಸುಖಶಾಂತಿ ಪಡೆಯಬೇಕು.

## ಕರ್ಕ.

ಹೀ. ಹೂ. ಹೇ. ಹೋ. ಡಾ. ಡಿ. ಡೂ. ಡೇ. ಡೋ.

ಈ ರಾಶಿಯವರಿಗೆ ಈ ಮಾಸದಲ್ಲಿ " ಗುರುವೇ ಅರಿವಿಗೆಮೂಲ" ಎಂಬಂತೆ ಅರುವು ಬರಬೇಕಾದರೆ ಕಷ್ಟದಿಂದಬರುವದು, ಈ ಕಷ್ಟವಂ ಪರಿಹರಿಸುವನಾಥನು ಸದ್ಗುರು ನಾಥನು ಎನ್ನುವಹಾಗೆ, ಪ್ರಯಾಣದಲ್ಲಿಕಷ್ಟ, ದಾಯಾದಿಗಳಲ್ಲಿವಿರೋಧ, ಪುತ್ರವರ್ಗಕ್ಕೆಪೀಡೆ ಅನೇಕಪ್ರಕಾರದಿಂದ ಧನವ್ಯಯ, ಹರಗುರುಗಳಲ್ಲಿ ಮನಸ್ಸು ವ್ಯತಿರೇಕ ಆಗುವಿಕೆ, ಕೃಷಿಕರ್ಮದಲ್ಲಿ ಅಲ್ಪ ಸಂತೋಷ, ಸ್ತ್ರೀಮೂಲಕದಿಂದಲೂ,

ಭೂಮೂಲಕದಿಂದಲೂ ಧನವ್ಯಯ, ಇಲ್ಲಸಲ್ಲದ ಅಪವಾದಪ್ರಾಪ್ತಿ, ಮನದವ್ಯಥೆ ಮಾಸಾಂತ್ಯದಲ್ಲಿಮಾತ್ರ ಸುಖದಸೂಚನೆಯು ಕಂಡುಬರುವದು ಬಾಲಕ ಬಾಲಕಿ ಯರಿಗೆ ರೋಗಗಳಕಾಟ ಹೆಚ್ಚುವದು ವಿದ್ಯಾರ್ಥಿಗಳಿಗೆ ವಿದ್ಯಾರ್ಜನೆಯಲ್ಲಿ ಮನಸ್ಸು ಹರಿದಾಡುವದು, ಆತಂಕದಪ್ರಸಂಗಗಳು ಕಂಡುಬರುವವು, ಈ ರಾಸಿಯವರು ಈ ಮಾಸದ ಅವಧಿಯಲ್ಲಿ ನವಗ್ರಹಶಾಂತಿಮಾಡಿಸಿದಲ್ಲಿ ಸುಖವುಲಭಿಸುವದು.

## ಸಿಂಹ.

ಮಾ. ಮೀ, ಮೂ. ಮೇ. ಮೋ. ಟಾ. ಟೀ. ಟು. ಟೆ.

ಈ ರಾಸಿಯವರಿಗೆ ಈ ಮಾಸದಲ್ಲಿ " ಕೈ ಬೀಸಿದರೆ ಕೈಲಾಸ " ಎಂಬಂತೆ ಇವರಿಗೆ ಸರ್ವಕಾಲದಲ್ಲಿ ಜಯ ಪ್ರಯಾಣದಲ್ಲಿ ಖರ್ಚಿಗಿಂತ ಅಧಿಕಲಾಭ, ಪುಣ್ಯ ಕ್ಷೇತ್ರಗಳದರ್ಶನಕ್ಕೆ ಮನಸ್ಸೇಳುವಿಕೆ, ಬಂಧುವರ್ಗದಲ್ಲಿ ಪ್ರೀತಿಹೆಚ್ಚುವದು ಮಧ್ಯ ಸರ್ವಕ್ಕೂಮನವ್ಯಾಕುಲಗೊಂಡು ಪ್ರೀತಿಹೆಚ್ಚುವದು ಪೂಜಾಸ್ಮರಣಾದಿಗಳಿಂದ ಸುಖವುಲಭಿಸುತ್ತದೆ, ಧನಧಾನ್ಯಸಮೃದ್ಧಿ, ಸದಾ ಹಸ್ತದಲ್ಲಿ ಚಿಕ್ಕಲಕ್ಷ್ಮಿಯು ವಾಸ ವಾಗಿರುವಳು ಇತಿಫಲ.

## ಕನ್ಯ.

ಟೀ. ಪಾ. ಪಿ. ಪೂ. ಷ. ಣಾ ಠಾ ಪೇ. ಪೋ.

ಈ ಮಾಸದಲ್ಲಿ ಈ ರಾಸಿಯವರಿಗೆ " ಆನೆಯಾಗಿ ಕಬ್ಬು ಮೇಯುವದಕ್ಕಿಂತ ಇರಿವೆಯಾಗಿಸಕ್ಕರೆಮೇಯುವದುಲೇಸು" ಎಂಬಂತೆ ದೊಡ್ಡವರಾಗಿಕಷ್ಟಕ್ಕೀಡಾಗದೆ ಸಣ್ಣವರಾಗಿ ಕೀರ್ತಿಪಡೆಯುವದು ಲೇಸು, ಗ್ರಹಬಾಧೆ, ಗೃಹದಲ್ಲಿಕಲಹ, ಸ್ತ್ರೀಪುತ್ರ ರಲ್ಲಿವ್ಯಾಕುಲ, ಕೃಷಿಕರ್ಮದಲ್ಲಿ ಅಲ್ಪಲಾಭ ವ್ಯಾಪಾರಾದಿಕಾರ್ಯಗಳಲ್ಲಿ ಅಲ್ಪಸುಖ, ಪ್ರಯಾಣದಲ್ಲಿಕಷ್ಟ ದೊರಕುವದು, ಬಾಲಕ – ಬಾಲಕಿ – ವಿದ್ಯಾರ್ಥಿನಿಯರು ಬಹು ಜಾಗ್ರತೆಯುಳ್ಳವರಾಗಿ ಅರಿಯದವರಂತೆವರ್ತಿಸಬೇಕು.

## ತುಲ.

ರಾ. ರೀ. ರೂ. ರೇ. ರೋ. ತಾ. ತೀ. ತೂ. ತೇ.

ಈ ರಾಶಿಯವರಿಗೆ ಈ ಮಾಸದಲ್ಲಿ "ಮುದ್ದೇಮೊಡ್ಡಪ್ಪ" ಎಂಬಂತೆ ದುಡ್ಡಿ ನಿಂದಲೇ ಸಕಲಕಾರ್ಯಗಳುಕೈಗೂಡುವವು. ಮನಸ್ಸಂತೋಷ ಗೃಹದಲ್ಲಿ ಮೃಷ್ಟಾನ್ನ ಭೋಜನ, ಸ್ತ್ರೀಪುತ್ರರಿಂದ ಸಂತೋಷ, ಪ್ರಯಾಣದಲ್ಲಿಅಲ್ಪಸುಖ ಹರಗುರುದರ್ಶನ ದಿಂದ ಧನವೆಚ್ಚ, ದೇವರಿಗೆ ಹರಕೆಕಟ್ಟುವದು ಅಧಿಕವಾಗುತ್ತದೆ, ದೊಡ್ಡವರ (ಮಾನವಂತರ) ಸಲುವಡೆಸಿದಲ್ಲಿ ಸುಖಲಭಿಸುತ್ತದೆ. ಸಂಗಡಿಗರನ್ನು ಅಧಿಕಪ್ರೀತಿಸಿ

ದರೆ ಧನವೆಚ್ಚ, ಅಂತ್ಯದಲ್ಲಿಮಾತ್ರ ಗೃಹದಲ್ಲಿಕಲಹ, ರೋಗಾದಿಗಳುಪ್ರಾಪ್ತಿ, ಯತ್ನ ಕಾರ್ಯಭಂಗ, ಮಿತ್ರದ್ವೇಷಪ್ರಾಪ್ತಿ, ಪ್ರಯಾಣದಲ್ಲಿಕಷ್ಟ, ಇಲ್ಲಿ ನವಗ್ರಹಶಾಂತಿ ರುದ್ರಾಭಿಷೇಕಮಾಡಿಸಬೇಕು. ಇತಿ ಫಲಂ.

## ವೃಶ್ಚಿಕ.

ತೋ. ನಾ. ನೀ. ನೂ. ನೇ. ನೋ. ಯಾ. ಯಿ. ಯು.

ಈ ರಾಶಿಯವರಿಗೆ ಈ ಮಾಸದಲ್ಲಿ "ದೇವರುವರವುಕೊಟ್ಟರೆ ಪೂಜಾರಿ ವರವುಕೊಡನು" ಎಂಬಂತೆ ಒಬ್ಬರ ಹಿತ ಬಯಸುವವರೊಳಗೆ ಇನ್ನೊಬ್ಬರು ಅಹಿತ ಬಯಿಸಿ ಎರಡನ್ನೂಕೆಡಿಸಿ ನಾಶಮಾಡುವನು, ಇದರಂತೆ ನಿಮ್ಮ ಪರಿಸ್ಥಿತಿ ಅದೆ ಮೊದಲೇ ಪೂಜಾರಿವರಕೊಡುವಂತೆ ಮಾಡಿಕೊಳ್ಳಬೇಕು ಏನಂದರೆ ಈ ಮಾಸದ ಆರಂಭದಲ್ಲಿ ಶನಿ, ರಾಹು, ಕೇತು, ಈ ಗ್ರಹಗಳ ಶಾಂತಿಮಾಡಿಸಿರಿ ಅಂದರೆ ಸುಖ ಲಭಿಸುತ್ತದೆ. ಇಲ್ಲದಿದ್ದಲ್ಲಿ ಒಬ್ಬರಿಂದ ನಮ್ಮ ಮಾನಹಾನಿ ವ್ಯಾಪಾರೋದ್ಯೋಗಗಳಲ್ಲಿ ಕಷ್ಟ, ಮನೋವ್ಯಾಕುಲ ದುಷ್ಟದುಷ್ಟ ಕಲ್ಪನೆಗಳುಂಟಾಗುವವು, ಶರೀರದಲ್ಲಿ ಸಣ್ಣ ಸಣ್ಣಬೇನೆಗಳುಂಟಾಗುವವು.

## ಧನಸ್ಸು.

ಯೇ. ಯೋ. ಬಾ. ಬಿ. ಬೂ. ಧಾ. ಫಾ. ಡಾ. ಬೇ.

ಈ ಮಾಸದಲ್ಲಿ ಈ ರಾಸಿಯವರಿಗೆ "ಧೈರ್ಯಂ ಸರ್ವತ್ರಸಾಧನಂ" ಎಂಬಂತೆ ಚಿಕ್ಕಪುಟ್ಟವ್ಯಾಕುಲವುಂಟಾದಲ್ಲಿ ಧೈರ್ಯದಿಂದ ಅದನ್ನು ಹೋಗಲಾಡಿಸಿ ಕೊಳ್ಳಬೇಕು ಸರ್ವಗ್ರಹಗಳು ಸಾಧಾರಣಫಲಕೊಡುತ್ತಿರುವಲ್ಲಿ ಶನಿಮಹಾರಾಯನು ೫ ನೇಯವನಾಗಿ ಫಲಕೊಡುವಾಗ ಇವನ ಆಟ ಏನು ಸಾಗಬೇಕು, ಆದರೂ! 'ಹುಣಸೇಮರ ಮುಪ್ಪಾದರೂ ಹುಳಿಬಿಡದು' ಎಂಬಂತೆ ಶನಿಯು ೫ನೇ ಯವನಾ ದರೂ ತಕ್ಕಫಲ ಕೊಟ್ಟೇತೀರವನು ಆದರೂ ಇವನಕಾಟವನ್ನು ಪೂಜಾ ದಾನ ಧರ್ಮ ಇತ್ಯಾದಿಗಳಿಂದಕಡಿಮೆಮಾಡಿಕೊಂಡುಸುಖಪಡೆಯಬೇಕು ಆದಿಯಲ್ಲಿ ಅನೇಕಬಗೆಯೆ ಸೌಖ್ಯ ಮಧ್ಯದಲ್ಲಿ ಸಾಧಾರಣ ಶೌಖ್ಯ ಅಂತ್ಯದಲ್ಲಿ ಅಲ್ಪ ಸ್ವಲ್ಪ ಕಷ್ಟಗಳು ಪ್ರಾಪ್ತವಾಗುವವು.

## ಮಕರ.

ಜೋ. ಜಾ. ಜಿ ಜೂ. ಜೇ. ಜೋ. ಬಾ. ಗಾ. ಗಿ.

ಈ ಮಾಸದಲ್ಲಿ ಈ ರಾಶಿಯವರಿಗೆ "ಗಂಡಹೆಂಡಿರನಡುವೆ ಕೂಸುಘಾಸಿ" ಎಂಬಂತೆ ಇದರಲ್ಲಿ ನಿಮಗೆ ಬಲವಾದಗ್ರಹಗಳಕಾಟದಿಂದ ನಿಮ್ಮ ಶರೀರವು ಕೆರಗು ತ್ತಿರುವದು ಚೋರಾಗ್ನಿಭಯ ಪ್ರಯಾಣಾದಿಕಾರ್ಯದಲ್ಲಿತೊಂದರೆ, ಶತ್ರುವೃದ್ಧಿ, ಪುತ್ರಪೀಡೆ ಸುಖಕಡಿಮೆ, ಕಲಹಪ್ರಾಪ್ತಿ' ಬಂಧುಗಳಿಂದ ಅಮರ್ಯಾದೆಯಾಗಲೀ,

ಮನಸ್ತಾಪವಾಗಲೀ, ಉಟಾಗುತ್ತದೆ, ಆರ್ಥಿಕಅಡಚಣೆ ಯುಂಟಾಗುತ್ತದೆ, ನೇತ್ರ ಪೀಡೆ ಸರ್ಕಾರಿಕೆಲಸಗಳು ಈಮಾಸದಲ್ಲಿ ತೀರ್ಮಾನಿಸುವದಿಲ್ಲ ಆದ್ದರಿಂದಾ ಈವೇಳೆ ಯಲ್ಲಿ ಈ ರಾಶಿಯವರು ಶನಿ, ಗುರು, ಕುಜ, ಕೇತು, ಈಗ್ರಹಗಳಶಾಂತಿಮಾಡಿಶಿದಲ್ಲಿ ಸುಖವುಂಟಾಗುವದು.

## ಕುಂಭ.

ಗೂ. ಗೇ. ಗೋ. ಸಾ. ಷೀ. ಸೂ. ಸೇ. ಸೋ. ದಾ.

ಈ ರಾಶಿಯವರಿಗೆ ಈ ಮಾಸದಲ್ಲಿ "ಕೈಬೀಸಿದರೆ ಕೈಲಾಸ" ಎಂಬಂತೆ ಯಲ್ಲಿ! ರೀತಿಯಿಂದ ಪರಮಾತ್ಮನಕೃಪೆ ಪ್ರೀತಿಪಡೆದವನಿಗೆ ಕೈಲಾಸವು ಬಹಳದೂರ ಆದೀತೆ ಇದರಂತೆ ಸಕಲ ಗ್ರಹಗಳು ಅನುಕೂಲಿಸಿ ಇರುವಾಗ ನಿಮಗೆ ಆನಂದ. ಪ್ರಯಾಣದಿಂದ ಲಾಭ, ಹರಗುರುದೇವತಾದರ್ಶನದಿಂದ ಅಧಿಕಪುಣ್ಯಪ್ರಾಪ್ತಿ ಬಾಲಕ ಬಾಲಕಿಯರಿಗೂ, ವಿದ್ಯಾರ್ಥಿಗಳಿಗೂ, ಸುಖದಕಾಲವಾಗಿರುತ್ತದೆ. ಇತಿಫಲಂ.

## ಮೀನ.

ದೀ. ದು. ಶಂ. ಝಾ, ಥ. ದೇ. ದೋ. ಚಾ. ಚಿ.

ಈ ಮಾಸದಲ್ಲಿ ಈ ರಾಸಿಯವರಿಗೆ, "ದುಷ್ಟರ ಕಂಡರೆ ದೂರಸರಿ" ಎಂಬಂತೆ ನಿಮಗೆ ದುಷ್ಟಗ್ರಹಗಳ ಚೇಷ್ಟೆಇದ್ದಲ್ಲಿ ನಿಮಗೆ ಕಾಡಾಟ ಅಧಿಕವಾಗುತ್ತೆ. ಇದಕ್ಕೆ ಶನಿ, ಕುಜ, ಶಾಂತಿಮಾಡಿ, ಸರ್ವಗ್ರಹ ವಶವಡಿಸಿಕೊಂಡಲ್ಲಿ ಸುಖದೊರೆ ಯುತ್ತದೆ. ಇಲ್ಲದಿದ್ದಲ್ಲಿ ಮನೋವ್ಯಾಕುಲ, ಚಿಕ್ಕಬೇನೆ, ಪ್ರಯಾಣದಲ್ಲಿ ತೊಂದರೆ ಅನೇಕ ವಿಧದಿಂದ ಧನವ್ರಯ ಹರಗುರು ಭಕ್ತಿದೂರಾಗವಿಕೆ ಕಳ್ಳರಉಪದ್ರವ ವಿತ್ರ ತ್ವ ಈ ರೀತಿಫಲಗಳು ಉಂಟಾಗುತ್ತವೆ. ಇತಿಫಲಂ.

## ಕಾರ್ತಿಕಮಾಸದ ಒಟ್ಟು ಭವಿಷ್ಯ.



ಯದಾರ್ಕೋ ವೃಶ್ಚಿಕೇ ಯಾತಿತದಾರ್ಘಂಜಾಯತೇ ಸಮರ್ಘ
ಊರ್ಣಕಂ ಸರ್ವದ್ರವ್ಯಾಣಿ ಸ್ವಲ್ಪರ್ಘಂಚ ಪ್ರದೀಯತೆ ||

ಎಂಬಂತೆ ಧಾನ್ಯದವ್ಯಾಪಾರವು ಸಮತ್ವವಿರುವದು. ಎಣ್ಣೆ ವಸ್ತ್ರ ಬೆಳ್ಳಿ ಭಂಗಾರ ಮುಂತಾದ ಧಾತುಗು ಸ್ವಲ್ಪ ತೇಜಿಯಾಗುವ ಸಂಭವವಿರುವದು ಅಲ್ಲದೇ ಈ ಮಾಸದಲ್ಲಿ ೫ ಗುರು ೫ ಶುಕ್ರವಾರಗಳೂ ಕಲೆತಿರುವದರಿಂದ ಈ ಮಾಸಾಂತ್ಯದಲ್ಲಿ ವಿಶೇಷ ಶುಭಫಲಗಳುಂಟಾಗುವವು, ತಾರ್ಮ ಬೆಲ್ಲ ಹತ್ತಿ ಶುರಿ ಜೋಳ ಯಣ್ಣೆ ಮೆಣ ಶಿನಕಾಯಿ ಸಜ್ಜಿ ಕುಸುಬಿ ತಂಬಾಕು ನೂಲು ಜೀರಿಗೆ ಕಲ್ಲುಸಕ್ಕರೆ ಇವು ತೇಜಿಯಾ ಗುವವು. ಇತಿಫಲಂ.

REG., NO., M. 4260,

# ❋ ಧರ್ಮರಾಜ್ಯ. ❋



**"ಮುದೇನೂರು ವೀರಶೈವ ಧರ್ಮಾಲಯ" ದಿಂದ ಈ 'ಧರ್ಮರಾಜ್ಯ' ಮಾಸಪತ್ರಿಕೆಯು ಬಹುಧಾನ್ಯ ಸಂ॥ ಕಾರ್ತೀಕ ಶು॥ ೧ ರಿಂದ ಹೊರಬಿದ್ದಿದೆ.**

ಕರ್ನಾಟಕ ಪ್ರಾಚೀನ ಸಂಸ್ಕೃತಿ, ಇತಿಹಾಸ, ನೀತಿ, ರೀತಿ, ಧರ್ಮ, ಕಾವ್ಯ, ನಾಟಕ, ಕಥೆ ಮೊದಲಾದ ವಿಷಯಗಳನ್ನೊಳಗೊಂಡ ಪಂಡಿತೋತ್ತಮರ ಹಾಗು ಸಮಾಜ ಮುಂದಾಳುಗಳ ಲೇಖನಗಳು, ಗ್ರಂಥಗಳೂ ಪ್ರಾಚೀನ ಗ್ರಂಥಗಳೂ, ಈ ಪತ್ರಿಕೆಯಲ್ಲಿ ಪ್ರಕಟಿಸಲ್ಪಡುವವು.

## ಚಂದಾವಿವರಗಳು.

| | | |
|---|---|---|
| ವಾರ್ಷಿಕ ಚಂದಾ | | ೧-೪-೦ |
| ಪೋಷಕರಿಗೆ | (ಒಮ್ಮೆಮಾತ್ರ) | ೧೦-೦-೦ |
| ಸಹಾಯಕರಿಗೆ | ( ,, ) | ೫-೦-೦ |

ಓದಿ ಒಗೆದುಬಿಡುವ ಪತ್ರಿಕೆಯಲ್ಲ ಕನ್ನಡಸಾಹಿತ್ಯಾಭಿಮಾನಿಗಳು ಪ್ರೋತ್ಸಾಹ ಸಹಾಯಗಳನ್ನೆಸಗುವರಾಗಿ ಕೋರುತ್ತೇವೆ.

ಸಂಪಾದಕರು,

**ಎಂ. ವಿ. ಮಠದ.**

ವಿಳಾಸ.

**ಎಂ. ವಿ. ಮಠದ.**

**ಹರಿಹರ.**



Chandrasekharaya Dharmarajya Printing

"ಕನ್ನಡಮ್ಮನ ಹೆಮ್ಮೆಯು ಹಿರಿದಾಗಲಿ"

# DHARMARAJYA.
# ಧರ್ಮರಾಜ್ಯ.

The monthly Kanada Magazine. MUDENUR.

ಬಿಡಿ ಸಂಚಿಕೆ ೦-೨-೦ (0-2-0) ಆಣೆ ಮಾತ್ರ.



ಶ್ರೀಶೈಲ ನೂತನ ಜಗದ್ಗುರು ಶ್ರೀ ವಾಗೀಶಪಂಡಿತಾರಾಧ್ಯ ಶಿವಾಚಾರ್ಯ ಮಹಾಸ್ವಾಮಿಗಳು

ಮುದೇನೂರು ಶಾ॥ ಶ॥ ೧೮೬೨. ವಿಕ್ರಮಸಂವತ್ಸರ ಮಾರ್ಗಶಿರ

ಸಂಪುಟ ೨.

VOL. 2. 20th DECEMBER

## ವಿಷಯಾನುಕ್ರಮಣಿಕೆ.

# ಧರ್ಮರಾಜ್ಯ.



ಮುದೇನೂರು.| ತಾ|| ೫|| ೧೮೬೨.|.ವಿಕ್ರಮಸಂವತ್ಸರ ಮಾರ್ಗಶಿರಮಾಸಪತ್ರಿಕೆ.
ಸಂ|| ೨. ಸಂಚಿಕೆ ೯.
VOL. 2.) 20th. DECEMBER. 1940. (NO. 9.



ಬರೆದವರು,

ಡಿ. ಎಂ. ಶಂಕರಶರ್ಮ
ಶ್ರೀ ಚಾ|| ರಾ || ಸಂಸ್ಕೃತ ಕಾಲೇಜ್
ವಿದ್ಯಾರ್ಥಿ ಚಂಪುಕ್ಲಾಸ್ ಬೆಂಗಳೂರು ನಗರ.

ಮುಗ್ಧಮನೋಹರ ಶಿಸುಗುಣಹಾಸವು
ಎಲ್ಲೆಡೆ ಪಸರಿಸಲಿ
ಸುರಸುಂದರ ಮನಮುಗ್ಧಾಲಾಪವು ||
ಬಾನಲಿ ಬೆರತಿರಲಿ || || ೧ ||

ಚಿರಸುಖಶಾಂತಿಯಪೀಣೆಯ ಹೃದಯದಿ|
ಮಂಜುಳವಾಗಿರಲಿ |
ವಿಮಲಾನಂದದ ಅಮಲ ಸುಧಾಕರ ||
ಕೌಮುದಿಯೊರಚಿರಲಿ || ೨ ||

ವಿಶ್ವಪ್ರೇಮದ ಸರಸವಿಚಾರವ |
ಅನಿಬರು ಅರಿತಿರಲಿ ||
ಸ್ವಾರ್ಥತ್ಯಾಗದ ಸರಿಸಂಬಂಧವು |
ಸರುವರ ಬೆಸದಿರಲಿ || ೩ ||

ಸತ್ಯಾರ್ಥದ ಬಗೆ ನಾಕವನೇರುತ |
ಮಂಗಳವಾಗಿರಲಿ ||
ವಿಮಲಾತ್ಮದ ನಗೆದಿನಕರನಾಗುತ |
ಲೋಕವ ಬೆಳಗಿರಲಿ || ೪ ||

# ಶಿವರಾತ್ರಿ ಶ್ರೀಶೈಲ ವೀರಶೈವ ಮಹಾಸಭಾ.

ಇದೇ ವಿಕ್ರಮ ಸಂವತ್ಸರದ ಮಾಘ ಬಹುಳ ೧೩ (ತಾ|| ೨೪-೨-೧೯೪೧) ರಲ್ಲಿ ಶ್ರೀಶೈಲದಲ್ಲಿ ಮಹಾಶಿವರಾತ್ರಿಯ ಕಾಲಕ್ಕೆ ಶ್ರೀ ಗಿರಿರಾಜ ಸೂರ್ಯಸಿಂಹಾಸನಾಧೀಶ್ವರ ಜಗದ್ಗುರು ವಾಗೀಶ ಪಂಡಿತಾರಾಧ್ಯ ಶಿವಾಚಾರ್ಯ ಮಹಸ್ವಾಮಿಗಳವರ ಅಧ್ಯಕ್ಷತೆಯಲ್ಲಿ ಈ ಮಹಾಸಭೆಯು ಸೇರಲಾಗುವುದು. ಈ ಸಮಾರಂಭವು ಅತಿವಿಜೃಂಭಣೆಯಿಂದ ನಡೆಯುತ್ತದೆ ಆ ಸಮಯದಲ್ಲಿ ಸಾವಿರಾರು ಸ್ತ್ರೀಪುರುಷ ಸಮೂಹವು ಸೇರುವುದು. ಈ ಸುಸಂಧಿಯಲ್ಲಿ ಶ್ರೀ ಮಲ್ಲಿನಾಥದರ್ಶನವು ಹಾಗೂ ಶ್ರೀ ಜಗದ್ಗುರುಗಳವರ ದರ್ಶನ ಕೃಪಾಶೀರ್ವಾದ ಲಾಭವೂ ಅತಿಸುಲಭವಾಗಿ ದೊರೆಯುವುದು. ಆ ಸಮಯದಲ್ಲಿ "ವೀರಶೈವ ಮಹಾಸಭೆ"ಯು ಸೇರಿಸಲಾಗುತ್ತದೆ, ಸಮ್ಮೇಲನದಲ್ಲಿ ಶ್ರೀ ಜಗದ್ಗುರುಗಳ ಇತರ ಪಂಡಿತೋತ್ತಮರ ಧರ್ಮೋಪನ್ಯಾಸಗಳು ಜರುಗುತ್ತವೆ. ಪ್ರೇಕ್ಷಕರೂ, ಸದಸ್ಯರೂ, ಮುಂತಾದವರಿಗೆ ಪ್ರತ್ಯೇಕ ಸುವ್ಯವಸ್ಥೆಗಳ ಏರ್ಪಾಟುಗಳಿಗೆ ರುಸುಮುನ್ನಿಟ್ಟಿರುತ್ತದೆ. ಮಿಕ್ಕ ವಿಷಯಾದಿಗಳಿಗೆ ಮುಂದಿನ ಸಂಚಿಕೆಯಲ್ಲಿ ಪ್ರಕಟಿಸಲಾಗುತ್ತದೆ.

ಇಚ್ಛೆಯುಳ್ಳ ಸದ್ಭಕ್ತಶಿರೋಮಣಿಗಳು ತಮ್ಮ ವಿಶೇಷಗಳಬಗ್ಗೆ ಕೆಳಗಿನ ವಿಳಾಸಕ್ಕೆ ಬರೆದು ತಿಳಿದುಕೊಳ್ಳಬಹುದು.

(ವಿಳಾಸ.)

ಶ್ರೀ [illegible]



ಶ್ರೀ ಜಗದ್ಗುರು ಪರ್ವತಮಠ, [illegible]ತಗಲ್ಲು.

## "ವೀರಶೈವ ವಾಙ್ಮಯಾವತಾರ" ವನ್ನು ಕುರಿತು.

ಶ್ರೀ|| ಪಂ|| ವಿದ್ಯಾನಿಧಿ ಬ್ರ|| ಮು|| ವೀರಭದ್ರಶಾಸ್ತ್ರಿಗಳವರು,

ಸಂಪಾದಕ :- 'ವೀಭೂತಿ' ಸಿಕಿಂದ್ರಾಬಾದ್.

ಕರ್ನಾಟಕ - ಆಂಧ್ರ - ಹಿಂದಿ - ಮರಾಠಿ - ಸಂಸ್ಕೃತ, ಮೊದಲಾದ ಅನೇಕ ಭಾಷಾ ಇತಿಹಾಸಜ್ಞರಾದ ವಿದ್ಯಾನಿಧಿ ಪಂಡಿತವರ್ಯ ಬ್ರ|| ಮು|| ಶ್ರೀ ವೀರಭದ್ರ ಶಾಸ್ತ್ರಿಗಳವರು ಬರೆದಿರುವ "ವೀರಶೈವ ವಾಙ್ಮಯಾವತಾರ" ವನ್ನುಕುರಿತು

ಎಂಬ ಲೇಖನವು ನಮ್ಮ ಅವಲೋಕನೆಗೆಬಂದಿದೆ. ಆಮೂಲಾಗ್ರವಾಗಿ ಪರಿಶೋಧಿಸಿದ್ದಾಯಿತು.

ಈಹಿಂದೆ ಪ್ರಕಟವಾ "ಶ್ರೀಪತಿ ಪಂಡಿತಾರಾಧ್ಯರ ಕಾಲ ನಿರ್ಣಯ"ವೆಂಬ ಗ್ರಂಥದಿಂದ ಶ್ರೀ ಸಿ. ಹಯವದನರಾಯರ ಐತಿಹಾಸಿಕ ವಿಜ್ಞಾನವು ಬಣ್ಣಗೆಟ್ಟು, ಹೋದಂತೆ ಈ ಲೇಖದಿಂದ ಆನೇಕುಲ [?]ಗೆ ಸೇರಿದ ಶ್ರೀ ನಾ|| ಸಿ. ನಾರಾಯಣರಾವ್, ಎಂ,ಎ, ಪಿ, ಹೆಚ್, ಡಿ, ಅವರ ಐತಿಹಾಸಿಕ ವಿಜ್ಞಾನವೂ ಬಣ್ಣಗೆಟ್ಟು, ಹೋಯಿತು

ಇತ್ತೀಚೆಗೆ 'ವೀರಶೈವ ವಾಙ್ಮಯ'ದ ವ್ಯಾಪಕತೆಯನ್ನು ಸಹಿಸದ ಕೆಲ ಆಂಗ್ಲಭಾಷಾವಿದರು ಈ ಮತ ಶಾಸ್ತ್ರದ ಪ್ರಾಚೀನೇತಿಹಾಸದವಿಚಾರವಾಗಿ ಏನೇನೋ ಕೋಲಾಹಲವನ್ನು ಮಾಡುತ್ತಿದ್ದಾರೆ, ಭಾರತೀಯರೆಲ್ಲರೂ ತಾತ್ತ್ವಿಕವಾಗಿ ಒಂದಾಗಿ ಸಮತವಾದದ ಸ್ವತಂತ್ರದುಂದುಭಿಯನ್ನು ಊದಬೇಕಾಗಿರುವ ಈ ಕಾಲದಲ್ಲಿ ಕರ್ಣ ಕರ ಕುತ್ಸಿತ ಭೇದವಾದಗಳು ಮಂದಗತಿಯಿಂದಾದರೂ ಸಾಗುತ್ತಿರುವುದು ಆಶ್ಚರ್ಯಕರವೇ ಸರಿ!

ವಿಚಾರ ಪೂರಿತವಾಗಿಬರೆಯಲ್ಪಟ್ಟ ಪಂಡಿತರ ಆ ಲೇಖವನ್ನು ಇಲ್ಲಿ ಇಷ್ಟಕ್ಕೆ ಇದ್ದಂತೆ ಪ್ರಕಟಿಸಿದೆ.



ಸಂಪಾದಕ, ಧನ...

# " ವೀರಶೈವ ವಾಙ್ಮಯ — —ಅವತಾರವನ್ನು ಕುರಿತು. "

## ಲೇ॥ ಚಿ. ಮು ಪಂ॥ ವೀರಭದ್ರ ಶಾಸ್ತ್ರಿಗಳು.

### ಈ ಗ್ರಂಥವು ಪೂರ್ಣವಿಮರ್ಶಿಸಲ್ಪಟ್ಟಿದೆ :—

" ಪ್ರಬುದ್ಧ ಕರ್ನಾಟಕ "ದ ಗತಸಂಚಿಕೆಯಲ್ಲಿ ಶ್ರೀಮಾನ್ ಸಿ. ನಾರಾಯಣರಾವ್, ಎಂ. ಎ., ಪಿ ಹೆಚ್. ಡಿ ಅವರ " ವೀರಶೈವ ವಾಙ್ಮಯಾವತಾರ" ವೆಂಬ ಭಾಷಣವನ್ನು ಪ್ರಕಟಿಸಲಾಗಿದೆ. ಅದರಲ್ಲಿರುವ ಅನೇಕ ವಿಧಾನಗಳು ತರ್ಕಶುದ್ಧ ವಾಗಿಲ್ಲದುದರಿಂದ ಅವುಗಳ ಬಗ್ಗೆ ನನ್ನ ಅಭಿಪ್ರಾಯವನ್ನು ಪ್ರಕಟಿಸುತ್ತಿರುವೆನು.

" ............... ವೀರಶೈವ ಮತಕ್ಕೆ ಪ್ರಮಾಣವೆಂದು ಹೇಳಲ್ಪಡುವ 'ಶೈವಸಿದ್ಧಾಂತ ಶಿಖಾಮಣಿ' ಎಂಬ ಗ್ರಂಥದಲ್ಲಿ ಬರೆಯಲ್ಪಟ್ಟಿದೆ. ಈ ಗ್ರಂಥವು ಈಚೆಯದು ............ ಇದನ್ನು ವೀರಾರಾಧ್ಯನ ಪೌತ್ರನೂ ಸಿದ್ಧಯ್ಯನ ಪುತ್ರನೂ ಆದ ರೇವಣನೆಂಬುವನು ರೇಣುಕಕೃತಗ್ರಂಥಕ್ಕೆ ಟೀಕಾರೂಪವಾಗಿ ರಚಿಸಿದ್ದಾನೆ. " ಎಂಬುದು ರಾಯರ ಮೊದಲನೆಯ ವಿಧಾನವಾಗಿದೆ. ಇದು ತುಂಬಾ ಪ್ರಾಮಾದಿಕವಾಗಿದೆ. ವೀರಶೈವವನ್ನು ಶೈವವೆಂದು ಸಾಮಾನ್ಯವಾಗಿ ಹೇಳಬಹುದಾದರು ಉದ್ದೇಶಪೂರ್ವಕವಾಗಿ ಶೈವವೆನಲಾಗದು. ತೆಲುಗು ದೇಶದ 'ಆರಾಧ್ಯರು' ತಮ್ಮನ್ನೂ ಕೆಲವು ವೀರಶೈವ ಗ್ರಂಥಗಳನ್ನೂ "ಶೈವ" ಶಬ್ದದಿಂದ ವ್ಯವಹಾರಮಾಡುವುದುಂಟು. ಇದನ್ನು ವಿಮರ್ಶಿಸದೆ ಅವರು ಪ್ರಕಟಿಸಿದ ಹಾಗೆ " ಶೈವಸಿದ್ಧಾಂತಶಿಖಾಮಣಿ" ಎಂದು ಬರೆದಿದ್ದಾರೆ. ಇದರ ರೂಢನಾಮವು 'ಸಿದ್ಧಾಂತಶಿಖಾಮಣಿ' ಯೇ ಆಗಿದೆ. ಗ್ರಂಥಕರ್ತನೇ ಪುಸ್ತಕದ ಅಂತ್ಯದಲ್ಲಿ " ಶ್ರೀ ವೇದಾಗಮ ವೀರಶೈವಸರಣಿಂ ........... ಶ್ರೀ ಸಿದ್ಧಾಂತಶಿಖಾಮಣಿಂ" ಎಂಬ ಶ್ಲೋಕದಿಂದ " ವೀರಶೈ ಸಿದ್ಧಾಂತಶಿಖಾಮಣಿ " ಯನ್ನಾಗಿಯೇ ಸ್ಪಷ್ಟಪಡಿಸಿದ್ದಾನೆ, ಶೈವವಲ್ಲ. ಈ ಗ್ರಂಥವನ್ನು ಸಿದ್ಧಯ್ಯನ ಮಗನಾದ ರೇವಣನು ರಚಿಸಿದ್ದಾನೆಂದು ಶ್ರೀ ನಾರಾಯಣರಾವ್ ಅವರಂತಹ ವಿದ್ವಾಂಸರು ಬರೆದಿದ್ದಾರೆಂಬುದು ವ್ಯಸನಕರವಾದ ವಿಷಯ. ಗ್ರಂಥಾದಿಯ

" ಆಸೀದ್ ............ ಶಿವಯೋಗೀತಿ ವಿಶ್ರುತಃ ॥೧೩॥
ತಸ್ಯ ವಂಶೇ ............ ಮುದ್ದದೇವಾಭಿಧಾಚಾರ್ಯಃ ॥೧೫॥
ತಸ್ಯಾಸೀನಂದನಃ ............ ಸಿದ್ಧನಾಥಾಭಿಧಃ ॥೧೭॥
ತಸ್ಯ ನಂದನಃ ............ ಅಭವಚ್ಛಿವಯೋಗೀತಿ ॥೨೦॥
ನಾಮ್ನಾ ಪ್ರತೀಯತೇ ಲೋಕೇ ಯತ್ಸಿದ್ಧಾಂತಶಿಖಾಮಣಿಃ ॥೩೧॥

ಈ ಶ್ಲೋಕಗಳಿಂದ ಶಿವಯೋಗಿಯು [illegible]
[illegible] ಚಾರ್ಯನೇ ಸಿದ್ಧಾಂತಶಿಖಾಮಣಿಯನ್ನು ವಿರಚಿಸಿದ್ದಾನೆಂದು ಸರ್ವವಾದ

ವಾಗಿದೆ. ರಾಯರ ಪ್ರಮಾದಕ್ಕೆ ಕಾರಣವೇನೆಂದರೆ ಯೇಲೂರಿನ ಶ್ರೀ ಮಲ್ಲಪಲ್ಲಿ ಮಲ್ಲಿಕಾರ್ಜುನ
ಶಾಸ್ತ್ರಿಗಳು ೧೮೯೭ ರಲ್ಲಿ ತೆಲುಗಕ್ಷರಗಳಿಂದ ಸಿದ್ಧಾಂತಶಿಖಾಮಣಿಯೊಂದನ್ನು ಮುದ್ರಿಸಿದ್ದಾರೆ.
ಅವರು ಸೊಸಲೆ ರೇವಣಾರಾಧ್ಯನ ಕನ್ನಡ ಟೀಕೆಯಿಂದ ಕೂಡಿದ ಸಂಸ್ಕೃತಪ್ರತಿಯನ್ನು ಆಧಾರ-
ವಾಗಿರಿಸಿಕೊಂಡು ತೆಲುಗು ಪ್ರತಿಯನ್ನು ಸಿದ್ಧಗೊಳಿಸುವಾಗ ಕನ್ನಡಟೀಕೆಯನ್ನು ಬಿಟ್ಟರೂ ಸೊಸಲೆ
ರೇವಣಾರಾಧ್ಯನ ಟೀಕೆಯ ಆದಿಯಲ್ಲಿರುವ ಕೆಲವು ಶ್ಲೋಕಗಳನ್ನು ಪ್ರಮಾದದಿಂದ ಮೂಲಸಿದ್ಧಾಂ
ತಶಿಖಾಮಣಿಯ ಆದಿಯಲ್ಲಿಸೇರಿಸಿ ಮುದ್ರಿಸಿರುವರು. ಅದರಿಂ ಸಿದ್ಧಾಂತಶಿಖಾಮಣಿಗೆ ಟೀಕೆಯನ್ನು
ರಚಿಸುತ್ತೇನೆಂತಲೇ ಅತನು ಹೇಳಿದನೇ ಹೊರತು ಸಿದ್ಧಾಂತಶಿಖಾಮಣಿಯನ್ನು ಆತನೇ ರಚಿ
ಸಿರಬಹುದೆಂಬ ಭ್ರಮೆಗೆ ಅವಕಾಶವಿಲ್ಲ. ಸಿದ್ಧಾಂತಶಿಖಾಮಣಿಯನ್ನು ಮೊಟ್ಟಮೊದಲು ಪ್ರಕಟ
ಸಿದ ಶ್ರೀ. ಪಾ. ವೀರಸಂಗಪ್ಪನವರ ಪ್ರತಿಯನ್ನಾಗಲಿ ವಾರದವರ ಪ್ರತಿಯನ್ನಾಗಲಿ ಅನಂತರ ಮುದ್ರಿ
ತವಾದ ವಿವಿಧಭಾಷೆಯ ಪ್ರತಿಗಳನ್ನಾಗಲಿ, ಪ್ರಾಚೀನವಾದ ತಾಳೆಯೋಲೆಯ ಪ್ರತಿಗಳನ್ನಾಗಲಿ
ನೋಡಿದರೆ ಈ ಭ್ರಮೆಗೆ ಅವಕಾಶವಿಲ್ಲ. ತಮ್ಮ ಪ್ರತಿಯನ್ನಾದರೂ ರಾಯರು ಸರಿಯಾಗಿ
ನೋಡಬಹುದಾಗಿದ್ದಿತು. "ತ್ರೈಲೋಕ್ಯಸಂಪಾದಲೇಖ್ಯ" ಎಂಬ ಶ್ಲೋಕದಿಂದ ಸಿದ್ಧಾಂತಶಿಖಾ
ಮಣಿಯ ಆರಂಭ. ಮಲ್ಲಿಕಾರ್ಜುನಶಾಸ್ತ್ರಿಗಳು ಮುದ್ರಿಸಿದ "ಯಸ್ಯೋಮಿಷ್ಟಲಿಂಗ—" ದಿಂದ
"ಮಯಾ ಟೀಕಾ ಕಾರಯತೇ ಶ್ರೀ ಸಿದ್ಧಾಂತಶಿಖಾಮಣೇಃ" ಎಂಬ ವರೆಗಿರುವ ಶ್ಲೋಕಗಳು
ಸೊಸಲೆ ರೇವಣಾರಾಧ್ಯನವೆಂಬುದನ್ನು ಸುಲಭವಾಗಿತಿಳಿಯಬಹುದು.

ಈ ಗ್ರಂಥವು ಈಚೆಯದೆಂಬ ವಾಕ್ಯದಲ್ಲಿ ರಾಯರ ಅಭಿಪ್ರಾಯವು ಸ್ಪಷ್ಟವಾಗಿತಿಳಿಯ
ದಿದ್ದರೂ ಸೊಸಲೇ ರೇವಣಾರಾಧ್ಯನ ಸಮಕಾಲಿಕ ಗ್ರಂಥವ (೧೭ ನೆಯಶತಮಾನದಲ್ಲಿ ಹುಟ್ಟಿದುದು)
ನ್ನಾಗಿ ಅವರು ಊಹಿಸಿದಂತೆ ತೋರುತ್ತದೆ. ಇದೂ ಸಮಂಜಸವಲ್ಲ. ಮಲ್ಲಿಕಾರ್ಜುನ ಪಂಡಿತಾ
ರಾಧ್ಯನಿಗಿಂತಲೂ ಪೂರ್ವದಲ್ಲಿ ಕ್ರಿ. ಶ. ೧೧ ನೆಯ ಶತಮಾನದಲ್ಲಿ ಪ್ರಸಿದ್ಧನಾಗಿದ್ದ ಶ್ರೀಪತಿ ಪಂಡಿ-
ತಾರಾಧ್ಯನು ವಿರಚಿಸಿದ ಶ್ರೀಕರಭಾಷ್ಯದಲ್ಲಿ ಅನೇಕಸಲ ಈ ಸಿದ್ಧಾಂತ ಶಿಖಾಮಣಿಯು ಸಗೌರವ
ವಾಗಿ ಉದಾಹೃತವಾಗಿರುವದರಿಂದ ಶ್ರೀಪತಿ ಪಂಡಿತನಿಗಿಂತಲೂ ಆ ಗ್ರಂಥವು ಪ್ರಾಚೀನವೆಂದು
ನಿಸ್ಸಂದೇಹವಾಗಿ ಸ್ವೀಕರಿಸಬಹುದು. ಶ್ರೀಕರಭಾಷ್ಯವನ್ನು ಸಂಪಾದನೆಮಾಡಿದ ಶ್ರೀ. ಸಿ. ಹಯ-
ವದನರಾಯರು ಆ ಭಾಷ್ಯದ ಕಾಲವನ್ನು ೧೪ ನೆಯ ಶತಮಾನದವರೆಗೆ ಬಲಾತ್ಕಾರವಾಗಿ ಎಳೆದಿರು
ವರೆಹೊರತು ಅದರಲ್ಲಿ ತಥ್ಯಾಂಶವೇನೂ ಇಲ್ಲ. ಯಾರಿಂದಲೋ ಅನ್ಯರಿಂದ ಇತ್ತೀಚೆಗೆ
ಸೇರಿಸಲ್ಪಟ್ಟ ಮಧ್ವಶಬ್ದವನ್ನು ಬಹಳವಾಗಿನಂಬಿಕೊಂಡು ಶ್ರೀಕಂಠಾಚಾರ್ಯ ಭಾಸ್ಕರಾಚಾರ್ಯರ
ಕಾಲವನ್ನೂ ಅಸಮಂಜಸವಾಗಿ ನಿರ್ಣಯಿಸಿ ಶ್ರೀಕರಭಾಷ್ಯದ ಶ್ರೀಪತಿ ಪಂಡಿತನ ಸಮಯವನ್ನೂ
ಕೆಳಕ್ಕೆ ತಳ್ಳಿದ್ದಾರೆ. ಹಯವದನರಾಯರ ಶ್ರೀಕರಭಾಷ್ಯ ಪ್ರತಿಗೆ ಮೂಲವಾದ ದೇವನಗರೀ ಜನಿವಾ
ರದ ಶ್ರೀ ಕಂದುಕೂರು ಬಾಲಸೂರ್ಯ ಪ್ರಸಾದ ಮಹಾಶಯರ ಪ್ರಾಚೀನ ಪ್ರತಿಯಲ್ಲಾಗಲಿ
ಸಿಕಿಂದ್ರಾಬಾದಿನ ಪ್ರಾಚೀನ ಬರಹದ ಪ್ರತಿಯಲ್ಲಾಗಲಿ ಮಧ್ವಶಬ್ದವಿಲ್ಲ. ಶ್ರೀಕಂಠಾಚಾರ್ಯನ
ಕಾಲವಾದರೂ ಮದ್ರಾಸು ಯೂನಿವರ್ಸಿಟಿಯ "Sivadwaita of Sreekantha" (ಶ್ರೀಕಂಠನ
ಶಿವಾದ್ವೈತ) ಎಂಬ ಪುಸ್ತಕದಲ್ಲಿ ಹತ್ತನೆಯ ಶತಾಬ್ದಿಯೆಂದು ನಿರ್ಣೀತವಾಗಿದೆ. ಹಯವದನ
ರಾಯರು ಮಾಡಿದ ಕಾಲಸೂಚನೆಗಳೆಲ್ಲವು "ಶ್ರೀಪತಿ ಪಂಡಿತಾರಾಧ್ಯರ ಕಾಲನಿರ್ಣಯ" ವೆಂಬ
ಪುಸ್ತಕದಲ್ಲಿ ಸುಪ್ರಮಾಣವಾಗಿ ಖಂಡಿಸಲ್ಪಟ್ಟಿವೆ. ಇವರ ಇಂಗ್ಲೀಷು ಪೀಠಿಕೆಯನ್ನು ನೋಡಿ
ಸಿದ್ಧಾಂತಶಿಖಾಮಣಿಗೆ ಸೊಸಲೇ ರೇವಣಾರಾಧ್ಯನು ಕರ್ತನೆಂಬುದನ್ನು ಸಾಹಿತ್ಯಕಾರರು

ನಂಬಿರಬಹುದು. ಹಯವದನರಾಯರೇನೋ ಮದ್ರಾಸು ಓರಿಯಂಟಲ್ ಲೈಬ್ರರಿಯ ಕೇಟಲಾಗನ್ನು ನೋಡಿ ಕರ್ತೃಕಾಲನಿರ್ಣಯಮಾಡಿಕೊಂಡಿರುವರು. ಮೂಲಗ್ರಂಥವನ್ನು ನೋಡದೆ ಪರಪ್ರತ್ಯಯ ಮಾಡಿದರೆ ಇದಕ್ಕೂ ಹೆಚ್ಚಿನ ಫಲವಾಗಲಾರದೆಂಬುದು ಸರಿಯೇ! ಶ್ರೀಕಂಠಶಿವಾಚಾರ್ಯನೂ ತನ್ನ ಬ್ರಹ್ಮಸೂತ್ರಭಾಷ್ಯದ ಚತುರ್ಥಾಧ್ಯಾಯ ೪ ನೆಯಪಾದದ "ಅವಿಭಾಗೇನ ದೃಷ್ಟತ್ವಾತ್" ಎಂಬ ಸೂತ್ರವ್ಯಾಖ್ಯಾನದಲ್ಲಿ ಸಿದ್ಧಾಂತಶಿಖಾಮಣಿಯ (೯-೧೪) "ಮುಕ್ತಃ ಶಿವಸಮೋ ಭವೇತ್" ಎಂಬ ಪ್ರಮಾಣವನ್ನುದ್ಧರಿಸಿದ್ದಾನೆ. ಇದರಿಂದ ಸಿದ್ಧಾಂತಶಿಖಾಮಣಿಯು ಹತ್ತನೆಯ ಶತಮಾನದಲ್ಲಿ ಪ್ರಸಿದ್ಧವಾಗಿದ್ದಿತೆಂಬುದು ಸ್ಪಷ್ಟವಾಗುತ್ತಿದೆ. ಅದರ ರಚನೆ ಪ್ರತಿಪಾದನೆ ಮೊದಲಾದವುಗಳುಕೂಡ ಅದರ ಪ್ರಾಚೀನತ್ವವನ್ನು ಸೂಚಿಸಲು ಸಮರ್ಥವಾಗಿವೆ.

ಶ್ರೀ ಸಿ. ನಾರಾಯಣರಾಯರೇ ಇತ್ತೀಚೆಗೆ ಪ್ರಕಟಿಸಿದ ತೆಲುಗು ಪಂಡಿತಾರಾಧ್ಯ ಚರಿತ್ರೆಯ ಪೀಠಿಕೆಯಲ್ಲಿಯೂ ಪ್ರಬುದ್ಧ ಕರ್ಣಾಟಕದ ಲೇಖದಲ್ಲಿಯೂ ಹಯವದನರಾಯರ ಶ್ರೀಕರಭಾಷ್ಯ ಶ್ರೀಪತಿ ಪಂಡಿತ ಕಾಲನಿರ್ಣಯವನ್ನು ಸರಿಯಾದುದಲ್ಲವೆಂದು ಹೇಳಿ ಶ್ರೀಪತಿ ಪಂಡಿತನು ೧೧ ನೆಯ ಶತಮಾನದಲ್ಲಿದ್ದನೆಂಬುದನ್ನು ಸ್ವೀಕರಿಸಿದ್ದಾರೆ. ಅವನುರಚಿಸಿದ ಭಾಷ್ಯದಲ್ಲಿಯೇ ಸಗೌರವವಾಗಿ ಉದ್ಧರಿಸಲ್ಪಟ್ಟ ಸಿದ್ಧಾಂತಶಿಖಾಮಣಿಯ ವಿಷಯವಾಗಿ "ಈ ಗ್ರಂಥವು ಈಚಿಯದು" ಎಂದು ಹೇಳುವುದಾದರೆ ಹಯವದನರಾಯರ ಪೀಠಿಕೆಯ ಹೊರತು ಶ್ರೀಕರಭಾಷ್ಯವನ್ನಾಗಲಿ ಸಿದ್ಧಾಂತಶಿಖಾಮಣಿಯನ್ನಾಗಲಿ ನಾರಾಯಣರಾಯರು ಅವಲೋಕನೆ ಮಾಡಿಲ್ಲವೆಂತಲೇ ಭಾವಿಸಬೇಕಾಗುವುದು.

ಶ್ರೀ ತೋಂಟದಾರ್ಯರ ಸಿದ್ಧಾಂತಶಿಖಾಮಣಿಗೆ ತತ್ತ್ವದೀಪಿಕೆಯೆಂಬ ಸಂಸ್ಕೃತ ಟೀಕೆಯನ್ನು ರಚಿಸಿದ್ದಾರೆ. ಅವರು ೧೬ ನೆಯ ಶತಮಾನದವರು ಅಂದರೆ ಬಹಳ ಆಧುನಿಕರಾದುದರಿಂದ ಸಿದ್ಧಾಂತಶಿಖಾಮಣಿಯಲ್ಲಿರುವ "ಮುದ್ದದೇವ" ಎಂಬ ಶಬ್ದವನ್ನು ನೋಡಿ ತಮ್ಮ ಕರ್ಣಾಟಕದ ಸೋಲಾಪುರದ ಮುದ್ದನಗೌಡನೆಂದು ಭ್ರಮಿಸಿ "ಸಿದ್ಧನಾಥ"ನೆಂಬ ಹೆಸರಿಗೆ ಸಿದ್ಧರಾಮನೆಂಬ ವಿಪರೀತಾರ್ಥವನ್ನು ಬರೆದಿದ್ದಾರೆ. ಇದು ಸಹಜವಾಗಿ ಜರುಗಿದ ಪಂಡಿತಪ್ರಮಾದವಾಗಿದೆ. ಇದನ್ನೇ ಪಾರಮಾರ್ಥವೆಂದುನಂಬಿ ಸಿದ್ಧಾಂತಶಿಖಾಮಣಿಯ ಕಾಲವನ್ನು ೧೨ ನೆಯ ಶತಾಬ್ದಿಯೆಂದು ತಿಳಿದವರು ಕೆಲವರುಂಟು. ಇದರಲ್ಲಿ ಎಷ್ಟೂ ಸತ್ಯಾಂಶವಿಲ್ಲ. ತೆಲುಗು ದೇಶದ ಕೊಲನುಪಾಕೆ (ಕುಲ್ಯಪಾಕ) ಯಲ್ಲಿ ಅವತರಿಸಿದ ರೇಣುಕನ ಮಹಿಮೆ ವಿಶೇಷಗಳನ್ನು ಪರಂಪರೆಯಾಗಿ ತನ್ನ ಆಚಾರ್ಯ ವಂಶಪುರುಷರಿಂದ ತಿಳಿದ ಆಂಧ್ರದೇಶದವನೇ ಆದ ಶಿವಯೋಗಿ ಶಿವಾಚಾರ್ಯನು ಸಿದ್ಧಾಂತಶಿಖಾಮಣಿಯನ್ನು ರಚಿಸಿರುವನು. ಸಿದ್ಧಾಂತಶಿಖಾಮಣಿಯ ಶ್ಲೋಕಗಳಲ್ಲಿ ಅನೇಕಕಡೆ ಆಂಧ್ರಭಾಷೆಯ ಸಂಪ್ರದಾಯಂತೆ ಯತಿಸ್ಥಾನವನ್ನು ಸಮಾಕ್ಷರ ಮೈತ್ರಿಯಿಂದ ರಚಿಸಿದ ಪಾದಗಳಿರುವದರಿಂದ ಆತನು ಆಂಧ್ರದೇಶದ ಕವಿಯೆಂದು ಸುಲಭವಾಗಿ ತಿಳಿಯಬಹುದು. ಯತಿಸ್ಥಾನದಲ್ಲಿ ಅಕ್ಷರಮೈತ್ರಿಯ ಪದ್ಧತಿಯು ಕನ್ನಡ ಭಾಷೆಯದಲ್ಲ. ಇದರ ವಿಸ್ತಾರವು ಮತ್ತೊಮ್ಮೆ ಪ್ರಕಟಿಸಲಾಗುವದು. ಸಿದ್ಧರಾಮನಿಗೆ ಶಿವಯೋಗಿಯೆಂಬ ಮಗನಿದ್ದಂತೆಯೂ ಪೌರಾಣಿಕ ಪ್ರತೀತಿಯಿಲ್ಲ. ಸಿದ್ಧಾಂತಶಿಖಾಮಣಿಯಲ್ಲಿಯ ಸಿದ್ಧನಾಥನು ಸೊನ್ನಲಿಗೆಯ ಸಿದ್ಧರಾಮನೆಂದಿಗೂ ಅಲ್ಲ ಸಿದ್ಧರಾಮನೇ ಆದ ಪಕ್ಷದಲ್ಲಿ ಆ ಹೆಸರನ್ನು ಸ್ಪಷ್ಟವಾಗಿಬರೆಯಲು ಛಂದೋಭಂಗಾದಿ ಯಾವ ಪ್ರತಿಬಂಧಕವೂ ಇದ್ದಿಲ್ಲ. ಮುದ್ದದೇವನು ಮುದ್ದನಗೌಡನೂ ಆಗಲಾರ. ಸೊನ್ನಲಿಗೆಯ

ಮುದ್ದನಗೌಡನುಲಿಂಗಾಂಗಿಯಲ್ಲ. ಸಿದ್ಧಾಂತಶಿಖಾಮಣಿಯ ಮುದ್ದದೇವನು ಅನೂಚಾನವಾಗಿ
ಬಂದ ವೀರಶೈವಾಚಾರ್ಯಕುಲದಲ್ಲಿ ಹುಟ್ಟಿದವನೆಂತಲೂ ಇವರೆಲ್ಲರೂ ವೇದಾಗಮವಿಶಾರದರೂ
ತಪಸ್ಸಂಪನ್ನರೂ ಆಗಿದ್ದರೆಂತಲೂ ಗ್ರಂಥಕರ್ತನ ವಂಶಪರಿಚಯದಿಂದ ಸುಲಭವಾಗಿ ತಿಳಿಯತಕ್ಕ
ದಾಗಿದೆ. ಶಿವಯೋಗಯ್ಯ ಮಲ್ಲಯ್ಯ ಸಿದ್ಧನಾಥಯ್ಯ ಎಂಬ ಹೆಸರುಗಳ ಕುಲ್ಯಪಾಕದ
ಪ್ರಾಚೀನ ಮಾಹೇಶ್ವರರಲ್ಲಿ ಹೆಚ್ಚಾಗಿಯೂ ಈಗಸ್ವಲ್ಪವಾಗಿಯೂ ಇವೆ. ರೇಣುಕನಿಗೆ ಸಿದ್ಧನಾಥ
ನೆಂಬ ವಿಶೇಷಣವಿದ್ದಂತೆಯೂ (೨೧–೫೦) ಕುಲ್ಯಪಾಕವೆಂಬ ಕ್ಷೇತ್ರವು ರೇಣುಕನಿಗೆ ಸ್ವಸ್ಥಲವಾಗಿ-
ದ್ದಂತೆಯೂ (೨೧–೪೯) ಸಿದ್ಧಾಂತಶಿಖಾಮಣಿಯಿಂದ ಸ್ಪಷ್ಟವಾಗಿ ತಿಳಿಯುತ್ತಿರುವದರಿಂದ ಈಗ್ರಂಥ
ವು ಆಂಧ್ರಪ್ರದೇಶದಿಂದ ಅವತರಿಸಿತೆಂದು ನಿರ್ಣಯಿಸುವದೇ ಸಮಂಜಸವಾಗಿದೆ. ಇದು ಸ್ವಲ್ಪ
ಸೂಕ್ಷ್ಮಾಂಶವಾದುದರಿಂದ ಆಧುನಿಕರಾದ ಪೌರಾಣಿಕರೂ ಕೆಲವು ಕರ್ನಾಟಕಲೇಖಕರೂ ರೇಣುಕ
ರೇವಣಸಿದ್ಧ ಎಂಬ ಹೆಸರುಗಳುಳ್ಳ ಅನೇಕವ್ಯಕ್ತಿಗಳನ್ನು ತಿಳಿಯದೇ ತಪ್ಪಿದವರ ರೇವಣಸಿದ್ಧನಿಗೆ
ಗಂಟುಹಾಕಿಕೊಂಡು ರೇಣುಕಾಚಾರ್ಯನ ಕಾಲವನ್ನು ೧೨ನೆಯ ಶತಾಬ್ದವೆಂದು ಬರೆದುಕೊಳ್ಳು-
ತ್ತಿದ್ದಾರೆಯೇ ಹೊರತು ಇದು ಐತಿಹಾಸಿಕ ಸತ್ಯವಲ್ಲ. ರೇಣುಕನ ಉಪದೇಶರೂಪವಾಗಿ ಶಿವ
ಯೋಗಿ ಶಿವಾಚಾರ್ಯನಿಂದ ರಚಿತವಾದ ಸಿದ್ಧಾಂತಶಿಖಾಮಣಿಯು ೧೦ನೆಯ ಶತಾಬ್ದದಲ್ಲಿಯೇ
ಪ್ರಸಿದ್ಧವಾಗಿದ್ದು ವಿದ್ವಾಂಸರವನ್ನು ಪಡೆದಿದ್ದಿತೆಂಬುವದಕ್ಕೆ ಶ್ರೀಕಂಠ ಶ್ರೀಕರಭಾಷ್ಯಗಳೇ ಸಾಕ್ಷಿ
ಯಾಗಿವೆ.

ಶ್ರೀಕರಭಾಷ್ಯದಲ್ಲಿನ ಸಿದ್ಧಾಂತವು "ಬಸವನ ಅನಂತರದಲ್ಲಿ ವಿಸ್ತರಿಸಿದ ವೀರಶೈವ
ಸಿದ್ಧಾಂತದಿಂದ ಭೇದಿಸುತ್ತದೆ" ಎಂಬ ವಿಚಿತ್ರಘೋಷಣೆಯನ್ನು ಅವರು ಬೈಲಿಗೆಹಾಕಿದ್ದಾರೆ.
ಶ್ರೀಮಾನ್ ನಾರಾಯಣರಾಯರು ದಯಮಾಡಿ ಮೂಲಗ್ರಂಥಗಳಾದ ಶಿವಾಗಮ ಸಿದ್ಧಾಂತಶಿಖಾ
ಮಣಿಗಳನ್ನೂ ಶ್ರೀಕರಭಾಷ್ಯಗಳನ್ನೂ ಸ್ವತಃ ನೋಡಿ ಉಭಯಸಿದ್ಧಾಂತಗಳಿಗೆ ಇರುವ ವಿರೋಧ
ವನ್ನು ಆಯಾ ಗ್ರಂಥಗಳ ಸ್ಥಲ ನಿರ್ದೇಶಪೂರ್ವಕವಾಗಿ ಪ್ರತಿಪಾದಿಸುವದಾದರೆ ತಕ್ಕ ಸಮಾಧಾನ
ವನ್ನು ಬರೆಯಬಹುದು. ಹಯವದನರಾಯರ ಉಪೋದ್ಘಾತವನ್ನೇ ಅನುಸರಿಸಿ ಬರೆಯುತ್ತ
ಹೋದರೆ ಪ್ರಯೋಜನವಾಗಲಾರದು. ಶ್ರೀಕರಭಾಷ್ಯದಲ್ಲಿ ಹೇಳಲ್ಪಟ್ಟ ಸೃಷ್ಟಿ, ಸ್ಥಿತಿ, ಲಯ,
ವಾಚಿಕ, ಕಾಯಿಕ, ಮಾನಸಿಕ, ಎಂಬ ಷಟ್‌ಸ್ಥಲಗಳು ವೀರಶೈವ ಗ್ರಂಥಗಳಲ್ಲಿ ದೊರೆಯದೆ 'ಭಕ್ತ,
ಮಾಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ' ಎಂಬ ಷಟ್‌ಸ್ಥಲಗಳು ಹೇಳಲ್ಪಟ್ಟಿರು
ವದರಿಂದ ಪ್ರಾಚೀನ ವೀರಶೈವ ಮತಕ್ಕಿಂತಲೂ ಅರ್ವಾಚೀನ ವೀರಶೈವಮತವು ಬೇರೆ ಇದೆಯೆಂದು
ನಾರಾಯಣರಾಯರು ಬರೆದಿದ್ದಾರೆ. ಇದು ಅತ್ಯದ್ಭುತವಾದ ಪೂರ್ವಪಕ್ಷವೆಂದು ಅವರು ನಂಬಿರ
ಬಹುದು. ಭಾಷ್ಯದಲ್ಲಿ ನಿರೂಪಿಸತಕ್ಕ ವಿಷಯಗಳಾವುವೆಂಬುದ. ಅವುಗಳ ಬೇರೆ ಕಾಣ್ಕೆ. ತಾರ್ಕಿಕರೆ
ಪ್ರಶ್ನೆಗಳಿಗೆಭಾಷ್ಯದಲ್ಲಿಉತ್ತರದೊರೆತರೆ ಅವನ್ನು ವೀರಶೈವಗ್ರಂಥವನ್ನಾಗಿಸ್ವೀಕರಿಸಲು ಅವರುಸಂಸಿದ್ಧ
ರಾಗಿರುವರು. ಇದು ಸಾಮಾನ್ಯವಾದ ಉಪಕಾರವಲ್ಲ. ಮನುಸ್ಮೃತಿಯಲ್ಲಿರುವ ಸ್ಮಾರ್ತ
ಪ್ರಕ್ರಿಯೆಗಳೆಲ್ಲ ಶ್ರೀಕರಭಾಷ್ಯದಲ್ಲಿಯೂ ಪಂಚರಾತ್ರಾಗಮಪ್ರಕ್ರಿಯೆಗಳೆಲ್ಲ ರಾಮಾನುಜಭಾಷ್ಯ
ದಲ್ಲಿಯೂ ಪ್ರತಿಪಾದಿಸಲ್ಪಟ್ಟವೆ ಎಂಬ ನಂಬಿಕೆಯಿಂದ ಶಿವಾಗಮದ ಪ್ರಕ್ರಿಯೆಗಳಾದ ಏಕೋತ್ತರ
ಶತಸ್ಥಲಗಳೂ ಲಿಂಗಧಾರಣವಿಧಾನವೂ ಪಾದಪೂಜಾಪದ್ಧತಿಯೂ ಸಮಾಧಿಮಾಡುವ ಸಲಕರಣ
ಗಳೂ ಶ್ರೀಕರಭಾಷ್ಯದಲ್ಲಿ ವಿವರಿಸಲ್ಪಡದಿರುವದರಿಂದ ಅದು ಅರ್ವಾಚೀನ ವೀರಶೈವರ ಗ್ರಂಥ
ವಲ್ಲವೆಂದು ಹೇಳತಕ್ಕ ನ್ಯಾಯವಾದರೂ ಹೇಳತಕ್ಕುದಿಲ್ಲ. ಶ್ರೀಕರಭಾಷ್ಯವು ಶಿವತತ್ತ್ವ,
ಭೇದಾಭೇದ (ಶಕ್ತಿವಿಶಿಷ್ಟಾದ್ವೈತ), ಲಿಂಗಧಾರಣ, ಶಿವಜಗತ್ಕಾರಣತ್ವ,

ಗಳೆಂಬ ಮುಖ್ಯವಾದ ವಿಷಯಗಳನ್ನು ಸಿದ್ಧಾಂತಗೊಳಿಸಲು ಹುಟ್ಟಿರುವುದೇ ಹೊರತು ವೀರಶೈವರ ಎಲ್ಲ ವಿಷಯಗಳನ್ನೂ ಸಂಗ್ರಹಿಸುವುದಕ್ಕಲ್ಲ. ಶಿವಪರಬ್ರಹ್ಮನ ಸವಿಶೇಷತ್ವವನ್ನೂ ಸರ್ವಕರ್ತೃತ್ವವನ್ನೂ ಸಿದ್ಧಾಂತಗೊಳಿಸುವ ಪ್ರಸಂಗದಲ್ಲಿ ಅವನಿಗೆ ಸೃಷ್ಟಿಸ್ಥಿತಿಲಯವಾಚಕ ಕಾಯಿಕ ಮಾನಸಿಕ (ಇಚ್ಛಾಕ್ರಿಯಾಜ್ಞಾನ) ಗಳೆಂಬ ಷಟ್‌ಸ್ಥಲಗಳು ಹೇಳಲ್ಪಟ್ಟಿವೆ. ಅಂದರೆ ಶಿವನ ವಿವಿಧ ಶಕ್ತಿಗಳೇ ಜಗತ್ತಿಗೆ ಉಪಾದಾನಕಾರಣವೆಂಬುದು ನಿರೂಪಿಸಲಾಗಿದೆ. ಇವು ಆರೂ ಶಿವನ ಶಕ್ತಿಗಳೇ ಹೊರತು ಬೇರಲ್ಲ. ಇವು ಸಹಜವಾಗಿ ಸೃಷ್ಟಿ ಸ್ಥಿತಿ ಲಯ ತಿರೋಧಾನ ಅನುಗ್ರಹಗಳೆಂಬ ಶಿವಾಗಮಗಳ ಪಂಚಕೃತ್ಯಗಳಲ್ಲಿ ಅಂತರ್ಗತವಾಗಿವೆ. ಇವನ್ನೇ ಶ್ರೀಕರಭಾಷ್ಯಕಾರನು ಸ್ಥಲಗಳೆಂದು ಹೇಳಿದ್ದಾನೆ. ಇದು ಆತನಿಗೆ ಬಹಳ ಇಷ್ಟವಾದ ವಿಷಯವಾದುದರಿಂದ ಶಿವನಿಗೆ “ಅದ್ವಿತೀಯ ಷಟ್‌ಸ್ಥಲ ಪರಶಿವಬ್ರಹ್ಮ” ಎಂಬ ವಿಶೇಷಣವನ್ನು ಅನೇಕಸಲ ಉಪಯೋಗಿಸಿದ್ದಾನೆ. ಈ ವಿಶೇಷಣವು ಶಿವನಹೊರತು ಮತ್ತಾರಿಗೂ ಸಲ್ಲತಕ್ಕುದಲ್ಲವೆಂಬ ಅಭಿಪ್ರಾಯವನ್ನು “ಅದ್ವಿತೀಯ” ಶಬ್ದದಿಂದ ಶ್ರೀಕರಭಾಷ್ಯಕಾರನು ಸಾರಿದ್ದಾನೆ. ಈ ಪ್ರಸಂಗದಲ್ಲಿ ಜೀವನು ಭಕ್ತಾದಿ ಷಟ್‌ಸ್ಥಲ ಕ್ರಮವನ್ನು ಅನುಸರಿಸಿ ಶಿವತ್ವವನ್ನು ಸಂಪಾದಿಸುವ ಪದ್ಧತಿಯು ಶ್ರೀಕರಭಾಷ್ಯಕಾರನಿಂದ ನಿರೂಪಿತವಾಗಿಲ್ಲ. ಆದರೆ ಭಾಷ್ಯಕಾರನು ಈ ವಿಷಯವನ್ನೇ ಹೇಳಿಲ್ಲವೆಂಬುದು ಅಸಂಬದ್ಧ ವಿಧಾನವಾಗಿದೆ. ಶ್ರೀಕರ ಭಾಷ್ಯದ ಪ್ರಥಮಾಧ್ಯಾಯ ದ್ವಿತೀಯ ಸೂತ್ರದ ಕಡೆಯ ಭಾಷ್ಯದಲ್ಲಿ:—

ಯದ್ಭಕ್ತಸ್ಥಲಮಿತ್ಯಾಹುಸ್ತತ್ಸರ್ವಜ್ಞತ್ವಮುಚ್ಯತೇ ।
ಯನ್ಮಾಹೇಶ್ವರಕಂ ನಾಮ ಸಾ ತೃಪ್ತಿರ್ನಾಮ ಶಾಂಕರಿ ॥
ಯಂತ್ರಸಾದಭಿಧಂ ನಾಮ ಶಮ್ಭೋರ್ಬೋಧೋ ನಿರಂಕುಶಃ ।
ಯತ್ಪ್ರಾಣಲಿಂಗಕಂ ನಾಮ ತತ್ಸ್ವಾತಂತ್ರ್ಯಮುದಾಹೃತಂ ॥
ಯದಸ್ತಿ ಶರಣಂ ನಾಮ ಹ್ಯಲುಪ್ತಾ ಶಕ್ತಿರುಚ್ಯತೇ ।
ಯದೈಕ್ಯಸ್ಥಲಮೂರ್ಧ್ವಸ್ಥಂ ಹ್ಯನಂತಾ ಶಕ್ತಿರುಚ್ಯತೇ ॥

[ ಇತಿ ಜನ್ಮಾಧಿಕರಣಾಂತೇ ]

ಎಂದು ಭಕ್ತ, ಮಾಹೇಶ್ವರ, ಪ್ರಸಾದ, ಪ್ರಾಣಲಿಂಗ, ಶರಣ, ಐಕ್ಯ, ಸ್ಥಳಗಳನ್ನು ಭೇರೀನಿನಾದದಿಂದ ಹೇಳಿರುವುದು ಪುಸ್ತಕ ನೋಡದವರಿಗೆ ಗೋಚರವಾಗುವುದಿಲ್ಲವಷ್ಟೆ! ವೀರಶೈವನಿಗೆ ಆರು ಸ್ಥಲಗಳೇ ಅಲ್ಲ. ತದಂತರ್ಗತಗಳಾದ ನೂರೊಂದು ಸ್ಥಲಗಳಿವೆ. ಇವೆಲ್ಲವೂ ಶಿವಾಗಮಗಳಲ್ಲಿಯೂ ಸಿದ್ಧಾಂತಶಿಖಾಮಣಿಯಲ್ಲಿಯೂ ಹೇಳಿರುವವನ್ನು ತಿಳಿಯದೆ “ಈ ವಿ ವ ರ ಣ ವು ಎಂದಿನಿಂದ ಬರುತ್ತಿದೆಯೋ ಹೇಳಲಿಕ್ಕೆ ಆಧಾರಗಳಿಲ್ಲ” ವೆಂದು ನಾರಾಯಣರಾಯರು ಚಿಂತಿಸುತ್ತಿದ್ದಾರೆ. ಅವರ ಈ ಬರಹವು ಕೇವಲ ನಿರಾಧಾರವಾಗಿದೆ. ವೀರಶೈವಮತದ ಗ್ರಂಥಗಳನ್ನು ಅವಲೋಕಿಸದೆ ಕೇವಲ ಊಹೆಗಳಿಂದಲೇ ಮತಚರಿತ್ರೆಯನ್ನೂ ತತ್ತ್ವಗಳನ್ನೂ ನಿರೂಪಿಸುವುದು ಸುಲಭವಲ್ಲ.

ಶಿವತತ್ತ್ವಸಾರವನ್ನು ಮಲ್ಲಿಕಾರ್ಜುನ ಪಂಡಿತಾರಾಧ್ಯನು ರಚಿಸಿರುವುದು ಆಂಧ್ರದೇಶದಲ್ಲಿ ಸುಪ್ರಸಿದ್ಧವಾದ ವಿಷಯವು. ಅದನ್ನು ಪ್ರಕಟಿಸಿದ ಆಂಧ್ರಸಾಹಿತ್ಯ ಪರಿಷತ್ತಿನವರೂ ಶ್ರೀ ಕೊ॥



...ಗೋತಹ ಉದ್ದಾಮ ಪರಿಶೋಧಕರೂ ಅದನ್ನು ಪಂಡಿತಾರಾಧ್ಯರ ಕೃತಿಯೆಂದೇ

ನಿರ್ಣಯಿಸಿದ್ದಾರೆ. ಆ ಗ್ರಂಥದಲ್ಲಿ ಸ್ವತಃ ಮಲ್ಲಿಕಾರ್ಜುನ ಪಂಡಿತನೇ ;–

ಒಂಡೇನಿ ಮಲ್ಲಿಕಾರ್ಜುನ
ಪಂಡಿತುಡನ ನುಂಡುಕಂಟೆ ಪ್ರಮಥುಲಲೋ ನೆ
ನ್ನಂಡೊಕೊ ನೀ ಯಾಜ್ಞೋನ್ನತಿ
ನುಂಡಂ ಗಾಂತು ನನಿ ಕೊರುಚುಂಡದು ರುದ್ರಾ

ಎಂಬ ಪದ್ಯದಿಂದ ತಾನೇ ಈ ಶಿವತತ್ತ್ವ ಸಾರವನ್ನು ರಚಿಸಿದ್ದಾನೆಂಬದನ್ನು ಸ್ಪಷ್ಟಗೊಳಿಸಿದ್ದಾನೆ. ಆತನ ಅನಂತರದಲ್ಲಿದ್ದ ಪಾಲ್ಕುರಿಕೆ ಸೋಮನಾಥನು ತನ್ನ ಪಂಡಿತಾರಾಧ್ಯ ಚರಿತ್ರೆಯ ದೀಕ್ಷಾ ಪ್ರಕರಣದಲ್ಲಿ :–

ಅಂತ ಬಂಡಿತಮಲ್ಲಿಕಾರ್ಜುನಪ್ರಭವು . . . .
ಶಿವತತ್ತ್ವಸಾರ ಸಂಚಿತ ಮಹಾಮಹಿಮ
'ಶಿವತತ್ತ್ವಸಾರ' ಮ್ಮ ಶಿವಕೃತಿ ಬೊಗಡು

ಎಂಬ ಅಂಶದಿಂದಲೂ ಚತುರ್ವೇದಸಾರದಲ್ಲಿಯ ಮತ್ತೊಂದು ಪದ್ಯದಿಂದಲೂ ಮಲ್ಲಿಕಾರ್ಜುನ ಪಂಡಿತಾರಾಧ್ಯನೇ ಆ ಗ್ರಂಥವನ್ನು ರಚಿಸಿದ್ದಾನೆಂದು ಹೇಳಿದ್ದಾನೆ. ಆಂಧ್ರ ಲೋಕವೆಲ್ಲವೂ ಅದನ್ನೆ ನಿಜವೆಂದು ತಿಳಿದಿದೆ. ಆದರೆ ಶ್ರೀ ನಾರಾಯಣರಾಯರೂ ಇತ್ತೀಚಿಗೆ ತಾವು ಪ್ರಕಟಿಸಿದ ಆಂಧ್ರ ಪಂಡಿತಾರಾಧ್ಯ ಚರಿತ್ರೆಯ ಪೀಠಿಕೆಯಲ್ಲಿ [ಪುಟ ೭೯] ಶಿವತತ್ತ್ವ ಸಾರವನ್ನು ಪಂಡಿತಾರಾಧ್ಯನ ಕೃತಿಯೆಂತಲೇ ಬರೆದಿದ್ದಾರೆ. ಅದರೇ ಪ್ರಬುದ್ಧ ಕರ್ಣಾಟಕ ದ ಗತ ಲೇಖದಲ್ಲಿ "ಮಲ್ಲಿಕಾರ್ಜುನ ಪಂಡಿತಾರಾಧ್ಯನು ಶಿವತತ್ತ್ವಸಾರವನ್ನು ಬರೆಯಲಿಲ್ಲ ವೆಂದೇ ನನ್ನ ಅಭಿಪ್ರಾಯ" ವೆಂದು ಸಾರಿದ್ದಾರೆ. ೧೨ ನೆಯ ಶತಾಬ್ದಿಯ ಇಷ್ಟು ಸುಪ್ರಸಿದ್ಧ ವಾದ ಗ್ರಂಥವನ್ನು ೧೪ ನೆಯ ಶತಮಾನದವರೆಗೆ ಎಳೆಯುವದಕ್ಕಾಗಿ ಅವರು ತೋರಿಸಿದ ಯುಕ್ತಿಯು ಹೀಗಿದೆ – "ಸೋಮನಾಥನ ಪಂಡಿತಾರಾಧ್ಯ ಚರಿತ್ರದಲ್ಲಿ ಶಿವತತ್ತ್ವಸಾರವೆಲ್ಲಾ ಪ್ರತ್ಯಕ್ಷರವೂ ಸೇರಿದೆ. ಸೋಮನಾಥನಂತಹ ಮಹಾತ್ಮರಿಗೆ ಗ್ರಂಥಚೌರ್ಯವನ್ನು ಅಪಾ ದಿಸುವದಕ್ಕೆ ನ್ಯಾಯವಲ್ಲ . . . . ತಾನೇ ತನ್ನ ಗ್ರಂಥದಿಂದ ಕೆಲವು ಭಾಗಗಳನ್ನು ತೆಗೆದು ಪಂಡಿತಾರಾಧ್ಯನ ಹೆಸರಿನಿಂದ ಪ್ರಕಟಿಸಿರಬಹುದೆಂದು ನನಗೆ ತೋರತ್ತದೆ".

ಸೋಮನಾಥನಂತಹ ಮಹಾತ್ಮನು ಗ್ರಂಥಚೌರ್ಯಮಾಡುವುದು ಅನುಚಿತ ವಾಗಿದ್ದರೆ, ತಾನು ಸೃಷ್ಟಿಸಿದ ಪಂಡಿತಶಿರೋಮಣಿಯಾದ ಮಲ್ಲಿಕಾರ್ಜುನ ಪಂಡಿತನ ಹೆಸರಿನಿಂದ ಪ್ರಕಟಿಸಿದನೆಂಬುದು, "ಮದ್ಯಪಾನಮಾಡಿಲ್ಲ, ಮಾಂಸಭಕ್ಷಣ ಮಾಡಿದ್ದಾನೆ" ಎಂಬ ಹಾಗಿದೆ. ಅಖಂಡ ಪಂಡಿತನಾದ ಮಲ್ಲಿಕಾರ್ಜುನ ಪಂಡಿತಾರಾಧ್ಯನಿಂದ ಅನೇಕ ಗ್ರಂಥಗಳು ರಚಿಸಲ್ಪಟ್ಟಿದ್ದರೂ ಸೌಭಾಗ್ಯವಂಶದಿಂದ ಶಿವತತ್ತ್ವಸಾರವೊಂದು ಮಾತ್ರ ಲಭಿಸಿದೆ. ಅದು ಶೈಲಿಯಲ್ಲಿಯೂ ವಿಷಯನಿರೂಪಣ ಪದ್ಧತಿಯಲ್ಲಿಯೂ ಪ್ರತ್ಯೇಕತೆ ಯುಳ್ಳದ್ದಾಗಿ ಸೋಮನಾಥನ ಕವಿತೆಗಿಂತಲೂ ಭಿನ್ನತೆಯನ್ನು ಸ್ಪಷ್ಟಗೊಳಿಸಲು ಸಮರ್ಥ ವಾಗಿದೆ. ಅದನ್ನು ಸೋಮನಾಥನು ರಚಿಸಿರುನೆಂಬುದು ಕೇವಲ ಸಾಹಸದ ಮಾತು. ಅದನ್ನು ನೋಡಿಯೇ ಸೋಮನಾಥನು [illegible]

ಶಿವಯೋಗಸಾರವನ್ನೂ ರಚಿಸಿದ್ದಾರೆ. ಅನುಭವಸಾರವೆಂಬ ಕೃತಿಯಲ್ಲಿಯೇ ಶಿವತತ್ತ್ವಗಳನ್ನು ಸೋಮನಾಥನು ನಿರೂಪಿಸಿರುವಾಗ ಮತ್ತೊಂದ «ಶಿವತತ್ತ್ವಸಾರ» ವನ್ನು ಬರೆದು ಪಿಷ್ಟಪೇಷಣವಮಾಡುವ ಆವಶ್ಯಕತೆಯೇ ಇಲ್ಲ. ಸೋಮನಾಥನು ಆಂಧ್ರಭಾಷಾ ಪಾರಂಗತನೂ ವೇದವೇದಾಂತಾಭಿಜ್ಞನೂ ಆದ ಪ್ರೌಢ ಕವಿಯಾಗಿದ್ದಾನೆ. ಆವನು ವೇದೋಪನಿಷತ್ಸಾರಗಳನ್ನು ಹೇಳುವಾಗ ತನ್ನ ಕವಿತೆಯಲ್ಲಿ ಆಯಾ ವೇದವಾಕ್ಯಗಳನ್ನೆ ಹೊಂದಿಸಿದ್ದಾನೆ. ಇಂತಹ ಪ್ರಚಂಡ ಪ್ರತಿಭೆಯಿಂದ ಆತನ ದ್ವಿಪದಕಾವ್ಯವು ತುಂಬಿತುಳುಕುತ್ತಿದೆ. ಆದರಂತೆಯೇ ತನ್ನ ಪಂಡಿತಾರಾಧ್ಯ ಚರಿತ್ರೆಯಲ್ಲಿ ಶ್ರೀ ಮಲ್ಲಿಕಾರ್ಜುನ ಪಂಡಿತಾರಾಧ್ಯನ ಉಪದೇಶ ವಿಶೇಷಗಳನ್ನು ತಿಳಿಸುವದಕ್ಕಾಗಿ ಆತನ ಶಿವತತ್ತ್ವಸಾರವನ್ನೇ ಆಯಾ ವಾಕ್ಯಗಳಲ್ಲಿ ಸಂಗ್ರಹಿಸಿ ಸೋಮನಾಥನು ನಿರೂಪಿಸುತ್ತ ಗ್ರಂಥರಚನೆ ಮಾಡಿರುವುದು ಸಯುಕ್ತಿಕವಾಗಿಯೂ ಸಂಪ್ರದಾಯಶುದ್ಧವಾಗಿಯೂ ಇದೆ. ಪಂಡಿತಾರಾಧ್ಯನ ಸಿದ್ಧಾಂತವನ್ನು ಪಂಡಿತಾರಾಧ್ಯನ ವಾಕ್ಯಗಳಿಂದಲೇ ಹೇಳಿರುವ ಪದ್ಧತಿಯು ಪ್ರಶಂಸನೀಯವಾದುದಲ್ಲವೆ? ಇದನ್ನೇ ಗ್ರಂಥಚೌರ್ಯವೆಂದು ಹೇಳುವದಾದರೆ ಸುಪ್ರಸಿದ್ಧ ಆಚಾರ್ಯ ಗ್ರಂಥಗಳನ್ನೆಲ್ಲ ಆಧುನಿಕಕಲ್ಪಿತಗಳೆನ್ನಬಹುದು. ‹ವಿದ್ಯಾರಣ್ಯರ› ಪಂಚದಶ್ಯಾದಿ ಗ್ರಂಥಗಳಲ್ಲಿ ಶಾಂಕರಭಾಷ್ಯದ ಆನೇ ಸಿದ್ಧಾಂತವಾಕ್ಯಗಳು ತುಂಬಿರುವದರಿಂದ ವಿದ್ಯಾರಣ್ಯರೇ ಶಂಕರಭಾಷ್ಯವನ್ನು ಹುಟ್ಟಿಸಿರಬಹುದಲ್ಲವೆ! ಅಪ್ಪಯ್ಯದೀಕ್ಷಿತರ ರತ್ನತ್ರಯಪರೀಕ್ಷೆ, ಶಿವಾದ್ವೈತನಿರ್ಣಯ, ಶಿಖರಿಣೀಮಾಲ ಮೊದಲಾದ ಗ್ರಂಥಗಳಲ್ಲಿ ಶ್ರೀಕಂಠ ಶಿವಾಚಾರ್ಯನ ಭಾಷ್ಯಪಂಕ್ತಿಗಳೂ ಸಿದ್ಧಾಂತವೂ ತುಂಬಿರುವದರಿಂದ ಶ್ರೀಕರಭಾಷ್ಯವನ್ನು ಅಪ್ಪಯ್ಯದೀಕ್ಷಿತರೇ ಹುಟ್ಟಿಸಿರಬಹುದು. ಹೀಗೆಯೇ ಅನೇಕ ಗ್ರಂಥಗಳನ್ನು ತಲೆಕೆಳಗೆಮಾಡಬಹುದು.

ಶಿವತತ್ತ್ವಸಾರದ ಆಧುನಿಕತ್ವವನ್ನು ಹೇಳವದರಲ್ಲಿ ಒಂದು ರಹಸ್ಯವಿದೆ. ಆ ಗ್ರಂಥದಲ್ಲಿ ಗುರುಜಂಗಮ ನಾಮಗಳೂ ಶ್ರೀಪತಿ ಪಂಡಿತನಾಮವೂ ಬಂದಿವೆ. ಇವು ಶ್ರೀಪತಿ ಪಂಡಿತನ ವ್ಯಕ್ತಿತ್ವ ವೀರಶೈವಮತದ ಕಾಲವನ್ನು ೧೧ ನೆಯ ಶತಮಾನಕ್ಕಿಂತಲೂ ಹಿಂದೆ ಎಂದು ನಿರ್ಣಯಿಸಲು ಮುಖ್ಯ ಸಹಾಯಕಾರಿಗಳಾಗಿವೆ. ಇದು ರಾಯರಿಗೆ ಇಷ್ಟವಿಲ್ಲ. ಹೊರಗೆ ನೋಡುವದಕ್ಕೆ ಹಯವದನರಾಯರು ನಿರ್ಣಯಿಸಿದ ಶ್ರೀಕರಭಾಷ್ಯದ ಕಾಲವನ್ನು ಖಂಡಿಸಿದಹಾಗೆನಟಿಸಿ ಶಿವತತ್ತ್ವಸಾರವು ೧೪ ನೆಯ ಶತಮಾನದಲ್ಲಿ ಹುಟ್ಟಿದಂತೆ ಹೇಳಿದರೆ ಶ್ರೀಕರಭಾಷ್ಯ ಶ್ರೀಪತಿ ಪಂಡಿತರ ಕಾಲವೂ ಸಂಶಯಕಲ್ಲೋಲವಾಗುವದಷ್ಟೆ! ನಾರಾಯಣರಾಯರ ಈ ವೈಖರಿಯು ಚರಿತ್ರೆ ಪರಿಶೋಧನೆಯಲ್ಲಿ ಎಷ್ಟರಮಟ್ಟಿಗೆ ಸಹಾಯಕವಾಗುವುದೆಂಬುದನ್ನು ಸತ್ಯಶೀಲರಾಲೋಚಿಸಲಿ!

ಶಿವತತ್ತ್ವಸಾರದ ಕನ್ನಡ ಅನುವಾದದ ಪ್ರತಿಯೂ ಇತ್ತೀಚೆಗೆ ದೊರೆತಿದೆ. ಅದರ ಬಗ್ಗೆ ಶ್ರೀ ವೇ. ಪ್ರಭಾಕರಶಾಸ್ತ್ರಿಗಳ ಲೇಖನವನ್ನು ನಮ್ಮ ‘ವಿಭೂತಿ’ ವರ್ಷ ೨ ಸಂಚಿಕೆ ೪ ರಲ್ಲಿ ನೋಡಬಹುದು. ನಾನು ಹಿಂದೆ ಉದಹರಿಸಿದ ಮಲ್ಲಿಕಾರ್ಜುನ ಪಂಡಿತಾರಾಧ್ಯನ ಶಿವತತ್ತ್ವ ಸಾರದ ತೆಲುಗು ಪದ್ಯಕ್ಕೆ:–

ಧರೆಯೊಳಗೆ ಮಲ್ಲಿಕಾರ್ಜುನ ವರಪಂಡಿತನೆನಿಸುತಿಹುದರಿಂ ನಿನ್ನಾಜ್ಞಾ ।
...ಮಸಿಯಲ್ ಪ್ರಮಥರೊಳಗೆ ಸಿರಿಲೆಂದೀಕ್ಷಿಸುವ ನಿಮ್ಮ ಬಯಸುವನೀಶಾ ॥

ಎಂಬ ಕನ್ನಡ ಪದ್ಯವು ಕನ್ನಡ ಶಿವತತ್ತ್ವಸಾರದಲ್ಲಿಯೂ ಇರುವದರಿಂದ ಆಂಧ್ರ ಶಿವತತ್ತ್ವ ಸಾರವನ್ನು ಮಲ್ಲಿಕಾರ್ಜುನ ಪಂಡಿತಾರಾಧ್ಯನೇ ವಿರಚಿಸಿದ್ದಾನೆಂಬುದು ಸಿದ್ಧಾಂತವೇ ಸರಿ. ಕನ್ನಡಶಿವತತ್ತ್ವಸಾರದ ಕರ್ತೃತ್ವದ ವಿಷಯದಲ್ಲಿ ಇನ್ನೂ ವ್ಯಕ್ತಿನಿರ್ಣಯವಾಗಿಲ್ಲ. ನಾರಾಯಣರಾಯರಿಗೂ ಈ ವಿಷಯ ತಿಳಿಯುವದಕ್ಕಾಗಿ 'ವಿಭೂತಿ' ಸಂಚಿಕೆ ಕಳುಹಿಸಲಾಗಿದೆ.

"ಬಸವನಿಗೆ ಪೂರ್ವದಲ್ಲಿ ಈ ಅರ್ವಾಚೀನರೂಪದಿಂದ ವೀರಶೈವವು ಇತ್ತೆಂಬುದಕ್ಕೆ ಯಾವ ಆಧಾರವೂ ಇಲ್ಲ" ಎಂದು ಬರೆಯುವ ರಾಯರಿಗೆ ಮತ್ತೊಮ್ಮೆ ವೀರಶೈವ ಮತ ಗ್ರಂಥಗಳನ್ನು ಸರಿಯಾಗಿ ಪರಿಶೀಲಿಸಿ ತಮ್ಮ ಊಹೆಗಳನ್ನು ಸರಿಪಡಿಸಿಕೊಳ್ಳಬೇಕೆಂದು ನಿವೇದಿಸುತ್ತೇನೆ.

ಇನ್ನು ವೀರಶೈವರ ಕನ್ನಡ ವಚನಗ್ರಂಥಗಳ ಹೆಸರುಗಳನ್ನೇನೋ ಅವರು ಬಹಳವಾಗಿ ಉದಾಹರಿಸಿದ್ದಾರೆ. ಆದರೆ ಅವುಗಳಲ್ಲಿಯೂ ಕೂಡ "ಬರೀ ಭಕ್ತಿಶಿವಸಾಮರಸ್ಯ ಯಾಚನೆ" ಗಳಿದ್ದಂತೆ ರಾಯರು ಭಾವಿಸಿಸಿದ್ದರಿಂದ ಶ್ರೀ ರಾಯರು ಅವುಗಳನ್ನು ನೋಡದ ಅವುಗಳಲ್ಲಿರುವ ವಿಸ್ತಾರವಾದ ಷಟ್‌ಸ್ಥಳ — ಅಷ್ಟಾವರಣಾದಿಗಳನ್ನು ತಿಳಿದಿಲ್ಲವೆಂದು ಗೊತ್ತಾಗುತ್ತದೆ. ವಚನಗಳ ಕಾಲದ ವಿಷಯದಲ್ಲಿ ಒಂದು ತೊಡಕಿರುವುದೇನೋ ಸತ್ಯ. ಶ್ರೀ ರಂಗನಾಥ ದಿವಾಕರರು ತಮ್ಮ 'ವಚನಶಾಸ್ತ್ರರಹಸ್ಯ' ದಂತಹ ಹೆಬ್ಬೊತ್ತಿಗೆಯಲ್ಲಿಯೂ ವಚನಗಳ ಕಾಲದ ವಿಷಯವಾಗಿ ಜಾಣ್ಮೆಯಿಂದ ಮೌನವಹಿಸಿದ್ದಾರೆ. ವಚನಗಳ ವಿಷಯದಲ್ಲಿ ಪರಿಶ್ರಮಪಡುತ್ತಲಿರುವವರೂ ಅವುಗಳ ಕಾಲನಿಷ್ಕರ್ಷವಾಗಿ ಹೇಳುತ್ತಿಲ್ಲ- ಶ್ರೀ ಬಸವಾದಿಗಳ ಕಾಲದಲ್ಲಿಯೂ ಅವರಿಂದ ಹೇಳಲ್ಪಟ್ಟ ವಚನಗಳು ಪ್ರಚಾರದಲ್ಲಿದ್ದು ಅನಂತರದಲ್ಲಿ ಕ್ರಮವಾಗಿ ೧೬ನೆಯ ಶತಮಾನದ ಪ್ರಾಂತದಲ್ಲಿ ಈಗ ಕಾಣುವ ವಚನಗಳ ಪೂರ್ತಿಯಾಗಿ ಗ್ರಂಥರೂಪಕ್ಕೆ ಬಂದಿರಬಹುದೆಂದು ಕೆಲವು ಕಾರಣಗಳಿಂದ ನಾನು ನಂಬಿದ್ದೇನೆ. ಇದು ಸರಿಯಲ್ಲವೆಂದು ಸಪ್ರಮಾಣವಾಗಿ ಯಾರಾದರೂ ನಿರೂಪಿಸಿದರೆ ಅದರದಿಂದ ಸ್ವೀಕರಿಸುವದರಲ್ಲಿ ನನಗೆ ಸಂಕೋಚ- ವಿಲ್ಲ. ಆದರೆ ಪ್ರಾಚೀನರ ಮೂಲವಿಲ್ಲದಲೇ ಇತ್ತೀಚೆಗೆ ಯಾರೋ ಸಂಪೂರ್ಣ ಹೊಸದಾಗಿ ರಚಿಸಿ ಬಸವಾದಿಗಳ ಹೆಸರಿನಿಂದ ಪ್ರಸಿದ್ಧಮಾಡಿದ್ದಾರೆಂಬ ನಾರಾಯಣರಾಯರ ಸಿದ್ಧಾಂತವು ಮಾತ್ರ ಸಾಹಸದೂಡಕವೆಂದು ಹೇಳಬಹುದು. ಈಗಿನ ಗ್ರಂಥಗಳಲ್ಲಿಯ ಕೆಲವು ವಚನಗಳು ಆಯಾ ಪ್ರಾಚೀನ ವ್ಯಕ್ತಿಗಳಿಂದಲೇ ಹೇಳಲ್ಪಟ್ಟವಿರಬೇಕೆನ್ನುವಷ್ಟು ಸ್ಫೂರ್ತಿಯನ್ನೊಳಗೊಂಡಿವೆ.

"ವೀರಶೈವಾಚಾರ್ಯ ಪಂಚಕದಲ್ಲಿ ಕೆಲವರು ಬಸವನಿಗೆ ಪೂರ್ವಿಕರು, ಕೆಲವರು ಸಮಕಾಲಿಕರು, ಕೆಲವರು ಈಚೆಯವರು," ಎಂದು ರಾಯರು ಹೇಳಿಬಿಟ್ಟಿದ್ದಾರೆ. ಇದು ಕನ್ನಡ ಕವಿಚರಿತ್ರೆಯ ಸಂಗ್ರಹಾನುವಾದವೆಂತಲೂ ಹೇಳಬಹುದು.

ಶ್ರೀಕರಭಾಷ್ಯದ ಆದಿಯಲ್ಲಿ ಪ್ರಸಿದ್ಧನಾದ ರೇಣುಕಾಚಾರ್ಯನನ್ನೂ ತನ್ನ ಗುರುವಾದ ಏಕೋರಾಮಾಚಾರ್ಯನನ್ನೂ ಶ್ರೀಪತಿ ಪಂಡಿತನು ಸ್ತುತಿಸಿದ್ದಾನೆ. ದ್ವಿತೀಯಾಧ್ಯಾಯ ತೃತೀಯ ಪಾದದ "ಸಮಾಧ್ಯಭಾವಾಚ್ಚ ||೩೩||" ಎಂಬ ಸೂತ್ರ ಭಾಷ್ಯದಲ್ಲಿ ಮರುಳಸಿದ್ಧ (ವಾರುಕಾಚಾರ್ಯ) ನನ್ನೂ ಹೇಳಿದ್ದಾನೆ. ರೇಣುಕ – ಮರುಳ – ಏಕೋರಾಮರ ಹೆಸರುಗಳು ಭಾಷ್ಯದಲ್ಲಿ ಬಸವನಿಗೆ ... ಪೂರ್ವಿಕರೆಂತಲೇ ಸಹಜವಾಗಿ ನಾವು ... ಬಂದುದು ... ಗ್ರಹಿಸಬಹುದು. ... ಒಮ್ಮೆ ಮುಂದಿನ ಸಂಚಿಕೆಯಲ್ಲಿ ಪ್ರ...

# ನೀತಿಸಂಗ್ರಹ.

ಸಂಗ್ರಾಹಕರು:- ಶ್ರೀ ಶಂಕರ ಕೊಣ್ಣೂರು.

ಹೇಳಿದ ವಹಾತಂ ಕೇಳದೆ ।
ಏಳಿಗೆಯಿಂದೋಜಿಗೆಟ್ಟ ಮಡದೀಮಕ್ಕಳ ॥
ಆಳಿಕೆ ಬಾಳಿಕೆಗಿಂತಲು
ಬೋಳಾಗಿಯು ಮನೆಯ ಬಿಟ್ಟು ಹೋಹುದು ಲೇಸು ॥ ೧ ॥

ನೆಂಟರು ಬಂಟರು ದುಡ್ಡಿನ ।
ಗಂಟಿರುವನಕೆಲ್ಲ ಹೇಳಿದಂದದೆ ನಡೆವರ್ ॥
ಗಂಟಿಲ್ಲ ತೀರ್ದ ಮರುದಿನ ।
ನೆಂಟರೆ ಗಂಟಲಿಗೆ ಗಾಣ ಕವಿಕುಲರತ್ನಾ ॥ ೨ ॥

ಬಿಸಿಲೊಳಗೆ ಬಿದ್ದ ಮೊಸಳೆಯ ।
ನಸುವಳಿಯಷ್ಟಹಾಗೆ ತಂದು ನೀರೊಳೆ ಬಿಡಲಾ ॥
ಮೊಸಳೆ ಮರಳವನ ನುಂಗಿತು ॥
ಪಿಸುಣಂಗುಪಕಾರ ಮಾಡೆ ತಪ್ಪದು ಕೇಡು ॥ ೩ ॥

ಬಾಳಿಯ ಗಿಡವಡಿಯಲಿಹೆ ।
ಜ್ವಾಲಿಯ ಮರ ತಾನು ಹುಟ್ಟಿ ಬೆಳೆಯಲು ಮತ್ತಂ ॥
ಖೂಳರು ಹೆಚ್ಚಿದ ಠಾವಿಲಿ ।
ಬಾಳುವನಾಳಾಗಬಹುದೆ ಸತಸ ಕವೀಂದ್ರಾ ॥ ೪ ॥

ಅಲ್ಪನ ಗೆಳೆತನ ಸಲ್ಲದು !
ಸ್ವಲ್ಪಕ್ಕಂ ಕಲಹಮಾಡುವದು ತಾ ಸಲ್ಲಾ ॥
ಕಲ್ಪನೆಯು ಮೀರಸಲ್ಲದು ॥
ಬಲ್ಲಿಂ ಕಾರ್ಯಂಗಳಂ ನೆಗಳ್ವುದು ಸಲ್ಲಾ ॥ ೫ ॥

ಬಳಲಿದೆ ಜೇನ್ನೊಣ ಬಿಸಲಿನ ಸಮಯದೆ ।
ತೊಳಲುತ ಬಗೆ ಬಗೆ ಪುಷ್ಪಗಳ ॥
ಒಳಗಿಹ ಮಧುವನು ಕೂಡಿಸುವಂದದೆ ॥
...ಸವ ಮಾಡಲು ಸುಖವಹುದು ॥ ೬ ॥

ಬರೆಯುವದೋದುವದಲ್ಲದೆ ।
ಪರಿಭಾವಿಪುದಲ್ಲಿಗಲ್ಲಿ ಬಲ್ಲವರೆಡೆಯೊಳ್ ॥
ಸರಸ ಪ್ರಸಂಗ ಗೈಯಲು ।
ಸರಸ್ವತೀದೇವಿಯೊಲಿದು ಕೃಪೆಯಂ ಮಾಳ್ಪಳ್



ಶ್ರೀ ಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು

ಶ್ರೀ ಮದ್ಗಿರಿರಾಜ ಸೂರ್ಯಸಿಂಹಾಸನಾಧೀಶ್ವರ ಶ್ರೀ ೧೦೮

ಶ್ರೀ ಜಗದ್ಗುರು ವಾಗೀಶ ಪಂಡಿತಾರಾಧ್ಯ ಶಿವಾಚಾರ್ಯ ಮಹಾ ಸ್ವಾಮಿನಾಂ

ಸುವರ್ಣ ರಜತ ಶಿರ್ಯಗಾಂದೋಲಿಕಾ [ ಅಡ್ಡಪಲ್ಲಕ್ಕಿ ]

## ಮಹೋತ್ಸವಾಹ್ವಾನ ಪತ್ರಿಕಾ.



ರಾಣೇಬೆನ್ನೂರು ಪುರವಾಸಿಗಳಾದ ವೀರಶೈವ ಮಂಡಳಿಯವರು ಸವಿನಯಪೂರ್ವಕವಾಗಿ ಬಿನ್ನೈಸಿಕೊಳ್ಳುವದೇನಂದರೆ :—

ನಮ್ಮಗಳ ಪ್ರಾರ್ಥನಾ ಪ್ರಕಾರ ಶ್ರೀಮಹಾ॥ ॥ಸನ್ನಿಧಿಯವರು ಈ ವಿಕ್ರಮನಾಮ ಸಂವತ್ಸರದ ಮಾರ್ಗಶಿರ ಬ॥ ೧೧ ( ತಾ॥ ೨೪-೧೨-೧೯೪೦ ಮಂಗಳವಾರ ಪ್ರಾತಃಕಾಲ ೮ ಘಂಟೆಯಿಂದ ಸಕಲ ಬಿರುದಾವಳಿಗಳೊಡನೆ ದಯಮಾಡಿಸುತ್ತಾರಾದ ಪ್ರಯುಕ್ತ ಅತ್ಯಂತ ವಿಜೃಂಭಣೆಯಿಂದ ಜರುಗುವ ಶ್ರೀ ಜಗದ್ಗುರುಗಳವರ ಶಿರ್ಯಗಾಂದೋಲಿಕಾ ( ಅಡ್ಡಪಲ್ಲಕ್ಕಿ ) ಮಹೋತ್ಸವಕ್ಕೆ ಬಂಧುಮಿತ್ರಕಲತ್ರರೊಡನೆ ಆಗಮಿಸಿ, ಉತ್ಸವಭಾಗಿಗಳಾಗಿ ಶ್ರೀ ಮಹಾ ॥ ॥ ಸನ್ನಿಧಾನದ ದರ್ಶನಾಶೀರ್ವಾದಕ್ಕೆ ಪಾತ್ರರಾಗುವದಲ್ಲದೆ, ನಮ್ಮಗಳ ಮನಸ್ಸಂತೋಷ ಮಾಡಬೇಕಾಗಿ ಅರಿಸುತ್ತೇವೆ.

ರಾಣೇಬೆನ್ನೂರು )
ತಾ॥ ೧೦-೧೨-೧೯೪೦ )

ಶ್ರೀ ಮಹಾ॥ ॥ಸನ್ನಿಧಿಯ ಸೇವಾನಿರತರಾದ,
ವೀರಶೈವ ಮಂಡಳಿ.

# ಸೋನಾಮುಖಿ ಅಥವಾ [ನೆಲಾವರಿಕೆ].

ಕೆ. ಎಂ ಶಿತಿಕಂತಯ್ಯ ತೆಲಿಗಿ ಕಲ್ಮಠ. ವೈದ್ಯಪಂಡಿತ ಕಪತಿ
ಮುಕ್ಕಾಂ. ಗಂಗನರಸಿ ತಾಲೂಕು ಹರಿಹರ

ಪ್ರಪಂಚದಲ್ಲಿ ಆರೋಗ್ಯವನ್ನು ಕಳಕೊಂಡು ಅನಾರೋಗ್ಯದಲ್ಲಿ ಬಿದ್ದು ಹೊರಳಾಡತಕ್ಕವರು ಎಷ್ಟೋ ಜನರಿದ್ದಾರೆ. ನಮ್ಮ ಆರೋಗ್ಯವನ್ನು ಪುನಃ ತಂದುಕೊಳ್ಳಬೇಕಾದರೆ ಬಹಳಕಷ್ಟ. ಆದರೆ ಪರಮಾತ್ಮನು ಪ್ರತಿಯೊಬ್ಬ ಮನುಷ್ಯನು ರೋಗಾದಿಗಳಿಲ್ಲದಲೆ ಆರೋಗ್ಯವಂತರಾಗಿರಲೆಂದು ಪ್ರಪಂಚದಲ್ಲಿ ವನಸ್ಪತಿಗಳನ್ನು ಹುಟ್ಟಿಸಿರುವನು. ಈ ಪರಮಾತ್ಮನ ಅಂಶದಿಂದ ಜನಿಸಿರುವ ವನಸ್ಪತಿಗಳ ಗುಣಗಳನ್ನು ಕಂಡುಹಿಡಿಯಲು ಯಾರಿಂದಲೂ ಸುಲಭಸಾಧ್ಯವಲ್ಲ. ಕೆಲವರು ವನಸ್ಪತಿಗಳಿಗೆ ಒಪ್ಪುವದಿಲ್ಲ. ಆದರೆ ವನಸ್ಪತಿಗಳಿಂದ ಗುಣವಾಗುವಷ್ಟು ರೋಗಗಳು ಇನ್ನ್ಯಾತರಿಂದಲೂ ಗುಣವಾಗಲರಿಯವೆಂಬುದು ವನಸ್ಪತಿಗಳ ಸೇವನೆಯಿಂದ ತಿಳಿಯುವುದು. ವನಸ್ಪತಿಗಳಲ್ಲಿ ಸೋನಾಮುಖಿ ( ನೆಲಾವರಿಕೆ ) ಎಂಬ ಮೂಲಿಕೆಯಿಂದ ಗುಣವಾಗತಕ್ಕ ರೋಗಗಳನ್ನು ನೋಡಿದರೆ ಬಹಳ ಆಶ್ಚರ್ಯವಾಗುತ್ತದೆ.

ಈ ಮೂಲಿಕೆಯನ್ನು ಆದಿತ್ಯವಾರದ ದಿನಶುಚಿರ್ಭೂತವಾಗಿ ಸೂರ್ಯೋದಯ ಕಾಲಕ್ಕೆ ಹೋಗಿ ತನ್ನ ನೆರಳು ಗಿಡದಮೇಲೆ ಬೀಳದಂತೆ ಅದಕ್ಕೆ ಅಷ್ಟವಿಧಾರ್ಚನೆಯಿಂದ ಪೂಜಿಸಿ ಅದನ್ನು ಕಿತ್ತು ತಂದು ನೆರಳಲ್ಲಿ ಒಣಗಿಸಿ ಚೂರ್ಣವನ್ನು ಮಾಡಿಟ್ಟುಕೊಂಡು ದಿನಂಪ್ರತಿ ಆ ಚೂರ್ಣವನ್ನು ಜೇನುತುಪ್ಪದಲ್ಲಿ ಒಂದು ದುಡ್ಡು ತೂಕ ಸೇವನೆಮಾಡಿದರೆ ವೀರ್ಯವೃದ್ಧಿ. ಬೆಲ್ಲದಲ್ಲಿ ತಕ್ಕೊಂಡರೆ ಶರೀರದಲ್ಲಿಯ ದುರ್ಗಂಧವಾಸನೆಯು ಹೋಗುವದು. ಗರುಗದ ಸೊಪ್ಪಿನರಸದಲ್ಲಿ ತೆಗೆದುಕೊಂಡರೆ ನಪುಂಸಕತ್ವಹೋಗುವದು. ಬೇವಿನ ರಸದಲ್ಲಿ ತಕ್ಕೊಳ್ಳಲು ವಾಯುಗಡ್ಡೆ ಹೋಗುವದು. ತುಂಬೆರಸದಲ್ಲಿ ಸೇವಿಸಲು ಕಣ್ಣಿನೊಳಗಿನ ಕ್ರಿಮಿ ನಾಶವಾಗುವದು. ಕೀನೆಲ್ಲಿರಸದಲ್ಲಿ ತಕ್ಕೊಂಡರೆ ಕೆಮ್ಮು ಗೂರು ಹೋಗುವವು. ಒಳ್ಳೆಣ್ಣೆಯಲ್ಲಿ ಸೇವಿಸಲು ಸರ್ಪನವಿಷವಿಳಿಯುವದು. ಕರಿಎಕ್ಕೆಸೊಪ್ಪಿನ ರಸದಲ್ಲಿ ತೆಗೆದುಕೊಂಡರೆ ಸನ್ನಿಪಾತ ನಾಶ. ಲವಂಗದ ರಸದಲ್ಲಿ ತಕ್ಕೊಂಡರೆ ಪುರುಷತ್ವವು ಬರುವದು. ಬಜೆಯಲ್ಲಿ ತಕ್ಕೊಳ್ಳಲು ವಾಯುಗುಲ್ಮ ಹೋಗುವವು. [illegible] ತಕ್ಕೊಳ್ಳಲು ಕೈ ಶೂಲಿಯು

ನಾಶವಾಗುವದು. ಕರಿಆಕಳಬೆಣ್ಣೆಯಲ್ಲಿ ತಕ್ಕೊಂಡರೆ ಬಹಳ ಮಾರ್ಗನಡೆಯುವನು. ನೆಲ್ಲಕ್ಕಿತೊಳೆದನೀರಿನಲ್ಲಿ ತಕ್ಕೊಳ್ಳಲು ವಾಯುಶೂಲಿಹೋಗುವದು. ಲಿಂಬಿ ಹುಳಿಯಲ್ಲಿ ಸೇವಿಸಲು ಹೊಟ್ಟೆಯೊಳಗಿನ ಕ್ರಿಮಿನಾಶವಾಗುವದು. ಶೋಂಠಿಪುಡಿ ನೀರಿನಲ್ಲಿ ಇದನ್ನು ಸೇವಿಸಲು ಜ್ವರಹಾರಿ ನೆಲ್ಲಿಕಾಯಿರಸದಲ್ಲಿ ಕೊಟ್ಟರೆ ಕೆಮ್ಮು, ಬಾರಿಕಾಯಿರಸದಲ್ಲಿ ಕೊಟ್ಟರೆ ಮೈನೋವು ಹಾರ. ಸವತೀಕಾಯಿ ರಸದಲ್ಲಿ ಕೊಟ್ಟರೆ ಎಂತಹ ಪಿತ್ತನಿದ್ದರೂ ನಾಶವಾಗುವದು. ಕಾಡಕವಡೀಕಾಯಿ ರಸದಲ್ಲಿ ಕೊಟ್ಟರೆ ಹೊಟ್ಟೆಶೂಲೆ ಮಣ್ಣು ಲವಂಗದ ಪುಡಿಯಲ್ಲಿ ಕೊಟ್ಟರೆ ಕೈಬಾಯುವದು ಮೈಬಾಯುವದುನಾಶವಾಗುವದು. ಆಕಳ ಮೊಸರಲ್ಲಿ ಸೇವಿಸಿದರೆ ಇಕ್ಕುಮುದ್ದು ಹೋಗುವದು. ಆಕಳತುಪ್ಪದಲ್ಲಿ ಸೇವಿಸಲು ಶರೀರಬಲವಾಗುವದು. ಕಾಳ್ಸಿಕಲ್ಲುಸಕ್ಕರೆಯಲ್ಲಿ ಸೇವಿಸಲು ಹದಿನೇಟುಬಗೆ ಕಾವು ಹಾರ. ಸಕಲ ರೋಗಕ್ಕೂ ಒಂದು ಮದ್ದು ತೂಕ

ಚೂರ್ಣವನ್ನು ೨೭ ದಿವಸ ಸೇವಿಸಬೇಕು-

ಪಥ್ಯ :-- ಪ್ರತಿಯೊಂದಕ್ಕೂ ಶಲ್ಪಿ ಬಿಡಬೇಕು.

ಸೂಚನೆ :--- ಮಹನೀಯರೇ

ನಮ್ಮಲ್ಲಿ ಶಾಸ್ತ್ರೋಕ್ತ ತಯಾರಿಸಿದ ಶಂಖಭಸ್ಮ, ಶಿಲಾಜಿತ ಭಸ್ಮ, ತವರ ಭಸ್ಮ, ತಾಮ್ರಭಸ್ಮ ಮುಂತಾದವೆಲ್ಲ ಸಿಕ್ಕುತ್ತವೆ. ಅಲ್ಲದೆ ವನಸ್ಪತಿಗಳಿಂದ ತಯಾರಿಸಿದ ಅನೇಕ ಔಷಧಿಗಳು ಅತಿ ಶುಲಭಕ್ರಯಕ್ಕೆ ದೊರೆಯುತ್ತವೆ.

## ಸೂಚನೆ.

ತಾವು ಈ ಹಿಂದೆ ಧರ್ಮರಾಜ್ಯ ಮಾಸಪತ್ರಿಕೆಗೆ ಆಜೀವಪೋಷಕ, ಪೋಷಕ ಸಹಾಯಕರಾಗಲು ಒಪ್ಪಿದ್ದ ವಿಷಯ ತಿಳಿಯಷ್ಟೆ, ಆಬಗ್ಗೆ ಸಲ್ಲತಕ್ಕ ದ್ರವ್ಯವು ನಮ್ಮ ಆಫೀಸಿಗೆ ಈವರೆಗೂ ಪಾವತಿಯಾಗಲಿಲ್ಲ. ತಮ್ಮಂಥ ಉದಾರ ಹೃದಯಿಗಳ ಸಹಾಯ ಸಹಕಾರಗಳಿಂದಲೇ ನಡೆಯಬೇಕಾಗಿರುವ ಈ ಸಂಸ್ಥೆಗೆ ತಾವು ವಾಗ್ದಾನ ದ್ರವ್ಯವನ್ನು ಕೂಡಲೇ ಕಳುಹಿಸುವಿರಾಗಿ ಕೋರುತ್ತೇವೆ.

ತಮ್ಮ ವಿನೀತ ಸಂಪಾದಕ:—

# ಇಂದಿನ ಸಮಾಜ.

ಲೇಖಕರು ಎಂ. ವಿ. ಮಠದ.

ಹಿಂದೊಂದು ಕಾಲದಲ್ಲಿ ನಮ್ಮ ಸ ಮಾ ಜ ರಚನೆಯು ಪರದೇಶದ ಪ್ರವಾಸಿಗಳಿಂದ ಹೊಗಳಲ್ಪಟ್ಟು ಸರ್ವರ ಆದರಣೆಗೆ ಪಾತ್ರವಾಗಿತ್ತೆಂದು ಅಂದಿನ ಇತಿಹಾಸದಿಂದ ನಮಗೆ ತಿಳಿದುಬರುತ್ತದೆ. ಅಂದಿನಕಾಲದಲ್ಲಿ ಕುಟುಂಬದ ಯಜಮಾನನೇ ಸರ್ವಸೂತ್ರಗಳನ್ನು ಕೈಯಲ್ಲಿಟ್ಟುಕೊಂಡು ಕುಟುಂಬದ ಎಲ್ಲ ಜನರಿಗೂ ಅವರವರ ಯೋಗ್ಯತೆಗನುಸರಿಸಿ ಕೆಲಸಗಳನ್ನು ಹಂಚಿಕೊಡುತ್ತಿದ್ದನು. ಆದ್ದರಿಂದ ಅಂದು ಆಲಸ್ಯತನಕ್ಕೆ ಅಸ್ಪದವಿದ್ದಿಲ್ಲ. ಅಂದು ಕೆಲಸಮಾಡುವದರಲ್ಲಿ ಗೌರವವಿದ್ದಿತೇ ವಿನಃ ಇಂದಿನಂತೆ ಕೆಲಸದಲ್ಲಿ ಗೌರವವನ್ನು ಹುಡುಕುತ್ತಿರಲಿಲ್ಲ.

ಎಂದಿನಿಂದಲೂ ನಮ್ಮ ಸಮಾಜವು ಕೃಷಿಕರ್ಮವನ್ನೇ ಮುಖ್ಯ ಉದ್ಯೋಗವನ್ನಾಗಿರಿಸಿಕೊಂಡಿದೆ. ಅದಕ್ಕೆ ಭರತಖಂಡವು ಒಕ್ಕಲಿಗರನಾಡು ಹಳ್ಳಿಗಳದೇಶ ಎಂದು ಹೆಸರು ಪಡೆದಿದೆ. ಪರದೇಶದಲ್ಲಿದ್ದಂತೆ ನಮ್ಮಲ್ಲಿ ದೊಡ್ಡದೊಡ್ಡ ಫ್ಯಾಕ್ಟರಿಗಳು ಕಡಿಮೆ. ಅದಕ್ಕೆ ತಕ್ಕಷ್ಟು ಕಾರಣಗಳು ಇಲ್ಲದೇ ಇಲ್ಲ. ಹಿಂದಿನವರು ಇದೇ ಪುಣ್ಯವಾದ ಭೂಮಿಯಲ್ಲಿ ಅತ್ಯುತ್ತಮವಾದ ಪೈರುಗಳನ್ನು ಬೆಳೆದು ದೇಶವನ್ನು ಸಂಪತ್ತಿನಿಂದ ತುಂಬಿಸಿ ಭಾರತವು ಚಿನ್ನದನಾಡೆಂದು ಅದರ ವೈಭವ ಎಂದಿಗೂ ಸವೆಯದಿದ್ದಿದೆ. ಪರದೇಶದ ಎಷ್ಟೋ ಕುಟುಂಬಗಳು ತಮ್ಮ ಹೊಟ್ಟೆಯಪಾಡಿಗಾಗಿ ಇಲ್ಲಿ ಬಂದು ನೆಲಸಿದರು.

ಅಂದು ಆಸ್ಥಿತಿಯಲ್ಲಿದ್ದಂಥ ಕೃಷಿಕರ್ಮವು ಇಂದು ತೀರಾ ಹೀನಾವಸ್ಥೆಗೆ ಬಂದಿದೆ. ಒಕ್ಕಲತನಮಾಡುವದು ತಮ್ಮ ತಮ್ಮ ಗೌರವಕ್ಕೆ ಸಲ್ಲಿದ್ದೆಂದು ಅದು ಅತಿ ಕನಿಷ್ಠತರಗತಿಯವರ ಕೆಲಸವೆಂದೂ ಭಾವನೆಯು ಇಂದಿನವರಲ್ಲಿ ಬಲವಾಗಿ ಬೇರೂರಿದೆ, ವ್ಯರ್ಥವಾಗಿ ಕಾಲಹರಣವಾದರೂ ಚಿಂತೆಯಿಲ್ಲ. ಹೊಲದಲ್ಲಿ ನಿಂತು ಕೆಲಸಮಾಡುವದು ನಿಂದಿನವರಿಂದಾಗದು. ಅಂತೆಯೇ ನೆಲ್ಲು ಬೆಳೆಯಬೇಕಾದಲ್ಲಿ ಹುಲ್ಲು ಬೆಳೆಯಹತ್ತಿದೆ. ಒಕ್ಕಲಿಗನಿಗೆ ಒಪ್ಪತ್ತಿಗೆಕೂಡ ಸಾಕಾಗುವಷ್ಟು ಆಹಾರವು [illegible]

ಅದರಹಿಂದೆ ಅವನ ಸ್ವೈಗಳ್ಳತನವೆಂದು ಒಪ್ಪಿಕೊಳ್ಳದೆ ವಿಧಿಯಿಲ್ಲ. ಹಿಂದಿನವರು ಬೆಳೆಯುತ್ತಿದ್ದ ಭೂಮಿಯಲ್ಲಿ ಇಂದಿನವರು ಕಾಲಭಾಗದಷ್ಟು ಪೈರನ್ನು ಸಹ ತೆಗೆಯಲಸಮರ್ಥರಿರುವರು. ಅಂದಮೇಲೆ ಇವರ ಉದ್ಧಾರವಾಗುವದಾದರೂ ಹೇಗೆ ? ಇದಕ್ಕೆ ಕಾರಣವಿಷ್ಟೇ, ಇಂದಿನ ಒಕ್ಕಲಿಗನ ಮನಸ್ಸು ಸುಖದ ಕಡೆ ಹೆಚ್ಚು ಒಲಿದಿದೆ ಆದರೆ ಅದನ್ನು ಸಾಧಿಸಿಕೊಳ್ಳಲು ಕಷ್ಟವು ಬೇಡಾಗಿದೆ. ಹರಟೆಗೆ ಸಾಕಷ್ಟು ಸಮಯವಿದೆ. ಕೆಲಸಕ್ಕೆ ಸಮಯವಿಲ್ಲ. ಎರಡನೇಯವರ ಹುಳುಕುಗಳನ್ನು ಆಡಿಕೊಳ್ಳಲು ಬೇಕಾದಷ್ಟು ವೇಳೆಯಿದೆ. ತನ್ನ ಹುಳುಕನ್ನು ನೋಡಿ ತಿಳಿದುಕೊಳ್ಳಲಿಕ್ಕೆ ವೇಳೆಯೇ ಇಲ್ಲ. An idle brain is the devil's workshop. ಎಂಬಂತೆ ಇಂದಿನ ಆಲಿಶಿ ಒಕ್ಕಲಿಗನು ಎಲ್ಲ ದುರ್ಗುಣಗಳಿಗೂ ತವರ್ಮನೆಯಾಗಿ ತನ್ನ ನಿಜವಾದ ಕರ್ತವ್ಯದ ದಾರಿಯಿಂದ ಚ್ಯುತನಾಗಿದ್ದಾನೆ. ಇದರಿಂದ ಮುಕ್ತನಾಗುವವರೆಗೆ ಆವನ ಉನ್ನತಿಯು ಕನಸೇ ಸರಿ.

ಇಂದಿನ ಆರ್ಥಿಕ ಪರಿಸ್ಥಿತಿಯುಕೂಡಾ ಹದಗೆಟ್ಟುಹೋಗಿದೆ. ಅದಕ್ಕೆ ಇಂದಿನ ಸರಕಾರವು ಕೊಂಚಮಟ್ಟಿಗೆ ಜವಾಬ್ದಾರಿಯಾದರೂ ಬರೀ ಸರಕಾರವನ್ನು ದೂರುವದರಿಂದ ನಮ್ಮ ಆರ್ಥಿಕ ಪರಿಸ್ಥಿತಿಯು ಸುಧಾರಣೆಯಾಗಲಾರದು. ಇಂದಿನ ಯುವಕರಿಗೆ ಒಂದು ಗುರಿಯಿಲ್ಲ. ಸಾಧನೆಯಿಲ್ಲ. ಕಲಿಯುವದು ನೌಕರಿಗಾಗಿ ಅದು ದೊರೆಯದಿದ್ದರೆ ಅವರ ಬಾಳು ಕೀಳಾಗಿ ಬಾಳೆಲ್ಲ ಗೋಳಾಗುವದು. ಇಂದಿನ ವಿದ್ಯೆಯಾದರೂ ನಮ್ಮನ್ನು 'ಗುಲಾಮಗಿರಿಯಲ್ಲಿ ದೂಡುತ್ತಿದೆಯೇ ವಿನಃ ನಮಗೆ ಸ್ವತಂತ್ರತೆಯಿಂದ ಹೊಟ್ಟೆತುಂಬಿಸಿಕೊಳ್ಳಲು. ಇದರಿಂದ ಸಾಧನವೇ ಇಲ್ಲ. ಆದ್ದರಿಂದ ಇಂದಿನ ವಿದ್ಯಾದಿಶೆಯು ಬದಲಾಗಬೇಕಾಗಿದೆ. ಅದಕ್ಕಾಗಿ ಬಲವಾದ ಪ್ರಯತ್ನಗಳು ಕೂಡ ನಡೆಯಹತ್ತಿವೆ. ವಿದ್ಯಾರ್ಥಿಯು ಕಾಲೇಜಿನಿಂದ ಬರುತ್ತಲೇ ಸ್ವತಂತ್ರಜೀವನವನ್ನು ನಡಿಯಿಸುವಷ್ಟು ಸ್ವತಂತ್ರನಾಗಿರಬೇಕು. ಮತ್ತೊಬ್ಬರಕೃಪೆಗೆ ಒಳಪಟ್ಟೋ ಭಾರವಾಗಿಯೇ ನಡೆಯಿಸುವ ಹೇಯ್ಯವೃತ್ತಿಯು ನಾಶವಾಗಬೇಕು. ಹಿಂದಿನಕಾಲದಲ್ಲಿ ಇಂದಿನಂತೆ ಕಾಲೇಜುಗಳಿರಲಿಲ್ಲವೆಂಬ ಅಭಿಪ್ರಾಯ ಕೆಲವರಲ್ಲಿದೆ. ಬೌದ್ಧಕಾಲದಲ್ಲಿ ಸುನಂದದಲ್ಲಿದ್ದ ವಿದ್ಯಾಲಯವೊಂದರಲ್ಲಿಯೇ ನಾಲ್ಕುಸಾವಿರ ವಿದ್ಯಾರ್ಥಿಗಳಿದ್ದರೆಂದ ಮೇಲೆ ಆಗಿನ ವಿದ್ಯಾರ್ಥಿಗಳನ್ನು ನಾವು ಹೊಗಳದೇ ಗತ್ಯಂತರವಿಲ್ಲ. ಒಟ್ಟಿನ

ಮೇಲೆ ಇಂದಿನ ಶಾಲೆ ಕಾಲೇಜುಗಳಲ್ಲಿ ಕೈಗಾರಿಕೆ ಶಿಕ್ಷಣದ ಪ್ರವೇಶವಾಗಬೇಕು ವಿದ್ಯಾರ್ಥಿಯು ಸ್ವತಂತ್ರವಾಗಿ ಜೀವನ ನಡೆಸುವಷ್ಟು ಹುರುಪಿನವನಾಗಿರಬೇಕು. ಅಂದರೆ ಇಂದಿನ ಭಾರತದಲ್ಲಿ ಸಹಜವಾಗಿಯೇ ಬದಲಾವಣೆಗಳಾಗುತ್ತವೆ.

ಈಗ ರೂಢಿಯಲ್ಲಿರುವ ಬಾಲವಿವಾಹ ವಿಷಮವಿವಾಹಗಳು ನಮ್ಮ ಅವನತಿಯ ಕಾರ್ಯವನ್ನು ಯಶಸ್ವಿಯಾಗಿ ನಡೆಯಿಸಿವೆಯೆಂಬುದು ನಿರ್ವಿವಾದವಾದ ಮಾತು, ' ಅಷ್ಟವರ್ಷಾತ್ ಭವೇತ್ ಕನ್ಯಾ ' ಎಂದು ಮನುವು ಒಂದು ಕಡೆಯಲ್ಲಿ ಹೇಳಿರುವ ನಂತೆ, ಅಂದಮೇಲೆ ಎಂಟುವರ್ಷತ್ತ ತುಂಬುತ್ತಲೇ ಕನ್ಯೆಗೆ ವಿವಾಹವಾಗೇತೀರ ಬೇಕೆಂಬುದು ಪೌರಾಣಿಕರ ವಾದ. ವೈದಿಕರ ಮತ. ಈ ವಾದದಲ್ಲಿ ಹುರುಳಿಲ್ಲ. ತಿರುಳೂ ಇಲ್ಲ. ಇದು ನಿಜವೆಂದೂ ಪ್ರಮಾಣಬದ್ಧವೆಂದೂ ನಂಬಬೇಕಾದಲ್ಲಿ ಪೂರ್ವದಲ್ಲಿ ನಮ್ಮಲ್ಲಿ ಪ್ರೌಢವಿವಾಹವು ಇದ್ದಿಲ್ಲವೆಂದು ಒಪ್ಪಿಕೊಳ್ಳಬೇಕಾಗುತ್ತದೆ. ಆದರೆ ನಾವು ಪುರಾಣಗಳಿಲ್ಲಿಯೇ ನೋಡುವ ದ್ರೌಪದಿ ಸ್ವಯಂವರ ದಮಯಂತೀ ಸೀತಾಸ್ವಯಂವರ ಸಾವಿತ್ರಿ ಸ್ವಯಂವರ ಇವೇ ಮೊದಲಾದವುಗಳು ಅಸಂಬದ್ಧವಾಗು ವದಿಲ್ಲವೇ ಇಷ್ಟು ತಿಳುವಳಿಕೆಯು ೭-೮ ವರ್ಷದ ಬಾಲಕಿಯರಲ್ಲಿರುವದು ಶಕ್ಯವೇ? ಎಂದಿಗೂ ಇಲ್ಲ. ಆದ್ದರಿಂದ ಆಗ ನಮ್ಮಲ್ಲಿ ಪ್ರೌಢವಿವಾಹವೇ ಬಳಿಕೆಯಲ್ಲಿತ್ತೆಂದು ಒಪ್ಪಲೇಬೇಕಾಗುವದು. ನಿಜಕ್ಕೂ ಇದೇ ಸುಖದ ದಾರಿ. ಏನೂ ಅರಿಯದ ಬಾ ಲಕಿಯನ್ನು ಬಲಾತ್ಕಾರದಿಂದ ತಾಯಿತಂದೆಗಳು ತಮಗಿಷ್ಟಬಂದವರಿಗೆ ಬಾಲಿಕೆಯನ್ನು ಬಲಿಯಾಗಿ ಅರ್ಪಿಸುವದು ಎಂದಿಗೂ ಸುಖಕ್ಕಲ್ಲ. ಅದು ಅನ್ಯಾಯಕ್ಕೆ ಆಗರ. ಈ ವಿಷಯದಲ್ಲಿ ಪರಮ ಸಾಧ್ವಿಯಾದ ಹೊನ್ನಮ್ಮನು ಹೇಳಿರುವದನ್ನು ಕೇಳಿ ........ ಸ್ನೇಹ ನೆಂಟತನ ಪತ್ನಿಗೆಗಳಂದದೆ ಕರಗಿ ಕುಲ ಜನ್ಮನ ರೂಪು ಕುಂದಿದ ನಡೆವೆಣಕೆ ಈಯಲಾಗದು. ಪೆಣ್ಣ .... ಇಡೀ ಮಾನವನ ಸಮಾಜವನ್ನೇ ಶೂಲದಿಂದ ತಿವಿದು ಎಚ್ಚರಿಸಿದಂತಿವೆ. ಮಹಾಸಾಧ್ವಿಯ ಈ ವಚನಗಳು.

ಬಾಲವಿವಾಹದಷ್ಟೇ ಅಥವಾ ಅದಕ್ಕೂ ಹೆಚ್ಚು ಅನರ್ಥಗಳು ವಿಷಮ ವಿವಾಹ ದಿಂದುಂಟಾಗುತ್ತವೆ. ಇದಕ್ಕೆ ಪ್ರತಿನಿತ್ಯವೂ ನಡೆಯುತ್ತಿರುವ ವಿವಾಹ ವಿಚ್ಛೇದಗಳೂ ಆತ್ಮಹತ್ಯಗಳೂ ಸಾಕ್ಷಿಯಾಗಿವೆ. ...ವಕ ಬಾಲಿಕೆಯನ್ನು ...ಮ ಪುರುಷನೊಂದಿಗೆ

ಬಲಾತ್ಕಾರದಿಂದ ವಿವಾಹಮಾಡಿದರೆ ಸಂಸಾರದಲ್ಲಿ ಅವಳಿಗಾವ ಸುಖ. ದುಃಖವಾಗಿ ಮಾರ್ಪಟ್ಟರೆ ಅದರಲ್ಲಿ ಆಶ್ಚರ್ಯವೇನು ? ಹಣದಿಂದ ಸುಖದೊರೆಯು ತ್ತೆಂಬುದು ತಪ್ಪು ಕಲ್ಪನೆ. ಒಳಗಿರ್ಪುದೊಂದು ನೆವಂ ಪದಾರ್ಥಗಳತಾಂ ಕಟ್ಟಳ್ಕರಿಂ ಕಟ್ಟುಗುಂ ತಿಲಮಾತ್ರಂ ಬಹಿರಂಗಕಾರಣಗಳಂ ಪ್ರೇಮಗಳಾಪ್ಪೈರಾಸವು ಆದ್ದರಿಂದ ವಿಷಮವಿವಾಹವು ಮಹಾ ಅನರ್ಥಕಾರಿ

ಆದರಂತೆ ಪುನರ್ವಿವಾಹವು ಬಳಕೆಯಲ್ಲಿ ಬರಬೇಕು. ಇಲ್ಲದ ಸಲ್ಲದ ಕೆಲಸ ಗಳನ್ನು ಮಾಡಿ ಶಿಸುಹತ್ಯ ಗರ್ಭಹತ್ಯಗಳನ್ನು ಮಾಡುವದಕ್ಕಿಂತಲೂ ಬೇ ರೊ ಬ್ಬ ಸಂಗಡಿಗನೊಂದಿಗೆ ಸುಖವಾಗಿ ಸಂಸಾರಮಾಡುವದು ಮೇಲು. ಇದನ್ನು ಸಮಾಜವು ಒಪ್ಪಿ ತನ್ನ ಸಮ್ಮತಿಯನ್ನು ಕೊಡಲೇಬೇಕಾಗಿದೆ. ಹಿಂದಿನವೆಲ್ಲವೂ ಹೊನ್ನಲ್ಲ. ಇಂದಿನವೆಲ್ಲವೂ ಕಸವಲ್ಲ. ಪರಿಸ್ಥಿತಿ ಅಂಟಿಕೊಂಡು ಕೆಲಸಮಾಡುವದು ಜಾಣ್ಮೆಯ ಲಕ್ಷಣ. ಯಾವ ಧರ್ಮಶಾಸ್ತ್ರವು ಏನನ್ನೇ ಹೇಳಲಿ ಎದೆಯಕರೆಗಿಂತಲೂ ಹೆಚ್ಚಿನ ಧರ್ಮವಿಲ್ಲ. ಇದನ್ನೇ ಕೆ. ವಿ. ಪುಟ್ಟಪ್ಪನವರು ತಮ್ಮದೊಂದು ಗೀತೆಯಲ್ಲಿ ಈರೀತಿ ಹೇಳಿರುವರು.

“ಕಾಲಕ್ಕೆ ತಕ್ಕಂತೆ ದೇಶಕ್ಕೆ ತಕ್ಕಂತೆ ನಮ್ಮ ಹೃದಯವೇ ನಮಗೆ ಸಂಧರ್ಮ ಸೂತ್ರ ” ಆದ್ದರಿಂದ ಧರ್ಮಶಾಸ್ತ್ರದ ಪುಟಗಳನ್ನು ತಿರುವುತ್ತ ಕೂಡ್ರುವದು ಬೇಡ. ನಮ್ಮಮುಂದೆ ನಡೆದಿರುವ ಅನ್ಯಾಯಗಳಿಗೆ ಪರಿಹಾರವು ದೊರಲುಬೇಕು. ಆನಂತರ ಧರ್ಮದಮಾತು.

ನಮ್ಮ ನೀತಿಯ ಮಟ್ಟವು ಪೂರಾಕೆಳಗಿಳಿದಿದೆ. ಅನ್ಯಾಯ ಮೋಸ ಸುಳ್ಳು ಮೊದಲಾದವು ತಲೆಯತ್ತಿವೆ. ವಿಜಯನಗರವೈಭವಕಾಲದಲ್ಲಿ ಮ ನೆ ಗ ಳಿಗೆ ಕೀಲಿ ಬೇಕಿದ್ದಿಲ್ಲವೆಂದು ತರಕಾರಿಗಳನ್ನು ಮಾಡುವಂತೆ ರತ್ನ ವಸ್ತುಗಳ ವ್ಯವಹಾರವು ರಸ್ತೆಗಳಮೇಲೆ ನಡೆಯುತ್ತಿತ್ತೆಂದು ಹೇಳಿದರೆ ಅದು ಕಟ್ಟು ಕಥೆಯಾಗಿಕಾಣಬಹುದು- ಆದರೂ ಇದರಲ್ಲಿ ಪೂರ್ಣ ಸತ್ಯವಿದೆ. ಪರದೇಶದ ವ್ಯಾಪಾರಿಗಳು ನಮ್ಮ ದೇಶದ ವಿಷಯದಲ್ಲಿ ತಗದ ಉದ್ಗಾರಗಳಿವು. ಇವನ್ನು ಅಸತ್ಯವೆಂದು ಭಾವಿಸಲು ಬರುವಂ ತಿಲ್ಲ. ಈಗ ಹೋಗಿಬರಲು ... ಬೇಕಾಗುತ್ತದೆ

ಮೇಲೆ ಇಂದಿನ ಪ್ರಸಿದ್ಧರಲ್ಲಿಯೇ ವಿಶ್ವಾಸವು ದಿನದಿನಕ್ಕೂ ಕಡಿಮೆಯಾಗಹತ್ತಿದೆ. ಅವಿಶ್ವಾಸವು ಎಲ್ಲೆಡೆಗೂ ತಲೆಯೆತ್ತಹತ್ತಿದೆ. ಕೆಲಸಗಳು ಸುರಳಿತವಾಗಿ ಸಾಗಬೇಕಾದರೆ ವಿಶ್ವಾಸವು ಅತಿ ಅವಶ್ಯ. ಈ ಅವಿಶ್ವಾಸದಿಂದಲೇ ಮೊಗಲಸಾಮ್ರಾಜ್ಯವು ಹಾಳಾದದ್ದು. ಈ ವಿಷಯದಲ್ಲಿ ನಾವು ಲಕ್ಷಿಸಬೇಕು.

ಒಟ್ಟಿನಮೇಲೆ ಇಂದಿನಸಮಾಜದಲ್ಲಿ ನಮ್ಮ ಏಳ್ಗೆಗೆ ಪ್ರತಿಗಾಮಿಗಳಾದ ಎಷ್ಟೋ ಸಹಾವಳಿಗಳ ಸಮಾವೇಶವಾಗಿದೆ. ಪ್ರಗತಿಯನ್ನು ಬಯಸುವ ತರುಣರು ಅವೆಲ್ಲವನ್ನು ಧೈರ್ಯದಿಂದ ಎದುರಿಸಿ ಮುನ್ನುಗ್ಗಬೇಕಾಗಿದೆ. ಅವು ಯಾವ ಸೋಗಿನಲ್ಲಿದ್ದರೂ ಅವನ್ನು ಲಕ್ಷಿಸದಿರಬೇಕು. ಬರುವದೆಲ್ಲವೂ ಇಂದೇಬರಲಿ ಆದರೆ ಅದನ್ನು ಎದುರಿಸುವ ಧೈರ್ಯವಿರಲಿ ಎಂದು ಕನ್ನಡತಿಯನ್ನು ಪ್ರಾರ್ಥಿಸಿ ನನ್ನ ಲೇಖಣಿಗೆ ವಿಶ್ರಾಂತಿಕೊಡುತ್ತೇನೆ.







# ಧರ್ಮರಾಜ್ಯ

ವಾರ್ಷಿಕ ಚಂದಾ ೧-೪-೦ * ಬಿಡಿ ಸಂಚಿಕೆ ೦-೨-೦

ಸಂಪಾದಕರು ಮತ್ತು ಪ್ರಕಾಶಕರು: ಶ್ರೀಯುತ ಎಂ. ವ್ಹಿ. ಮಠದ

ಸಂಪುಟ ೧ ಮಾಘ ಬಹುಧಾನ್ಯಸಂವತ್ಸರ ಸಂಚಿಕೆ ೪

ಕೃತದೊಳಾ ತ್ರೇತೆಯೊಳು ದ್ವಾಪರದೊಳುಂ ಕ್ರಮದೆ।
ಮತಿವಂತೆ "ನಲ-ರಾಮ-ಧರ್ಮ" ನೃಪರಿಂ॥
ಅತಿಯಶವನಾಂತು ಬಾಳಿದ ತೆರದೊಳೀ "ಕೃಷ್ಣ-
ಕ್ಷಿತಿಪಾಲನಿಂ" ಬಾಳು "ಧರ್ಮರಾಜ್ಯ"

[ವರಕವಿ-ಶ್ರೀನಾಗೀಶ]



ಕರ್ನಾಟಕ ಸಿಂಹಾಸನಾಧೀಶ್ವರ ಶ್ರೀಕೃಷ್ಣರಾಜೇಂದ್ರರು

ಸಹಾಯಕ ಸಂಪಾದಕರು: ಕವಿಭೂಷಣ ಹೊಮ್ಮರಡಿ ಮಲ್ಲಣ್ಣಗೌಡರು

ಶ್ರೀ ...ಗಾಗಿದೆ. ಎಲ್ಲರೂ ಹಾಡುವಂತೆ ಈಶ್ವರೇಚ್ಛೆಗೆ ಉಪಾಯವಿಲ್ಲವೆಂದು ಹೇಳಿನ್ನು ತರ ಆತ್ಮಕ್ಕೆ ಮೃತ್ಯುಂಜಯನು ಶಾಂತಿಯನ್ನೀಯಲೆಂದು ಪ್ರಾರ್ಥಿಸಿ, ಅವರ ಕುಟುಂಬಕ್ಕೆ ಒದಗಿದ ದುಃಖದಲ್ಲಿ ನಾವೂ ಭಾಗಿಗಳಾಗಿದ್ದೇವೆಂಬದನ್ನು ತಿಳಿಸಬಯಸುತ್ತೇವೆ. ಅವರ ತತ್ವಗಳು ವಿಶ್ವವ್ಯಾಪಿಯಾಗುವಂತೆ ಸಹಸ್ರಾರು ಪಂಚಾಕ್ಷರರು ಮರಳಿ ಉದಯಿಸಲೆಂದು ಮತ್ತೊಮ್ಮೆ ಪ್ರಾರ್ಥಿಸುತ್ತೇವೆ.

## ಸಭಾ-ಸಮ್ಮೇಲನಗಳು

ದಿಶಂಬರ ಕೊನೆಯ ವಾರದಲ್ಲಿ ಸಭಾ ಸಮ್ಮೇಲನಗಳ ಸಂತೆಗಳು ನಡೆದು ಹೋದವು. ವೀರಶೈವ ಮಹಾಸಭೆಯ ಸಭಾ ಸಂಚಾಲಕರು ಸಭೆಯು ವ್ಯವಸ್ಥಿತವಾಗಿ ನಡೆಯುವಂತೆ ವ್ಯವಸ್ಥೆ ಮಾಡಿದ್ದು ಅಭಿನಂದನೀಯ. ಸಭೆಯನ್ನು ಸಂದರ್ಶಿಸಿದವರಲ್ಲಿ ಅನೇಕರು "ಪಕ್ಷಾಭಿಮಾನದಿಂದ ಸಭೆನಡೆದಿದೆ, ಸ್ವಾಮಿತತ್ವನಿಷ್ಠೆಯಿಲ್ಲ" ಎಂಬುದು ಕೇಳಬರುತ್ತಿತ್ತು. ಮಾನ್ಯ ಅಧ್ಯಕ್ಷರು ಪರಿಶ್ರಮದಿಂದ ಸಭಾಕಾರ್ಯವನ್ನು ಯಶಸ್ವಿಗೊಳಿಸಿದ್ದು ಅವರ ವಿದ್ವತ್ತಿಗೆ ಭೂಷಣವಾಗಿದೆ. ಹಿಂದಿನ ಸಭೆಗಳಂತೆ ಈ ಸಭೆಯು ಆಗದೆ ಕಾರ್ಯದಲ್ಲಿ ಪ್ರವೇಶಿಸುವದೆಂದು ಆಶಿಸೋಣವೇ ?

ಬಳ್ಳಾರಿಯಲ್ಲಿ ಕನ್ನಡ ಸಾಹಿತ್ಯ ಸಮ್ಮೇಲನವು ತನ್ನ ಕಾರ್ಯವನ್ನು ದಕ್ಷತೆಯಿಂದ ನಡೆಯಿಸಿತೆಂದು ಹೇಳಬಹುದು. ಅಧ್ಯಕ್ಷರಾದ ಶ್ರೀ. ರಂಗನಾಥರು ಕನ್ನಡಿಗರ ವಿವೇಕವನ್ನು ಎಚ್ಚರಿಸಿ "ಶ್ರೀ"ಯವರ ಕನ್ನಡದ ಬಾವುಟವನ್ನು ಎತ್ತಿ ಹಿಡಿದಿದ್ದಾರೆ. ಇನ್ನುಳಿದ ಕವಿಗೋಷ್ಠಿ ನಾಟ್ಯಸಮ್ಮೇಲನಗಳು ತಮ್ಮ ಕರ್ತವ್ಯವನ್ನು ತೃಪ್ತಿಕರವಾಗಿ ಮುಗಿಸಿದವೆಂದು ಹೇಳಲು ಸಂತೋಷವಾಗುತ್ತದೆ. ಒಟ್ಟಿನಮೇಲೆ ಹುಬ್ಬಳ್ಳಿಯ ಹೊಲಸು ಬಳ್ಳಾರಿಯಲ್ಲಿ ಕಾಣಿಸಿಕೊಳ್ಳಲಿಲ್ಲ.

## ವೀರಶೈವ ತರುಣ ಪರಿಷತ್ತು

ಕರ್ನಾಟಕ ಯುವಕ ಪರಿಷತ್ತು ತೀವ್ರವೇ ಕೂಡಲಿರುವದು ಪ್ರಸಿದ್ಧವಾಗಿದ್ದರೂ ಈ ಪರಿಷತ್ತನ್ನೇಕೆ ಕರೆದರೋ ತಿಳಿಯದಾಗಿದೆ. ವೀರಶೈವ ತರುಣರೆಲ್ಲರನ್ನು ಒಂದೆಡೆಯಲ್ಲಿ ಕೂಡಿಸಿ ಇಂದು ನಮಗೆ ಬೇಕಾಗಿರುವ ಧಾರ್ಮಿಕ ಸಾಮಾಜಿಕ ರಾಜಕೀಯ ವಿಷಯಗಳನ್ನು ಚರ್ಚಿಸಿ ರಾಷ್ಟ್ರವನ್ನು ಪ್ರಗತಿಯ ದಿಶೆಯಲ್ಲಿ ಓಡಿಸಲು ಕಾರ್ಯಕರ್ತರು ಯೋಚಿಸಿದ್ದಾರೆ. ಅದು ನಿಜವಾಗಿಯೂ ಅಭಿನಂದನೀಯವು. ಹೀಗೆಯೇ ವೀರಶೈವ ತರುಣ ಪರಿಷತ್ತು ಕಾರ್ಯ ನಡೆಯಿಸಿದ್ದರೆ ಅದು ಕರ್ನಾಟಕ ಯುವಕ ಪರಿಷತ್ತಿಗೆ ಪೂರಕವೇ ಆಗುತ್ತಿತ್ತು. ಆದರೆ ಇಲ್ಲಿ

ನಡೆಸುದು ಶುದ್ಧ ಹರಟೆ; ಅಲ್ಲಲ್ಲ. ಅವಕ್ಕೂ ಸ್ವಾರಸ್ಯವೆಂದರೆ ವ್ಯಕ್ತಿ ಪ್ರ-ಸಾಧನೆ. ವೈಷಮ್ಯವು ಅಳಿಯಲೆಂದು ಬೇಡಿಕೊಳ್ಳುವ ಕಾಲದಲ್ಲಿ ಅದಕ್ಕೆ ಪ್ರೋ-ಕೊಡುತ್ತಿರುವದು ಸಮಾಜ ಘಾತಕತನವೆಂದೇ ಹೇಳಬಹುದು.

## ಪಂಡಿತದ್ವಯರ ಸಂಚಾರ

ಶಿಕಂದರಾಬಾದ ವೀರಶೈವ ಗುರುಕುಲವಾಸದ ಅಧ್ಯಕ್ಷರಾಗಿರುವ ವೇ|| ಪಂ|| ಚಿವರೆಮಠದ ವೀರಭದ್ರಶಾಸ್ತ್ರಿಗಳೂ ಮುದೇನೂರಿನ ವೀರಶೈವ ಧರ್ಮಾಲಯದ ಅಧ್ಯಕ್ಷರಾಗಿರುವ ಶ್ರೀ ವರಕವಿ ವಾಗೀಶ ಶಿವಾಚಾರ್ಯರೂ ಕುಂದಗೋಳದ ಕೋರಧಾನ್ಯಮಠದಲ್ಲಿ ಸ್ಥಾಪಿತವಾಗಿರುವ ಶ್ರೀ ಜಗದ್ಗುರು ವಿಶ್ವಾರಾಧ್ಯ ಫ್ರೀ ಬೋರ್ಡಿಂಗಿನಲ್ಲಿ ಸೇರಿದ ಸಾರ್ವಜನಿಕ ಸಭೆಗೆ ಆಮಂತ್ರಿತರಾಗಿ ಕ್ರಮವಾಗಿ "ವೀರಶೈವ ಸಂಸ್ಕೃತಿ" ಹಾಗೂ "ವೀರಶೈವ ಸಂಘಟನೆ" ಎಂಬ ವಿಷಯಗಳಮೇಲೆ ಅತಿ ಮಹತ್ವದ್ದಾದ ಸಪ್ರಮಾಣವಾದ ವ್ಯಾಖ್ಯಾನಗಳನ್ನು ಮಾಡಿದ್ದಕ್ಕೆ ಅವರನ್ನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇವೆ. ಇವರಿಂದ ಈ ತರದ ಸಾಮಾಜಿಕ ಕಾರ್ಯಗಳು ಇವಕ್ಕೂ ಹೆಚ್ಚಾಗಿ ನೆರವೇರಲೆಂದು ದಯಾಮಯನನ್ನು ಪ್ರಾರ್ಥಿಸುತ್ತೇವೆ.

ಧರ್ಮ

ಮೇಲೆ-

ವಿ-

# ವೀರಶೈವರು ಶೂದ್ರರಲ್ಲ

## ೧೩ನೇ ವೀರಶೈವ ಮಹಾಸಭೆಯ ಮುಂದಿನ ವಿಷಯ

[ ಲೇಖಕ:—ಶ್ರೀ. ಪಟ್ಟದಸ್ವಾಮಿ ಹಿರೇಮಠ ವಕೀಲ ಹುಬ್ಬಳ್ಳಿ ]

ವೀರಶೈವ ಧರ್ಮವು ಉಳಿದ ವೈದಿಕ ಧರ್ಮಗಳಂತೆ ಸನಾತನವಾಗಿದ್ದು ವೇದ ಆಗಮ ಉಪನಿಷತ್ಪ್ರತಿಪಾದಿತವಾಗಿದೆಯಷ್ಟೆ. ವೀರಲಿಂಗೋಪನಿಷತ್, ಸಿದ್ಧಾಂತಶಿಖೋಪನಿಷತ್ ಮುಂತಾದ ಉಪನಿಷತ್ತುಗಳೂ ವಾತುಲಾಗಮ, ಕಿರಣಾಗಮ ಪಾರಮೇಶ್ವರಾದಿ ಆಗಮಗಳೂ, ಮಹಾಭಾರತದಲ್ಲಿಯ ಅನೇಕ ಖಂಡಗಳೂ ವೀರಶೈವ ಧರ್ಮದ ಉದಯ, ಅಸ್ತಿತ್ವ ಮತ್ತು ತತ್ವಗಳ ಬಗ್ಗೆ ವಿಶದವಾಗಿ ವರ್ಣಿಸುತ್ತವೆ. ವೀರಶೈವ ಮತಸ್ಥಾಪಕರಾದ ಜಗದ್ಗುರು ರೇಣುಕಾದಿ ಪಂಚಾಚಾರ್ಯರು ಅಗಸ್ತ್ಯ ಮುಂತಾದ ಬ್ರಹ್ಮರ್ಷಿಗಳಿಗೆ ಶಿವಸಿದ್ಧಾಂತವನ್ನುಪದೇಶ ಮಾಡಿದ್ದು ಶಾಸ್ತ್ರ ಪುರಾಣ ಪ್ರಸಿದ್ಧವಿದೆಯಷ್ಟೇ. ವೀರಶೈವ ಮತದ ತಳಹದಿಯಾದ ಶಕ್ತಿ ವಿಶಿಷ್ಟಾದ್ವೈತ ಸಿದ್ಧಾಂತವು ಅನುಪಮ ಸಿದ್ಧಾಂತವೆಂದು ಪ್ರಶಸ್ತಿಯನ್ನು ಹೊಂದಿದೆ. ಶ್ರೀಕೃಷ್ಣನು ಅರ್ಜುನನಿಗೆ ಉಪದೇಶ ಮಾಡಿದ ಭಗವದ್ಗೀತೆಯಲ್ಲಿ ಬೋಧಿಸಿದ ಕ್ರಿಯಾಜ್ಞಾನಗಳ ಸಮುಚ್ಚಯ ತತ್ವವನ್ನು ಕಾರ್ಯರಂಗಕ್ಕೆ ಇಳಿಸಿ ಮಾನವ ಜನ್ಮದ ರಹಸ್ಯವನ್ನು ಕಂಡುಹಿಡಿದು ಶಿವಜೀವರ ಸಾಮರಸ್ಯವನ್ನು ಬೋಧಿಸಿ ನಿತ್ಯಮುಕ್ತನನ್ನಾಗಿ ಮಾಡುವದೇ ವೀರಶೈವ ಸಿದ್ಧಾಂತದ ಲಕ್ಷಣವಾಗಿದೆ.

ಮಾನವನ ಮಾಂಸ ಪಿಂಡವನ್ನು ಮಂತ್ರ ಪಿಂಡವನ್ನಾಗಿ ಮಾಡಿ ಇಡೀ ಜೀವಿತವನ್ನೇ ಶಿವಮಯವಾಗಿ ಮಾಡುವ ವಿಲಕ್ಷಣ ಶಕ್ತಿಯಿಂದ ಕೂಡಿದ ಶಕ್ತಿ ವಿಶಿಷ್ಟಾದ್ವೈತ ತತ್ವಗಳನ್ನು ಅಪ್ರಾಕೃತ ಸೃಷ್ಟಿಯಿಂದ ಉದ್ಭವಿಸಿದ ಪಂಚಪ್ರಮಥ ಗಣಾಧೀಶ್ವರರು ಸ್ಥಾಪಿಸಿದರೆಂದು ಶಾಸ್ತ್ರಾಧಾರವಿದೆ. ಯಾವ ಧರ್ಮದಲ್ಲಿಯೂ ಇಲ್ಲದ ಅಷ್ಟಾವರಣ, ಪಂಚಾಚಾರ, ಷಟ್ಸ್ಥಲ ಮುಂತಾದ ಅತುಲ ಸಿದ್ಧಾಂತವು ಒಳ್ಳೇ ರಹಸ್ಯವಾಗಿಯೂ ಮತ್ತು ಸ್ವಾರಸ್ಯವಾಗಿಯೂ ಈ ಧರ್ಮದಲ್ಲಿ ಆವಿರ್ಭವಿಸಿವೆ. ಮಾನವನನ್ನು ಐಹಿಕ ಸುಖಭೋಗಗಳಿಂದ ಕ್ರಮೇಣ ಬಿಡಿಸಿ ಶಿವಸಾನ್ನಿಧ್ಯದ

ಕಡೆಗೆ ಹೆಚ್ಚು ಹೆಚ್ಚು ಎಳೆಯುವ ಸೂತ್ರ ಸೂಕ್ತಿಗಳು ಈ ಧರ್ಮದಲ್ಲಿ ತುಂಬಿಕೊಂಡ-
ಅಡಕವಾಗಿವೆ.

ಪುರಾಣ ಪ್ರಸಿದ್ಧರಾದ ದುರ್ವಾಸ, ವ್ಯಾಸ, ಕಶ್ಯಪ, ಅಗಸ್ತ್ಯ ಮೊದಲಾದ ಮಹರ್ಷಿಗಳು ಪಂಚಜಗದ್ಗುರುಗಳಿಂದ ಶಿವಲಿಂಗಧಾರಣ ಮಹಿಮೆಯನ್ನು ತಿಳಿದುಕೊಂಡರೆಂದೂ ಅದ್ವೈತ ಮತಸ್ಥಾಪನಾಚಾರ್ಯರಾದ ಶ್ರೀ ಶಂಕರಾಚಾರ್ಯರು ಶ್ರೀಜಗದ್ಗುರು ರೇಣುಕ ಶಿವಾಚಾರ್ಯರಿಂದ ಚಂದ್ರಮೌಳೀಶ್ವರ ಲಿಂಗವನ್ನು ಪಡೆದರೆಂದೂ ಪಾಶುಪತತಂತ್ರ ಕಾಶೀಖಂಡ ಸಿದ್ಧಾಂತಶಿಖಾಮಣಿ ಗುರುವಂಶ ಕಾವ್ಯ ಮೊದಲಾದ ಗ್ರಂಥಗಳಿಂದ ತಿಳಿಯುತ್ತದೆ.

ಇದಲ್ಲದೆ ಪೂರ್ವಕಾಲದಲ್ಲಿ ವೀರಶೈವ ಧರ್ಮದ ಪಂಚಪೀಠಗಳ ಜಗದ್ಗುರುಗಳಿಗೆ ಅನೇಕ ವೀರಶೈವ ಮತ್ತು ಪರಮತೀಯ ರಾಜಾಧಿರಾಜರು ಭೂದಾನ ಮಾಡಿ ವೀರಶೈವ ಮತದ ತತ್ವಗಳನ್ನು ಪ್ರಕಟಗೊಳಿಸಲಿಕ್ಕೆ ಸಹಾಯಮಾಡಿದ ಆಧಾರಗಳೆಷ್ಟೋ ಇವೆ.

ಇಂಥ ಮಹತ್ವವಾದ ವೀರಶೈವ ಧರ್ಮವು ಧರ್ಮಶಾಸ್ತ್ರಗಾರದ ಶಿಖರದ ಮೇಲಿದ್ದರೂ ವೀರಶೈವರ ದುರ್ಗತಿಯಿಂದಲೋ ಅಥವಾ ದುರದೃಷ್ಟದಿಂದಲೋ ಅಥವಾ ದೌರ್ಬಲ್ಯದಿಂದಲೋ ನ್ಯಾಯಸ್ಥಾನದಲ್ಲಿ ಶೂದ್ರ ಧರ್ಮವೆಂದು ಗಣಿಸಲ್ಪಟ್ಟದೆ. ಬ್ರಹ್ಮ, ಕ್ಷತ್ರ, ವೈಶ್ಯ, ಶೂದ್ರ ಎಂಬ ನಾಲ್ಕು ವರ್ಣಗಳಲ್ಲಿ ಕಡೆಯ ಸ್ಥಾನವು ವೀರಶೈವ ಜನಾಂಗಕ್ಕೆ ಲಭಿಸುವ ದುರ್ಯೋಗವು ಪ್ರಾಪ್ತವಾಗಿದೆ.

ಈ ಪ್ರಕಾರ ವೀರಶೈವರಿಗೆ ಶೂದ್ರರ ಕಾಯಿದೆಯನ್ನು ಹಚ್ಚಲಿಕ್ಕೆ ನಮ್ಮ ವೀರಶೈವರಲ್ಲಿಯ ಕೆಲವು ಅಜ್ಞಾನಿ ಸ್ವಾರ್ಥಿಗಳೂ ಮತ್ತು ಅಸೂಯಾಪರರಾದ ಪರಮತೀಯ ಪಂಡಿತರೂ ಮತ್ತು ವೀರಶೈವ ಧರ್ಮಶಾಸ್ತ್ರದ ಸ್ವಾದವನ್ನೇ ಅರಿಯದ ಕೆಲವು ಪರದೇಶದ ವಿಜ್ಞಾನಿಗಳೂ ಬಹುಮಟ್ಟಿಗೆ ಕಾರಣರಾಗಿದ್ದಾರೆ.

ವೇದೋಪನಿಷದಾಗಮಗಳಲ್ಲಿ ಉಪದೇಶಿಸಿದಂತೆ ವೀರಶೈವರು ತಮ್ಮ ಪ್ರಾಕೃತ ಬ್ರಾಹ್ಮಣ ಧರ್ಮದ ಕಟ್ಟುಗಳನ್ನು, ವ್ರತನಿಯಮಾಚರಣೆಗಳನ್ನು ಇಟ್ಟುಕೊಳ್ಳುತ್ತಾ ಬಂದಾಗ್ಯೂ ಕ್ರಿಸ್ತ ಶತಮಾನದ ಆರಂಭದಿಂದ ಇತ್ತೀಚೆಗೆ ಈ ಧರ್ಮದ ಮೇಲೆ ಪರಧರ್ಮದವರ ಅಸೂಯಾ ಬದ್ಧಿಯು ಹೆಚ್ಚಾಯಿತು. ಜೈನ, ವೈಷ್ಣವ, ಬ್ರಾಹ್ಮಣ ಮತಾವಲಂಬಿಗಳು ಈ ಧರ್ಮದ ಪ್ರಶಸ್ತಿಯನ್ನು ಕುಗ್ಗಿಬಡಿಯಬೇಕೆಂದೂ ತಮ್ಮ ಗ್ರಂಥಗಳಲ್ಲಿ ಈ ವೀರಶೈವ ಧರ್ಮಾವಲಂಬಿಗಳಿಗೆ ಶೂದ್ರರೆಂದು ಕರೆದರು. ಉದಾ—ವೆಂಕಟಾಧ್ವರಿಯೆಂಬ ಒಬ್ಬ ಬ್ರಾಹ್ಮಣ ಕವಿಯು ತನ್ನ "ವಿಶ್ವಗುಣಾದರ್ಶ ಚಂಪು" ಎಂಬ ಗ್ರಂಥದಲ್ಲಿ "ಶೂದ್ರಾ ಇಹೈತೇ ಲಿಂಗಧರಾಃ" ಎಂದು ಉದ್ಘೋಷಿಸಿದನು. ಪರಮತೀಯರ ಭೌತಿಕ ಪ್ರಭುತ್ವವು

ಧರ್ಮ
ಕಾಲ್ಯದ ಕಾಲಕ್ಕೆ ವೀರಶೈವರು ಅವರ ಅಧೀನರಾಗಿ ಉಳಿಯಬೇಕಾಯಿತು ನೀಲ್ಪೀರಶೈವರಿಗೆ ವೈದಿಕ ವಿದ್ಯೆಯ ವ್ಯಾಸಂಗವನ್ನು ಕಡಿಮೆಮಾಡುತ್ತಾ ಬೇಸಾಯ ಮತ್ತು ವ್ಯಾಪಾರದಲ್ಲಿ ವಿಶೇಷವಾಗಿ ತೊಡಗುವಂತೆ ಮಾಡಿ ಬ್ರಾಹ್ಮಣರೆನ್ನಿಸಿ ಕೊಳ್ಳುವವರು ವೇದಾಧಿಪತಿಗಳಾದರು ಪೇಶ್ವಾಯಿ ಕಾಲದಲ್ಲಿ ವೀರಶೈವರಿಗೆ ವೇದಾಧ್ಯಯನ ಮಾಡಲಿಕ್ಕೆ ತುಂಬಾ ತೊಂದರೆ ಇತ್ತೆಂದೂ ತಮ್ಮ ಧರ್ಮವನ್ನು ಕಾಯ್ದುಕೊಳ್ಳುವದಕ್ಕಾಗಿ ಮಧ್ಯರಾತ್ರಿಯಲ್ಲಿ ಉಪನಯನ ದೀಕ್ಷಾಕಾರ್ಯಾದಿಗಳನ್ನು ನೆರವೇರಿಸುತ್ತಿದ್ದರೆಂದೂ ಕರ್ಣೋಪಕರ್ಣವಾಗಿ ಬಂದ ಹೇಳಿಕೆಯಿದೆ. ಈ ರೀತಿಯಾಗಿ ವೀರಶೈವರನ್ನು ಶೂದ್ರ ವರ್ಗದಲ್ಲಿ ಹ್ಯಾಗಾದರೂ ಮಾಡಿ ಎಳೆದು ತಮ್ಮ ಧರ್ಮವನ್ನು ಹೆಚ್ಚಳ ಮಾಡಬೇಕೆಂಬ ಕುಹಕ ಬುದ್ಧಿಯು ಹಿಂದಿನ ಕಾಲದ ಪರಧರ್ಮದವರಲ್ಲಿತ್ತೆಂದು ಸ್ಪಷ್ಟವಾಗುತ್ತದೆ.

ವೀರಶೈವರು ವಿಶೇಷವಾಗಿ ಬೇಸಾಯ ವ್ಯಾಪಾರದಲ್ಲಿ ತೊಡಗಿದಾಗ್ಗೆ ಧರ್ಮ ಗ್ರಂಥಗಳ ಜವಾಬ್ದಾರಿಯು ಹಿಂದಿನ ಕಾಲದ ಬ್ರಾಹ್ಮಣ ವರ್ಗದವರ ಮೇಲೆ ಬಿದ್ದಿತ್ತು. ಆವಾಗ್ಗೆ ಬ್ರಾಹ್ಮಣರು ತಮಗೆ ಹಿತವಾಗುವ ಮತ್ತು ಉಪಯೋಗವಾಗುವ ಉಪನಿಷತ್ತುಗಳನ್ನು ಮತ್ತು ಆಗಮ ಪುರಾಣಗಳನ್ನು ಪ್ರಕಟಗೊಳಿಸಿದರು. ಉದಾ—

ಡಾ|| ಎನಿಬೆಜಂಟರವರು ಮದ್ರಾಸದಲ್ಲಿ ಸ್ಥಾಪಿಸಿದ ಅದ್ಯಾರ ಲಾಯಬ್ರರಿಯಲ್ಲಿ ಥಿಯೋಸಾಫಿಕಲ್ ಸೋಸಾಯಿಟಿಯಿಂದ “ ಪ್ರಕಟವಾಗದ ಉಪನಿಷತ್ತುಗಳು ” ಎಂಬ ಪುಸ್ತಕದಲ್ಲಿ ವೀರಶೈವರಿಗೆ ಸಂಬಂಧಪಟ್ಟ ಮತ್ತು ವೀರಶೈವ ಧರ್ಮದ ಆಧಿಕ್ಯವನ್ನು ತೋರಿಸುವ ವ್ಯಂಗೋಪನಿಷದ್, ಸಿದ್ಧಾಂತ ಶಿಖೋಪನಿಷದ್, ಸಿದ್ಧಾಂತ ಸಾರೋಪನಿಷದ್, ಶಿವೋಪನಿಷದ್, ರುದ್ರೋಪನಿಷದ್ ಮುಂತಾದ ಮಹತ್ವದ ಉಪನಿಷತ್ತುಗಳು ಇವೆ.

ಇದೇ ಮೇರೆಗೆ ಕೈಲಾಸವಾಸಿ ವಾರದ ಮಲ್ಲಪ್ಪನವರು ಅವಿಶ್ರಾಂತ ಶ್ರಮವಹಿಸಿ ವೀರಶೈವರಿಗೆ ಸಂಬಂಧಪಟ್ಟ ಆಗಮಗಳನ್ನು ಶೋಧಿಸಿ ಪ್ರಕಟಿಸುವ ಪೂರ್ವದಲ್ಲಿ ಮಹತ್ವದ ಆಗಮಗಳು ವೀರಶೈವರ ಕೈಸೇರುವದು ದುಸ್ತರವಾಗಿದ್ದಿತು. ವೀರಶೈವರಲ್ಲಿ ವಂಶಪರಂಪರವಾಗಿ ವೈದಿಕ ಮತ್ತು ಆಗಮಿಕ ವಿದ್ಯೆಯ ಅಧ್ಯಯನವು ಲೋಪವಾಗುತ್ತ ನಡೆಯಿತು. ವೇದಾಗಮ ತತ್ವಗಳ ಉದಾಸೀನತೆಯು ಅನ್ಯಾಯದ ದುರುಪಯೋಗವನ್ನು ಪರಮತೀಯರು ಸುಲಭವಾಗಿ ಮಾಡಿಕೊಂಡರು. ಹೀಗಾಗಿ ವೀರಶೈವ ಧರ್ಮದ ಬಗ್ಗೆ ತಪ್ಪು ತಿಳುವಳಿಕೆಯನ್ನು ಪರಮತೀಯರು ಹರಡಿ ಕಾರ್ಯಸಾಧನೆ ಮಾಡಿಕೊಳ್ಳಲಿಕ್ಕೆ ವಿಶೇಷವಾಗಿ ವೀರ

ಶೈವರ ಪ್ರಾಧ್ಯತನವೂ ವೈದಿಕ ಆಗಮಿಕ[illegible]ಶೂನ್ಯತೆಯೂ ಕಾರಣವೆಂದು ಹೇಳಿದರೆ ತಪ್ಪಾಗಲಾರದು.

## ಮುಂಬೈ ಹಾಯ್ ಕೋರ್ಟಿನ ನಿರ್ಣಯ

ಈ ಪ್ರಕಾರದ ಪರಿಸ್ಥಿತಿಯಲ್ಲಿ ಮತ್ತು ಪರದೇಶಿ ರಾಜರ ಪ್ರಭುತ್ವದಲ್ಲಿ ಸ್ಥಾಪಿತವಾದ ನ್ಯಾಯಸ್ಥಾನದಲ್ಲಿ ಆಕಸ್ಮಾತ್ತಾಗಿ ವೀರಶೈವರಿಗೆ ಸಂಬಂಧಪಟ್ಟ ಒಂದು ವ್ಯಾಜ್ಯವು ಈಗ ಸುಮಾರು ೬೦ ವರ್ಷಗಳ ಹಿಂದೆ ಅಂದರೆ ೧೮೭೫ ನೇ ಇಸ್ವಿಯಲ್ಲಿ ಮುಂಬಯಿ ಇಲಾಖೆಯಲ್ಲಿ ಉದ್ಭವಿಸಿತು. ಈ ವ್ಯಾಜ್ಯವು ಸಾತಾರಾ ಜಿಲ್ಲೆಗೆ ಸಂಬಂಧಪಟ್ಟದ್ದಿತ್ತು. ಈ ವ್ಯಾಜ್ಯದಲ್ಲಿ ಮುಂಬಯಿ ಹಾಯಕೋರ್ಟಿನವರು ನಿರ್ಣಯ ಮಾಡುವ ಪೂರ್ವದಲ್ಲಿ ಲಿಂಗಾಯತರು ಬೇಸಾಯಗಾರರು ಮತ್ತು ವ್ಯಾಪಾರಿಗಳು ಇರುವದರಿಂದ ವೈಶ್ಯವರ್ಗಕ್ಕೆ ಸೇರಿದವರೆಂದು ಸಾಧಾರಣ ಗ್ರಹಿಕೆಯಿತ್ತು. ಶೂದ್ರರನ್ನು ಹೊರತುಪಡಿಸಿ ಉಳಿದ ಮೂರು ವರ್ಣದವರು ದ್ವಿಜನ್ಮ ಸಂಸ್ಕಾರವುಳ್ಳವರಿರುತ್ತಾರೆ. ಆದ್ದರಿಂದ ಬ್ರಾಹ್ಮಣರಿಗೆ ಹಚ್ಚುವ ಕಾಯಿದೆಯನ್ನು ವೀರಶೈವರಿಗೆ ಹಚ್ಚಬೇಕೋ ಹ್ಯಾಗೆ ಎಂಬ ಪ್ರಶ್ನೆಯು ಉದ್ಭವಿಸಿತು. ಆವಾಗ್ಗೆ ಮುಂಬಯಿ ಹಾಯ್‌ಕೋರ್ಟಿನವರು ಲಿಂಗಾಯತರು ದ್ವಿಜನ್ಮ ಸಂಸ್ಕಾರವುಳ್ಳ ದ್ವಿಜರಲ್ಲಿ ಬರುವದಿಲ್ಲ. ಅವರು ಶೂದ್ರರಿರುತ್ತಾರೆಂದು ನಿರ್ಣಯಿಸಿ ಶೂದ್ರರಿಗೆ ಹಚ್ಚುವ ದತ್ತಕದ ಕಾಯಿದೆಯನ್ನು ಹಚ್ಚಿ ತೀರ್ಮಾನಕೊಟ್ಟರು. ಇದೇ ವೀರಶೈವರ ಧರ್ಮಗ್ಲಾನಿಯ ಮತ್ತು ಉದಾಸೀನತೆಯ ಮತ್ತು ಪರಮತೀಯರ ಅಸೂಯೆಯ ಮೊದಲನೇ ವಿಷಫಲವು! ಅದಕ್ಕೂ ಪೂರ್ವದಲ್ಲಿ ಅಕ್ಕಲಕೋಟೆ ಮುಂತಾದ ಬೇರೆ ಬೇರೆ ಭಾಗಗಳಲ್ಲಿ ವೀರಶೈವ ಮಹನೀಯರು ತಮ್ಮ ಧರ್ಮಶಾಸ್ತ್ರದ ಕಾನೂನುಗಳ ಕಡೆಗೆ ಲಕ್ಷ್ಯಕೊಡದೆ ಸ್ವಾರ್ಥಬುದ್ಧಿಯಿಂದ ಮತ್ತು ಅಜ್ಞಾನದಿಂದ ಶಾಸ್ತ್ರ ವಿರೋಧವಾಗಿ ಕೆಲವು ಖಾಸಗಿ ವ್ಯಾಜ್ಯದಲ್ಲಿ ನಿರ್ಣಯವನ್ನು ಮಾಡಿಕೊಂಡಿದ್ದರು. ಈ ನಿರ್ಣಯಗಳೇ ಬಹುಮಟ್ಟಿಗೆ ೧೮೭೫ ರಲ್ಲಿ ಮುಂಬಯಿ ಹಾಯಕೋರ್ಟಿನವರ ಮನಸ್ಸಿನ ಮೇಲೆ ಪರಿಣಾಮ ಮಾಡಿದವೆಂದು ಹೇಳಬಹುದು.

೧೮೭೫ ನೆಯ ಇಸ್ವಿಯ ಹಾಯಕೋರ್ಟಿನ ನಿರ್ಣಯದಲ್ಲಿ ವೀರಶೈವರು ಶೂದ್ರರೆಂಬ ಬಗ್ಗೆ ಯಾವ [illegible] ಹೊರಡದೆ ಮತ್ತು ಈ ಬಗ್ಗೆ ಸರಿಯಾದ ಧರ್ಮಗ್ರಂಥಗಳನ್ನೂ ಶಾಸ್ತ್ರಾಧಾರವನ್ನೂ ನೋಡದೆ ಕೇವಲ ರೂಢಿಯಲ್ಲಿಯ ಕೆಲವು ವಿಷಯಗಳ ವಿವೇಚನೆ ಮಾಡಿ ನ್ಯಾಯಾಧೀಶರು ತಮ್ಮ ಅಭಿಪ್ರಾಯವನ್ನು ಮಾತ್ರ ಕೊಟ್ಟದ್ದು ಇದೆ.

ಹೆಚ್ಚಾಗಿ ಬಂದುದರಿಂದಲೂ ಎಷ್ಟು ಪ್ರಯತ್ನ ಮಾಡಿದರೂ ಕೊಂಯೋಮರ್‍ರ್ರೊ ಎಂಬ ಧನಿಯು ಕಡಿಮೆಯಾಗಲೇ ಇಲ್ಲ. ಹೀಗಾದುದಷ್ಟೇಯಷ್ಟೇ ವಿಧವಾಗಿ ಒಳ್ಳೆಯದೆಂತಲೇ ಜನಗಳು ಆಡಿಕೊಂಡರು. ಹೀಗೆ ಗಲಭಿಸಿದರು. ದಿದ್ದರೆ ಅಧ್ಯಕ್ಷರು ತರುತ್ತಿರುವ ಎಷ್ಟೋ ಠರಾವುಗಳ ಮೇಲೆ ಜನರು ಎಣಿ ಥವಾಗಿ ಮಾತನಾಡಲೂ ಬಹುದಾಗಿದ್ದಿತು. ಅಥವಾ ಸಮರ್ಥಿಸಿ ವ್ಯಾಖ್ಯಾನ ವೀಯಲೂ ಬಹುದಾಗಿತ್ತು. ಗಲಭೆಯಲ್ಲಿ ಇವೆರಡಕ್ಕೂ ಎಷ್ಟೂ ಅವ ಕಾಶವೇ ಸಿಕ್ಕಲಿಲ್ಲ. ಏಕೆ? ಜನಗಳ ಗೊಂದಲದಲ್ಲಿ ಅಧ್ಯಕ್ಷರು ಹೇಳುವದೇ ನೇನೂ ಗೊತ್ತಾಗದಿದ್ದುದಕ್ಕೆ. ಇಂತಾಗಿ ಕೊನೆಗೆ ಮಧ್ಯದಲ್ಲಿ ನಿಮ್ಮ ಅಭಿಪ್ರಾ ಯವನ್ನು ಚಪ್ಪಾಳೆಯಿಂದ ಹೊರಗೆಡವಿರೆಂದು ಗಟ್ಟಿಯಾಗಿ ಹೇಳಿದರೆಂದರೆ, ಅಧ್ಯಕ್ಷರು ಮತ್ತೆ ೨-೩ ಠರಾವುಗಳನ್ನು ಮಂಡಿಸುವವರೆಗೂ ಚಪ್ಪಾಳೆ ಹೊಡೆದೇ ಹೊಡೆಯುವುದು.

ವಿಷಯ ನಿಯಾಮಕ ಕಮಿಟಿಟಿಯಲ್ಲಿ ಸರ್ವರಿಗೂ ಪ್ರವೇಶವಿದ್ದಿತಾದರೂ ಸಭೆಯಲ್ಲಿ ಠರಾವು ಬಂದಾಗ ನೋಡಿಕೊಂಡರಾಯಿತೆಂದು ಅನೇಕರು ಈ ಕಮಿ ಟಿಗೆ ಬರುತ್ತಿರಲಿಲ್ಲ. ತಾ. ೨೭ ನೇ ವಿಷಯ ನಿಯಾಮಕ ಕಮೀಟಿಯು ರಾತ್ರಿ ೩ ಗಂಟೆಗೆ ಮುಗಿಯಿತು. ಕಷ್ಟ ಸಹಿಷ್ಣುಗಳಾದ ಅಧ್ಯಕ್ಷರು ಬೆಳಗಾದರೂ ಚಿಂತೆ ಯಿಲ್ಲ ಈ ಕಾರ್ಯವನ್ನು ಮುಗಿಸೋಣ ಎಂದು ಪದೇಪದೇ ಹೇಳುತ್ತಿದ್ದರು!

ತಾ|| ೨೭ನೆಯ ದಿನ ತರುಣ ಪರಿಷತ್ತು ಬಹಳ ಹೊತ್ತಾಗಿ ಸಾಗಿತು. ಹುಬ್ಬ ಳ್ಳಿಯ ತರುಣರಲ್ಲಿ ಇಬ್ಬಣವಾಗಿರುವುದೇ ಹೀಗಾಗಲು ಮುಖ್ಯ ಕಾರಣ. ಈ ತರುಣರಲ್ಲಿ ಒಂದು ಪಂಗಡವು ಪೂರ್ವಪರಂಪರೆಯನ್ನು ಹಿಡಿದು ಪಂಚಾ ಚಾರ್ಯರು ಬಸವಣ್ಣನವರು ಮೊದಲಾದವರನ್ನು ನಂಬಿ ನಡೆಯುತ್ತಿದ್ದರೆ ಇನ್ನೊಂದು ಪಂಗಡವು ಕೇವಲ ಬಸವಣ್ಣನವರ ತತ್ವವೇ ನಮಗೆ ಮೂಲವೆಂದು ಸಾಗಿದೆ. ಆದರೆ ಬಸವಣ್ಣನವರ ಎಲ್ಲಾ ತತ್ವಗಳನ್ನೂ ಈ ತರುಣ ಪಂಗಡವು ಒಪ್ಪುವಂತೆ ತೋರುವುದಿಲ್ಲ. ಬಸವಣ್ಣನವರು ಪರಮ ಜಂಗಮ ಭಕ್ತರಾಗಿದ್ದರೆ ಆ ಜಂಗಮವಂಶವನ್ನೇ ಒಪ್ಪದೆ ತಾವೇ ಜಂಗಮರ ಕಾರ್ಯವನ್ನು ಮಾಡಿ ಕೊಳ್ಳಲು ಇಚ್ಛಿಸುವುದೆಂತಲೂ ಜಂಗಮರನ್ನು ಪೂಜಿಸುವುದಿಲ್ಲವೆಂತಲೂ ತಿಳಿದು ಬರುತ್ತದೆ. ಇದೇ ವೈಷಮ್ಯವನ್ನೇ ಮುಂದೆ ಮಾಡಿ ಉಭಯ ಭಾವದ ತರು ಣರೂ ಸಮಯ ಬಂದಾಗ ತಿಕ್ಕಾಡುತ್ತಿರುವಂತೆ ಕಾಣುವುದು. ಈ ಪ್ರಸಂಗ ದಲ್ಲಿ ನಮ್ಮ ಹುಬ್ಬಳ್ಳಿಯ ತರುಣರು ಕೋರ್ಟಿನವರೆಗೂ ಹೋಗಿ ತಂಟೆ ಯನ್ನು ಬಗೆಹರಿಸಿಕೊಂಡರೂ ಪರಸ್ಪರ ಪ್ರೇಮವಿರಲಿಲ್ಲವಾಗಿ ಪರಿಷತ್ತಿನ ಸಮ ಯದಲ್ಲಿ ಮತ್ತೆ ತಂಟೆ ನಡೆಯಿತು. ಈ ವಿಷಯವು ಹೊರಬಿದ್ದುದೇ ಒಂದು ವಿಧವಾಗಿ ತರುಣರ ಪ್ರೇಮವನ್ನು ಒಂದುಮಾಡಿಕಲು ಅನುವಾಯಿತೆಂದು

ಗಳೂ ಮಸು. ಸಭಾಧ್ಯಕ್ಷರಿಗೆ ಶ್ರೀಮಾನ್ ಬಸವನಾಳರವರೂ ರಾ| ಬ| ಹಳಕ ಸಿದ್ಧಾಂತೂ, ಟಿ. ಹೆಚ್. ಎಂ. ಸದಾಶಿವಯ್ಯನವರೂ ಹಾಲಭಾವಿ ಸಾಹೇಬರ ವಾಗಿ ಒಂದೆಡೆ ಸೇರಿ ತರುಣಮುಂದಾಳುಗಳನ್ನು ಮುಂದಿಟ್ಟುಕೊಂಡು ಶಾಂತಿಗೆ ತಂದು ತರುಣಪರಿಷತ್ತು ಸುಗುಮವಾಗಿ ಸಾಗುವಂತೆ ಮಾಡಿದುದು ಹುಬ್ಬ ಳ್ಳಿಗೇ ಏಕೆ ಎಲ್ಲ ಪ್ರಾಂತಗಳಿಗೂ ಶಾಂತಿಸಾತವನ್ನು ಕಲಿಸಿದಂತಾಯಿತು.

ಕ. ಭಾ. ವೀ. ತರುಣಪರಿಷತ್ತಿನ ಉದ್ಘಾಟನವು ವೇ| ಟಿ. ಹೆಚ್. ಎಂ. ಸದಾಶಿವಯ್ಯನವರಿಂದ ನೆರವೇರಿಸಲ್ಪಟ್ಟಿತು ಇದರ ಅಧ್ಯಕ್ಷಸ್ಥಾನವು ಶಿವಮೊಗ್ಗಾ ಸುಪ್ರಸಿದ್ಧ ಮುಂದಾಳುಗಳಾದ ಪ್ಲೀಡರ ವೇ. ಸಿದ್ದಯ್ಯನವರಿಂದ ಅಲಂಕರಿಸಲ್ಪಟ್ಟಿತು. ಸ್ವಾಗತಸಂಘಾಧ್ಯಕ್ಷಸ್ಥಾನವು ವೇ| ಪಿ. ಆಯ್. ಹಿರೇಮಠ ಹೈಕೋರ್ಟ ವಕೀಲರು ಹುಬ್ಬಳ್ಳಿ ಇವರಿಂದ ಸ್ವೀಕರಿಸಲ್ಪಟ್ಟದ್ದಿತು. ಇಂತಾಗಿ ಈ ತರುಣಪರಿಷತ್ತಿನ ತ್ರಿಮೂರ್ತಿಗಳೂ ಮಾಹೇಶ್ವರರೇ ಆಗಿದ್ದುದು ನೋಡಿದರೆ ಅಖಿಲಭಾರತ ವೀರಶೈವ ತರುಣರ ತಂಡದಲ್ಲಿ ಮಾಹೇಶ್ವರರ ಪ್ರಗತಿಯನ್ನು ಬಿಚ್ಚಿ ತೋರಿಸುವಂತಿದೆ. ವೇ|| ಟಿ. ಹೆಚ್. ಎಂ. ಸದಾಶಿವಯ್ಯನವರ ವ್ಯಾಖ್ಯಾನವು ತರುಣರಿಗೆ ಉದ್ಬೋಧಕವಾಗಿದ್ದಿತು. ಪ್ರತಿತರುಣನನ್ನೂ ಹೊಡೆದೆಬ್ಬಿಸುವಂತಿದ್ದಿತು. ಆದರೆ ಭಾವುಕರಾದ ಕೆಲ ತರುಣರಿಗೆ "ಆಗಮ ಆಗಮಗಳೆಂದು ಬಡಬಡಿಸುವರು" "ಸಂಸ್ಕೃತಭಾಷೆಯಲ್ಲಿ ಸೂರ್ಯನು ಪಶ್ಚಿಮಕ್ಕೆ ಹುಟ್ಟುವನೆಂದು ಬರೆದಿದ್ದರೆ ಅದನ್ನು ಪ್ರಮಾಣವೆಂದು ತಿಳಿಯುವವರುಂಟು" ಮುಂತಾದ ಕೆಲ ನುಡಿಗಳು ಸಂತಾಪವನ್ನುಂಟುಮಾಡಿರಬೇಕು. ಈ ನುಡಿಯಿಂದ ವೇ|| ಸದಾಶಿವಯ್ಯನವರು ಶಿವಾಗಮಗಳನ್ನೂ ಸಂಸ್ಕೃತಭಾಷೆಯನ್ನೂ ನಿಂದಿಸಿದರೆಂದು ಅನೇಕರು ಭಾವಿಸಿರಬಹುದು. ಇವರು ಪ್ರಾಚೀನ ವೇದಾಗಮನಿಂದಕರಲ್ಲ. ಪ್ರಾಚೀನ ವೇದ ಹಾಗೂ ಶಿವಾಗಮಗಳಾವವು? ಅವುಗಳಲ್ಲಿ ಬಂದಿರುವ ವಿಷಯವಾವುದು ? ಎಂಬುದನ್ನು ಇವರು ತಿಳಿದುಕೊಂಡೇ ಇದ್ದಾರೆ. ಆದರೆ ಇತ್ತೀಚಿಗೆ ಕಲ್ಪಿತ ಪ್ರಮಾಣಗಳೂ ವೇದ-ಶಿವಾಗಮಾದಿಗಳಲ್ಲಿ ಸೇರಿಕೊಂಡು ಅನರ್ಥಕ್ಕೆ ಕಾರಣವಾಗಿವೆ ಎಂಬುದನ್ನು ಹೇಳುವ ಅವಸರದಲ್ಲಿ ಸದರಿಯವರು ಮೇಲಿನಂತೆ ಹೇಳಿದರೇ ಹೊರತು ಬೇರೆಯಲ್ಲವೆಂಬುದು ಅವರನ್ನು ಸ್ವತಃ ಕಂಡಾಗ ಸರ್ವರಿಗೂ ತಿಳಿಯದಿರದು. ಆ ವಿಚಾರವಾಗಿ ಸಮಯವನ್ನು ದೊರಕಿಸಿಕೊಂಡು ಅವರು ಹೇಳತಕ್ಕವರಿದ್ದರು. ಅದೇ ಕಾಲದಲ್ಲಿಯೇ ಅವರು ಹೇಳಬಹುದಾಗಿದ್ದಿತಾದರೂ ವಿಷಯಾಂತರವಾಗುವಂತೆ ತೋರಿದ್ದರಿಂದ ಸಮಾಪ್ತಗೊಳಿಸಿದರು. ಈ ವ್ಯಾಖ್ಯಾನದ ಪರಿಣಾಮವಾಗಿ ಅನೇಕರು ಇವರು ವೇದಾಗಮನಿಂದಕರೆಂದು ಭಾವಿಸಿಕೊಂಡಿರುವುದು ಗೊತ್ತಾಗುವುದು. ಯಾರು

ಹಾಗೆ ಭಾವಿಸುವುದಕ್ಕೆ ಕಾರಣವಿಲ್ಲ. ಇವರಲ್ಲಿರುವ ಸಂಸ್ಕೃತ ಭಾಷಾ ಜ್ಞಾನವು ಅವರ್ಣನೀಯವಾಗಿದೆ. ಇವರ ಸಂಪೂರ್ಣ ಪರಿಚಯವಿಲ್ಲದವರಿಗೆ ಬೇರೆ ಭಾವನೆಯಾಗಿರಬೇಕೇ ಹೊರತು ಇತರರಿಗೆ ಇವರ ನುಡಿಯ ಅರ್ಥವು ಸುಧಾರಣಾ ವಿಚಾರದಲ್ಲಿ ಪರಿಣಮಿಸಿದೆ. ನಾವು ಸ್ವತಃ ಮರುದಿನ ಇವರನ್ನು ಕಂಡಾಗ ಈ ಹೃದ್ಗತವೆಲ್ಲವೂ ತಿಳಿದು ಸಂತೋಷವಾಯಿತು.

ತರುಣ ಪರಿಷತ್ತಿನ ಸ್ವಾಗತಾಧ್ಯಕ್ಷರ ಭಾಷಣ ಹಾಗೂ ಅಧ್ಯಕ್ಷರ ಭಾಷಣಗಳು ಮೊದಲೇ ಅಚ್ಚಾಗಿದ್ದವು. ಅತ್ಯಂತ ಪ್ರಭಾವಶಾಲಿಗಳ ವ್ಯಾಖ್ಯಾನಗಳು ಪ್ರಭಾವಶಾಲಿಗಳೇ ಆಗಿರುವುದು ಸಹಜವಾಗಿದೆ. ಈ ದಿನವೂ ಜನಗಳು ಹೆಚ್ಚಾಗಿ ಬಂದಿದ್ದರು. ಗಲಾಟೆ ಒಮ್ಮೆ ಕಡಿಮೆಯಾಗಿಯೂ ಮತ್ತೊಮ್ಮೆ ವಿಶೇಷವಾಗಿಯೂ ಸಾಗಿಯೇ ಇದ್ದಿತು. ಲೌಡ್‌ಸ್ಪೀಕರಿನ ಧ್ವನಿಯನ್ನೂ ಅಡಗಿಸುತ್ತಲಿದ್ದಿತೆಂದ ಮೇಲೆ ಸಭೆಯಲ್ಲಿ ಅದೆಷ್ಟು ಜನರು ಅರಚಿಕೊಳ್ಳುತ್ತಿದ್ದರೋ! ಎಣಿಸಲಿಕ್ಕೆ ಅಸಾಧ್ಯವಾಗಿದ್ದಿತು.

ಅದೇ ದಿನ ಅ. ಭಾ. ವೀರಶೈವ ವೈದ್ಯಸಮ್ಮೇಲನವೂ ಜರುಗಿತು. ಇದರ ಸ್ವಾಗತಾಧ್ಯಕ್ಷರು ಹುಬ್ಬಳ್ಳಿಯ ಪ್ರಸಿದ್ಧ ವೈದ್ಯರಾದ ವೇ|| ಫಾಲಾಕ್ಷಶಾಸ್ತ್ರಿಗಳವರು. ಸಭಾಧ್ಯಕ್ಷರು ಬೆಂಗಳೂರಿನ ವಿಖ್ಯಾತ ಪಂಡಿತರಾದ ಆಯುರ್ವೇದಾಚಾರ್ಯ, ವೈದ್ಯ ಮಾರ್ತಂಡ, ಶ್ರೀ ಶಿವಕುಮಾರ ಶಿವಾಚಾರ್ಯ ಸ್ವಾಮಿಗಳು. ಉದ್ಘಾಟನ ಸಮಾರಂಭವನ್ನು ನಡೆಯಿಸಿದವರು ಪ್ರಖ್ಯಾತ ಚಿಕಿತ್ಸಕ ಶಿಖಾಮಣಿಗಳಾದ ಶ್ರೀಮನ್ನಿರಂಜನ ಗುಣಮುತಕಲ್ಲು ಶ್ರೀ ಶಾಂತವೀರ ಸ್ವಾಮಿಗಳು ಇಂತಾಗಿ ಈ ಸಮ್ಮೇಲನ ಸ್ವರೂಪದಿಂದ. ಓರ್ವ ಗುರುಗಳು ಓರ್ವ ವಿರಕ್ತರು ಈ ಉಭಯತರ ಪ್ರೇಮ ಮೈತ್ರಿಯಿಂದ ಸಂಗಮವಾಗಿ ಸಾಗಿದ ರೀತಿಯು ಗುರು–ವಿರಕ್ತರ ಏಕೀಕರಣ ಸಮುತವಾದಗಳಿಗೆ ಸಾಕ್ಷಿಯನ್ನು ಕೊಡುವಂತಿದ್ದಿತು. ಉಭಯ ಶ್ರೀಗಳೂ ಪಂ|| ಫಾಲಾಕ್ಷ ಶಾಸ್ತ್ರಿಗಳೂ ವಿದ್ವಾಂಸರೇ ಆಗಿರುವುದರಿಂದ ಇವರೆಲ್ಲರ ವ್ಯಾಖ್ಯಾನಗಳೂ ಸಪ್ರಮಾಣವಾಗಿ ಸಾಗಿ ಸರ್ವ ವೀರಶೈವ ವೈದ್ಯರನ್ನೂ ಚೇತರಿಸುವಂತೆ ಮಾಡಿದವು.

ಮಹಾಸಭೆಯು ಎಲ್ಲಾ ವಿಚಾರದಲ್ಲಿಯೂ ಸಮತಾವಾದ ಅಥವಾ ದೃಷ್ಟಿಯು ಕಂಡು ಬರುವುದಾದರೂ ತರುಣರಲ್ಲಿ ಇನ್ನೂ ಈ ದೃಷ್ಟಿಯು ಹೆಚ್ಚಾಗಿ ಜಾಗೃತವಾಗಿಲ್ಲವೆಂದು ಕೆಲ ಮುಂದಾಳುಗಳು ಅಭಿಪ್ರಾಯಪಡುತ್ತಿದ್ದರು. ಮಹಾಸಭಾ ಮಂಟಪ ರಚನೆಯಲ್ಲಿಯೂ ಪಕ್ಷಪಾತವೇ ಎಂದು ಕೊಂಡರು. ಕೆಲವರು ಈ ಅಪವಾದವು ಬರದಂತೆ ನೋಡಿಕೊಳ್ಳಲು ನಮ್ಮ

ತರುಣ ಮುಂದಾಳುಗಳಿಗೆ ಸಾಧ್ಯವಿದ್ದಿತಾದರೂ ಸಮಯದಲ್ಲಿ ಮರೆತಿದ್ದರೆಂದು ತೋರುತ್ತದೆ. ಆಕ್ಷಣವೇ ದಾವಣಗೆರೆ ಗದುಗಿನ ಮಠದ ವೇ|| ಅನ್ನದಾನಯ್ಯನವರೂ ಪಂ. ವೇ|| ಹೊಳಲು ಚಂದ್ರಶೇಖರಶಾಸ್ತ್ರಿಗಳವರೂ ಸೇರಿ ಆದಿಪಂಚಾಚಾರ್ಯರು ಪಂಚಮಹರ್ಷಿಗಳಿಗೆ ಶಿವತತ್ತ್ವೋಪದೇಶ ಮಾಡಿದ ಚಿತ್ರವನ್ನು ಬಸವಣ್ಣನವರ ಚಿತ್ರದ ಮಗ್ಗಲಿಗೆ ಕಟ್ಟಿಸಿ ಹೂ-ಮಾಲೆಯಿಂದ ಅಲಂಕರಿಸಿದರು. ಅಲ್ಪಸ್ವಲ್ಪ ವಿಷಯದಲ್ಲಿಯೂ ಪಕ್ಷವನ್ನು ಮುಂದುಮಾಡುವ ನಮ್ಮ ತರುಣರು ಹಳಬರನ್ನು ಅದೆಂತು ಗುರು-ವಿರಕ್ತರ ಕಲಹದಿಂದ ದೂರಮಾಡಿ ಸಮಾಜದಲ್ಲಿ ಸಮತಾವಾದದ ಶಾಂತಿಯನ್ನು ಬೀರುವರೋ ತಿಳಿಯದಾಗಿದೆ ಎಂದು ನುರಿತ ಕೆಲ ಸಮತಾವಾದಿಗಳು ನುಡಿಯುತ್ತಿದ್ದರು.

ಗುರು-ವಿರಕ್ತರ ಕಲಹ ನಿವಾರಣಾ ಯೋಜನೆಯನ್ನು ತರುವುದಕ್ಕೆ ಮೊದಲು ಮೂಲಗುರು-ವಿರಕ್ತ ಸ್ವಾಮಿಗಳನ್ನು ಸಂಧಿಸಿದ್ದರೆ ಚೆನ್ನಾಗಿದ್ದಿತು. ಹಾಗೆ ಮಾಡದೆ ಬರೀ ಯೋಜನೆಯನ್ನು ಪಾಸು ಮಾಡಿಕೊಂಡುದು ಉಪಯುಕ್ತವಾಗಿ ತೋರುವುದಿಲ್ಲ. ಈ ಹಿಂದೆ ೧೨ ಮಹಾಸಭೆಗಳಲ್ಲಿ ಪಾಸಾದ ಅನೇಕ ಠರಾವುಗಳು ಹಾಗೆಯೇ ಪುಸ್ತಕದಲ್ಲಿ ಕೂತಿರುವಂತೆ ಈ ೧೩ ನೆಯ ಮಹಾಸಭೆಯ ಠರಾವುಗಳೂ ಕೂತುಕೊಂಡರೆ ಪ್ರಯೋಜನವೇನು? ಗುರು-ವಿರಕ್ತರ ಕಲಹ ನಿವಾರಣೆಯಲ್ಲಿ ಆಯುಷ್ಯವನ್ನು ಕಳೆಯುವುದಕ್ಕಿಂತಲೂ ಮೊದಲು ಭಕ್ತ-ಭಕ್ತರೂ ಮಾಹೇಶ್ವರ—ಮಾಹೇಶ್ವರರೂ ತಮ್ಮ ತಮ್ಮೊಳಗಿನ ಕಲಹಗಳನ್ನು ದೂರಮಾಡಿಕೊಂಡು ಐಕಮತ್ಯವುಳ್ಳವರಾಗುವುದು ಮೇಲು. ಈ ಕಾರ್ಯವು ಮೊದಲು ನಡೆದರೆ ಆಮೇಲೆ ಗುರು-ವಿರಕ್ತರ ಕಲಹವು ತಾನಾಗಿಯೇ ಲೋಪವಾಗುವುದು. ದೂರದೃಷ್ಟಿಯಿಂದ ಆಲೋಚಿಸಿದರೆ ಈಗ ಪ್ರಪಂಚದಲ್ಲಿ ನಡೆದಿರುವುದು ಗರು-ವಿರಕ್ತರ ಕಲಹವೇ ಪ್ರಧಾನವಲ್ಲ, ಅದಕ್ಕಿಂತಲೂ ವೀರಶೈವರ ತತ್ವಭಿನ್ನತೆಯ ಕಲಹವೇ ಅಧಿಕವಾಗಿದೆ ಎಂದು ತೋರುವುದು. ಭಕ್ತ-ಭಕ್ತರೇ ಒಬ್ಬರು ತಮ್ಮ ಮೂಲವನ್ನು ಹುಡುಕಲು ಉತ್ತರಕ್ಕೆ ಹೊರಟಿದ್ದಾರೆ; ಇನ್ನೊಬ್ಬರು ದಕ್ಷಿಣಕ್ಕೆ ಹೊರಟಿದ್ದಾರೆ. ಈ ಎರಡೂ ಸಾಹಸಗಳು ತರವಲ್ಲ ದಕ್ಷಿಣೋತ್ತರಗಳು ಒಂದೇ ಕಾಲದಲ್ಲಿ ಉಂಟಾಗಿವೆ ಎಂದು ಮುಂದರಿದು ಹೇಳುವ ಮಧ್ಯಸ್ಥರು ವೀರಶೈವ ಸಮಾಜದಲ್ಲಿ ತೀರಕಡಿಮೆ. ಈ ವಾದವು ಮೊದಲು ಶಾಂತವಾಗುವುದಕ್ಕೆ ಬದಲು ಇನ್ನೂ ಹೆಚ್ಚಾಗಿಯೇ ಬೆಳೆಯುವುದೆಂದು ಈಗಿನ ವಾತಾವರಣವನ್ನು ಶೋಧಿಸಿದವರಿಗೆ ತಿಳಿಯುವುದು. ಈವಾದವು ಬಗೆಹರಿಯದ ಹೊರತು ಭಕ್ತರೆಲ್ಲರೂ ಒಂದು (ಲಿಂಗಧಾರಿ ಅಂತ್ಯಜ ಸಹಿತವಾಗಿ), ಮಾಹೇಶ್ವರರೆಲ್ಲರೂ ಒಂದು (ಸೇವಾಪರ ಜಂಗಮಸಹಿತವಾಗಿ) ಎಂಬ ಭಾವವು ಜನಗಳಲ್ಲಿ ಬಿಂಬಿಸಲು ಸಾಧ್ಯವೇ ಇಲ್ಲ. ಇವರಲ್ಲಿ ಐಕ್ಯತೆಯು ನೆಲೆಸುವಲ್ಲಿ ಗುರು-ವಿರ

ಕ್ತರ ಐಕ್ಯತೆಯು ಸ್ವಯಂಸಿದ್ಧವಾಗಿ ಜನಿಸುವುದು ಎಂಬ ವಿಚಾರಗಳೆಲ್ಲವು ಮಹಾಸಭೆಗೆ ಬಂದ ಅನೇಕರ ಮುಖಗಳಿಂದ ಹೊರಟವು. ಅಂತೂ ಹೀಗೆಯೇ ಆಗುವುದೆಂಬುದು ಯಾರಿಂದಲೂ ನಿಶ್ಚಯಿಸಲು ಬರುವಂತಿಲ್ಲ. ಆಸ್ತಿಕರಾದ ನಮ್ಮಲ್ಲಿ ದೇವರಮೇಲೆ ವಿಶ್ವಾಸವಿದೆ. ಆತನನ್ನು ಕಾರಣಕರ್ತನೆಂದು ನಾವೆ ಲ್ಲರೂ ಒಪ್ಪುತ್ತೇವೆ. ಕಲುಷಿತವಾತಾವರಣವನ್ನು ಕಳೆಯಬೇಕೆಂದರೆ ದೇವರಿಗೆ ದೊಡ್ಡದೇನೂ ಅಲ್ಲ. ಅಂತಹ ಶಾಂತಿ ಸದ್ಬುದ್ಧಿಯನ್ನು ಸಮಾಜದ ವಿದ್ವಾಂಸರ ಲ್ಲಿಯೂ, ಶ್ರೀಸ್ವಾಮಿಗಳಲ್ಲಿಯೂ ಸಕಲಭಕ್ತ-ಮಾಹೇಶ್ವರರಲ್ಲಿಯೂ ಶೀಘ್ರವಾಗಿ ದಯಪಾಲಿಸಲೆಂದೂ, ಇದ್ದ ವಿಷಯವನ್ನು ಇದ್ದಂತೆ, ನಡೆದವಿಷಯವನ್ನು ನಡೆ ದಂತೆ, ನೋಡಿದ ವಿಷಯನ್ನು ನೋಡಿದಂತೆ, ಕೇಳಿದ ವಿಷಯವನ್ನು ಕೇಳಿದಂತೆ ನುಡಿಯುವ ಹಾಗೂ ಬರೆಯುವ ಸ್ವಭಾವವು ನಮ್ಮನ್ನು ಮೊದಲು ಮಾಡಿ ಸರ್ವ ರಿಗೂ ಬರಲೆಂತಲೂ ಕೆಲಸಕ್ಕೆ ಬಾರದ ಪಕ್ಷದಲ್ಲಿ ಕೊಳೆಯುವ ಮನಸ್ಸನ್ನು "ಎಲ್ಲರೂ ನನ್ನವರು, ನನ್ನಂತೆ ಎಲ್ಲರೂ" ಎಂಬ ಉದಾರತೆಯಲ್ಲಿ ತೊಡಗಿಸಿ ಆತ್ಮೋ ನ್ನತಿಯನ್ನು ಮಾಡಿಕೊಳ್ಳಲೆಂತಲೂ ಇಚ್ಛಿಸಿ ಉದಾತ್ತವಿಚಾರದ, ಶಾಂತ ಸ್ವಭಾವದ ನಿಷ್ಪಕ್ಷಪಾತವೃತ್ತಿಯ ಶ್ರೀಮಾನ್ ಎಸ್. ಎಸ್. ಬಸವನಾಳ ಎಂ. ಎ. ಎಂ. ಆರ್. ಎ. ಎಸ್. ಅಧ್ಯಕ್ಷ ಮಹೋದಯರಿಗೆ ಪರಮಾತ್ಮನು ಸಾಹಿತ್ಯ ಸೇವೆಗಾಗಿ ದೀರ್ಘಾಯುವನ್ನೀಯಲೆಂತಲೂ ಅವರಿಗೆ ಇನ್ನಿತರ ಸಮಾಜಪ್ರಮು ಖರು ಸರ್ವರೀತಿಯಿಂದಲೂ ಬೆಂಬಲವೀಯಲೆಂತಲೂ ಹಾರೈಸಿ ಮಹಾಸಭೆಗೆ ಬಂದ ಆಯಾಭಾಗದ ಪ್ರಮುಖವೀರಶೈವ ಬಂಧು ಬಾಂಧವರಿಗೆ ಅಭಿನಂದನೆ ಯನ್ನಿತ್ತು ಈ ಅಲ್ಪ ಲೇಖವನ್ನು ವಿರಮಿಸುತ್ತೇವೆ.

---

## ಸ್ತ್ರೀ ಸ್ವಾತಂತ್ರ

ಲೇಖಕ: "ಗಂಗಾಧರ"

ಸ್ವಾತಂತ್ರ್ಯವು ಜನ್ಮಸಿದ್ಧವಾದ ಹಕ್ಕು. ಅದು ಇಲ್ಲದ ಬಾಳು ಕೀಳು ಎಂಬ ಗಾಳಿಯು ಎಲ್ಲೆಡೆಯಲ್ಲಿಯೂ ಬೀಸುತ್ತಿರುವಾಗ ಸ್ತ್ರೀಯರಿಗೆ ಸ್ವಾತಂತ್ರ್ಯವ ಬೇಕೋ ಬೇಡವೋ ಎಂಬ ಪ್ರಶ್ನೆಯು ಹುಟ್ಟುತ್ತದೆ. ಸ್ತ್ರೀ ಎಂದರೆ ಸಮಾಜದ ಅರ್ಧ ಅಂಗ. ಸ್ತ್ರೀ ಸುಧಾರಣೆಯಾದರೇನೇ ಸಮಾಜ ಸುಧಾರಣೆಯಾಗುತ್ತದೆ ಎಂಬ ವಿಷಯವನ್ನು ಸರ್ವರೂ ಒಪ್ಪಬಹುದು. ನಮ್ಮ ಪ್ರಾಚೀನ ಇತಿಹಾಸ ವನ್ನು ಅವಲೋಕಿಸಿದರೆ ಸ್ತ್ರೀಯರಿಗೆ ಕೆಲವಂಶದಲ್ಲಿ ಸ್ವಾತಂತ್ರ್ಯವಿತ್ತೆಂದು ತಿಳಿದು

ಬರುತ್ತದೆ. ಯಜ್ಞಸಮಯದಲ್ಲಿ ಸಪತ್ನಿಕನಾಗಿಯೇ ಯಜ್ಞವಿಧಿಯು ನೆರವೇರ ಬೇಕೆಂಬುದು ಇದಕ್ಕೆ ಸಾಕ್ಷಿಯಾಗಿದೆ. ಇದರಂತೆ ಇನ್ನುಳಿದ ಧಾರ್ಮಿಕ ಸಂಸ್ಕಾರ ಗಳಲ್ಲಿ ಸ್ತ್ರೀಯರಿಗೆ ಸ್ವಾತಂತ್ರ್ಯವಿತ್ತು. ಸ್ತ್ರೀಯೆಂದರೆ ಗೃಹದೇವತೆಯೆಂಬ ಭಾವ ನೆಯು ಬಹುಕಾಲದಿಂದಲೂ ನಮ್ಮಲ್ಲಿ ನೆಲೆಗೊಂಡಿದೆ. ಈ ವೀರಶೈವ ಧರ್ಮದಲ್ಲಿ ಶಿವದೀಕ್ಷೆ ಲಿಂಗಪೂಜಾದಿ ವಿಷಯಗಳ ಬಗ್ಗೆ ಸ್ತ್ರೀಗೆ ಸ್ವಾತಂತ್ರವಿದೆ. ಇದರಿಂದ ಸ್ತ್ರೀಗೆ ಧಾರ್ಮಿಕಸಂಸ್ಕಾರಗಳಲ್ಲಿ ಸ್ವಾತಂತ್ರ್ಯವೇ ಇಲ್ಲವೆಂದು ಹೇಳಲಾಗುವದಿಲ್ಲ. "ಯತ್ರನಾರ್ಯಾಪ್ರಪೂಜ್ಯಂತೆ ರಮಂತೆ ತತ್ರ ದೇವತಾಃ" ಅಂದರೆ ಸ್ತ್ರೀಯು ಮರ್ಯಾದಿಸಲ್ಪಟ್ಟಲ್ಲಿ ದೇವತೆಗಳು ವಾಸಿಸುತ್ತಾರೆ. ಈ ವಿಷಯವನ್ನೇ ಲಕ್ಷ್ಮೀಶನು ತನ್ನ ಕವಿತೆಯಲ್ಲಿ ಹೇಳಿದ್ದಾನೆ. "........ಸತ್ಸತಿಯದೆಲ್ಲಿ........ ಸಮುದ್ರಾತ್ಮಜೆ ಸರಾಗದಿಂ ಸುಸ್ಥಿರೆಯಾಗಿ ನೆಲಸಿರ್ಪಳು." ಸ್ತ್ರೀಯು ದಾಸಿಯಲ್ಲ. ಸಮಾಜ ದಲ್ಲಿ ಗಣ್ಯವಾದ ಸ್ಥಾನವು ಅವಳಿಗಿದೆ. ಅಂದಮೇಲೆ ಸ್ತ್ರೀಜಾಗ್ರತಿಯೆಂದರೆ ಸಮಾಜ ಜಾಗ್ರತಿ. ಆದ್ದರಿಂದ ಸ್ತ್ರೀಯರಿಗೆ ಕೆಲವಂಶದಲ್ಲಿಯಾದರೂ ಸ್ವಾತಂತ್ರ್ಯವಿರಬೇಕು. ಸ್ತ್ರೀ ಜೀವನದಲ್ಲಿ ಮಾನವನ ಜೀವಿತದಂತೆ ಮುಖ್ಯವಾಗಿ ಮೂರು ಅವಸ್ಥೆಗಳನ್ನು ಮಾಡಬಹುದು,

(೧) ಬಾಲ್ಯ
(೨) ಹರೆಯ
(೩) ವೃದ್ಧಾಪ್ಯ

ಈ ಮೂರು ಅವಸ್ಥೆಗಳಲ್ಲಿಯೂ ಸ್ತ್ರೀಯರು ತಮ್ಮ ಜೀವಿತವನ್ನು ಪುರುಷರ ಆಶ್ರಯದಲ್ಲಿಯೇ ಕಳೆಯುತ್ತಾರೆ.

ಪಿತನಿಂದೆ ಬಾಲ್ಯದೊಳ್ ಪತಿಯಿಂದೆ ಹರೆಯದೊಳ್
ಸುತನಿಂದೆ ವೃದ್ಧಾಪ್ಯದೊಳ್ ಕುಲಸ್ತ್ರೀ ಸುರ
ಕ್ಷಿತೆಯಾಗದಿರ್ದೊಡವಳಿಂದ ನಿಜವಂಶಕುಪಹತಿ
ಬಾರದಿರದಿಳೆಯೊಳು (ಜೈಮಿನಿ ಭಾ.)

ಹೀಗಿದ್ದ ಮೇಲೆ ಸ್ವಾತಂತ್ರ್ಯವೇ ಅವರಿಗಿಲ್ಲವೆಂದು ಸಾಧಿಸುವುದರಲ್ಲಿ ಜಾಣ್ಮೆಯಿಲ್ಲ. ಅವರ ವೈಯಕ್ತಿಕ ಜೀವನದಲ್ಲಿ ತಮ್ಮ ಜವಾಬ್ದಾರಿಯನ್ನರಿತು ಮುಂದಿನ ಜೀವನವು ಸುಗಮವಾಗಲಿಕ್ಕೆ ಸ್ತ್ರೀಯರಿಗೆ ಸ್ವಾತಂತ್ರ್ಯವಿರಬೇಕು. ಸ್ವಾತಂತ್ರ್ಯ ವೆಂದರೆ ಸ್ವೇಚ್ಛೆಯಲ್ಲ. ಸ್ವೇಚ್ಛೆಯು ಅವರನ್ನು ಕೆಲವುಸಟ್ಟಿಗೆ ಅಯೋಗ್ಯ ದಾರಿಗೆ ಎಳೆದರೂ ಎಳೆಯಬಹುದು. ಶಿಕ್ಷಣ ಹಾಗೂ ವಿವಾಹ ಈ ವಿಷಯಗಳಲ್ಲಿ ಅವರಿಗೆ ಸ್ವಾತಂತ್ರ್ಯವಿರಲೇ ಬೇಕು. ನಮ್ಮ ಹಿಂದಿನ ಜೀವಿತವನ್ನು ಅಭ್ಯಾಸಿಸಿದರೆ ನಮ್ಮಲ್ಲಿ

ಮೇಲ್ಕಂಡ ಎರಡುವಿಷಯಗಳ ಬಗ್ಗೆ ಪುರುಷಸಮಾಜವು ಅವರ ಒಪ್ಪಿಗೆಯಂತೆಯೇ ಕಾರ್ಯ ನಡೆಯಿಸಿತ್ತೆಂದು ಹೇಳಬಹುದು.

ಸ್ತ್ರೀಯರಿಗೆ ಶಿಕ್ಷಣವು ಬೇಕೋ ಬೇಡವೊ ಎಂಬ ವಿಷಯದಲ್ಲಿ ಮತಭೇದವು ಬಹುಮಟ್ಟಿಗೆಕಡಿಮೆಯಿದೆ. ಆದರಲ್ಲಿಯೂ ಒಲವಾದನೀತಿಯಿಂದ ಕೂಡಿದಶಿಕ್ಷಣವು ದೊರೆಯಲೇಬೇಕೆಂಬುದನ್ನು ಸರ್ವರೂ ಒಪ್ಪಬಹುದು. ಶಿಕ್ಷಣವೆಂದರೆ ಬರೀ ಅಕ್ಷರೀವಿದ್ಯೆಯಲ್ಲ; ಸ್ತ್ರೀಯರಿಗೆ ಅತ್ಯಾವಶ್ಯವೆನಿಸುವ ಇನ್ನಿತರಶಿಕ್ಷಣಗಳೂ ಇದರಲ್ಲಿ ಸಮಾವೇಶವಾಗುತ್ತವೆ. ರೋಗಿಗಳ ಶುಶ್ರೂಷೆ ಅತಿಥಿಸತ್ಕಾರ ಮುಂತಾದ ಶಿಕ್ಷಣವನ್ನು ಗೃಹಿಣಿಯು ದೊರಕಿಸಿಕೊಂಡಿರಲೇಬೇಕು. ಅಜ್ಞಾನದಲ್ಲಿ ಕೊಳೆಯು ವಂತೆ ಸ್ತ್ರೀಸಮಾಜವನ್ನು ಇಡುವದೆಂದರೆ ಅದು ನಮ್ಮ ಪ್ರಗತಿಗೆ ಬಲವಾದ ಕುಂ ರಕ್ಷಕರು ಸ್ತ್ರೀಯರ ಬಾಲ್ಯದಲ್ಲಿ ಯೋಗ್ಯವಾದ ಶಿಕ್ಷಣವನ್ನು ಕೊಡದೆಹೋದ ಅವರುತಮ್ಮ ಕರ್ತವ್ಯವನ್ನು ಸರಿಯಾದ ರೀತಿಯಲ್ಲಿ ಮಾಡಿಲ್ಲವೆಂದೇ ಹೇಳಬಹುದು ಸಮಾಜದಲ್ಲಿ ಹೇಗೆ ನಡೆದುಕೊಳ್ಳಬೇಕು ನೆರೆಹೊರೆಯವರೊಡನೆ ಹೇಗೆ ಆಚರಿ ಬೇಕು, ಮನೆಯವರನ್ನು ಹೇಗೆ ಆದರಿಸಬೇಕು ಎಂಬವು ಅಡಿಗೆಮನೆಯನ್ನೇ ಕಾರ್ಯ ಕ್ಷೇತ್ರವನ್ನಾಗಿ ಆರಿಸಿಕೊಂಡ ಗೃಹದೇವತೆಗೆ ಗೊತ್ತಿರಲೇಬೇಕಲ್ಲವೇ? ಸ್ತ್ರೀಯರು ಹೇಗಿರಬೇಕೆಂಬ ವಿಚಾರದಲ್ಲಿ ಲಕ್ಷ್ಮೀಶನು ಈ ಅಭಿಪ್ರಾಯವುಳ್ಳವ ನಾಗಿದ್ದಾನೆ:—

............ಜಗದೊಳಂತದಂ ಕುಲಸ್ತ್ರೀಯರೊಳಗೆ
ನಿಜನಾಥ ಭೀತಿ ಸುಚರಿತ್ರೆ ಗುಣವತಿ ಮಾನಿ
ನಿ ಜನಾಪವಾದ ವಿರಹಿತೆ...............

ಮತ್ತು

ಮಾವಂಗೆ ಭಾವಂಗೆ ಮೇಣತ್ತೆಗೈದೆ ಸಂ | ಭಾವಿಸುತೆ ಸೇವಿಸುತೆ ಕಾಂತಂಗೆ
ಸುರತ ಸಂಜೀವನನವನೀವ ನವಯುವತಿಯುಹ ಲಕ್ಷಣಂ ಸುಕೃತ ಫಲಮಂತಲ್ಲದೆ—

ಅಲ್ಲದೆ

ವರೆಯುಜ್ಞ ಶಾಲೆಯುಂ ಬಾಲೆಯುಂ ದ್ವಿಜಪಂಕ್ತಿ
ಪರಿಶೋಭಿಸದೊಡೆ ಸತ್ಕವಿತೆಯುಂ ಯುವತಿಯುಂ
ಚರಣಗತಿ ಸಮತೆವೆತ್ತಿರದೊಡಬ್ಜಾರಿಯುಂ ನಾರಿಯುಂ ಚಾರುತರದ
ಕರಭೋರು ಕಾಂತಿಸಂಯುಕ್ತಮಾಗಿರದಿರ್ದೊ
ಡರಸಾಳ್ವ ಧರಣಿಯುಂ ತರುಣಿಯುಂ ಶಾಲಿ ಸುಂ
ದರ ಮಾಗಿರದೊಡೆ ಸೌಮಾಂಗಳ್ಯಮಾಗಿಯುಂ ಮೇಲೆಯುನ್ನತಿಯ
ವುದೇ ||

ಸ್ತ್ರೀಯು ಹೀಗಿದ್ದರೇನೇ “ನಾರಿ ಪರರುಪಕಾರಿ ನಾರಿ ಸ್ವರ್ಗಕೆ ದಾರಿ” ಎಂಬುದು ಸಾರ್ಥಕವಾಗಬಹುದು. ಸಂಸ್ಕೃತ ಕವಿಯೊಬ್ಬನು ಸ್ತ್ರೀಯರ ವಿಷಯವಾಗಿ ಹೀಗೆ ಹೇಳುತ್ತಾನೆ. “ಕಾರ್ಯೇಷು ದಾಸೀ ಕರಣೇಷು ಮಂತ್ರೀ ಭೋಜ್ಯೇಷು ಮಾತಾ ಶಯನೇಷು ರಂಭಾ ಧರ್ಮಾನುಕೂಲೆ ಕ್ಷಮಯಾ ಧರಿತ್ರಿ ಷಾಡ್ಗುಣ್ಯ ಭಾರ್ಯಾಃ ಕುಲಮುದ್ಧರಂತಿ.” ಮುಂದಿನ ಪೀಳಿಗೆಯು ಏಳಿಗೆಯಾಗಬೇಕಾದರೆ ಗೃಹಿಣಿಯವರಿಗೆ ನಾವಿಂದು ಶಿಕ್ಷಣವನ್ನು ಕೊಡಲೇಬೇಕು. ಅಂದರೇನೇ ಬಾಳು ಸುಗಮ. ಬಾಲ್ಯದಲ್ಲಿಯ ಶಿಕ್ಷಣವೇ ಅವರ ಜೀವನದಲ್ಲಿ ಕ್ರಾಂತಿಯನ್ನು ಮಾಡಬಹುದು. ಆ ಕಾರಣ ಸ್ತ್ರೀಯರಿಗೆ ಅತ್ಯವಶ್ಯವೆನಿಸುವ ಶಿಕ್ಷಣವನ್ನು ಕೊಡದೆ ಹೋದರೆ ಸಮಾಜವು ಉನ್ನತಿಯನ್ನು ಕಾಣದಿಷ್ಟೇ ಅಲ್ಲ. ಅದರ ಪ್ರಗತಿಯ ಮಾರ್ಗದಲ್ಲಿ ಇದೊಂದು ದೊಡ್ಡ ಕಂಟಕವೆಂದು ಹೇಳಬಹುದು. ಬಾಲ್ಯದ ಶಿಕ್ಷಣವು ಮುಗಿದ ಮೇಲೆ ಕುಮಾರಿಯು ಯುವತಿಯಾದಾಗ ತನ್ನ ಸಂಗಡಿಗನನ್ನು ಆರಿಸಿಕೊಳ್ಳುವಾಗ ಕೂಡಾ ಸ್ತ್ರೀಯರಿಗೆ ಸ್ವಾತಂತ್ರ್ಯವಿರಬೇಕು.

ಕನ್ಯೆಯ ಮನಸ್ಸಿಗೆ ಬಾರದಂಥ ಪರಸ್ಪರ ವಿರುದ್ಧಭಾವನೆಯುಳ್ಳ ಯುವಕನನ್ನು ಲಗ್ನಮಾಡುವ ಸಾಹಸಕ್ಕೆ ಖಂಡಿತವಾಗಿಯೂ ಬೀಳಬಾರದು. ಕನ್ಯೆಯ ರಕ್ಷಕರು ಈ ವಿಷಯದಲ್ಲಿ ವಿಶೇಷ ದಕ್ಷತೆಯನ್ನು ವಹಿಸಬೇಕು. ವಿವಾಹದ ವಿಷಯದಲ್ಲಿ ವಧು ವರರ ಮನಸ್ಸೇ ಮುಖ್ಯವಾದದ್ದು. ಇದನ್ನುಳಿದವುಗಳಿಗೆ ಅಷ್ಟೊಂದು ಮಹತ್ವವಿಲ್ಲ. ಹೊನ್ನಮ್ಮನು ತನ್ನ ಹದಿಬದೆಯ ಧರ್ಮ ಎಂಬ ಗ್ರಂಥದಲ್ಲಿ ಈ ರೀತಿ ಹೇಳಿದ್ದಾಳೆ. “ಸುಗುಣನಾವನು ಸುಚರಿತ್ರನಾವನು ಎಂದು ಬಗೆದು ಭಾವಿಸಿ ಪೆಣ್ಣನೀವುದು ವಂಶದೊಳೊಳುಗುವರನಿಗೊಲಿದು” ಅಲ್ಲದೆ, ಒಂದು ಎಚ್ಚರಿಕೆಯನ್ನೂ ಕೂಡಾ ಕೊಟ್ಟಿದ್ದಾಳೆ. “ಪಣದಾಶೆ ನಂಟುತನದ ಪತ್ತುಗೆ ಸ್ನೇಹದೆಣಿಕೆಗಳಿಂಪೆದೆಕರಗಿ ಕುಲಜನ್ಮನರೂಪ ಕುಂದಿದ ನಡೆವೆಣಕೀಯಲಾಗದು ಪೆಣ್ಣ” ಹಿಂದೆ ನಮ್ಮ ಬಳಕೆಯಲ್ಲಿದ್ದ ಸ್ವಯಂವರಗಳ” ಈ ವಿಷಯವನ್ನು ಬಲಪಡಿಸುತ್ತವೆ. ಮಹಾಭಾರತದಲ್ಲಿಯ ದ್ರೌಪದಿ ಸ್ವಯಂವರವು ಈ ವಿಷಯವನ್ನು ಮತ್ತಷ್ಟು ಬೆಳಕಿಗೆ ತರುತ್ತದೆ. ದ್ರುಪದರಾಜನು ತನ್ನ ಮಗಳ ಸ್ವಯಂವರಕ್ಕಾಗಿ ಕ್ಷತ್ರಿಯರನ್ನೆಲ್ಲ ಆಮಂತ್ರಿಸಿ ಅವರೆದುರಿನಲ್ಲಿ ತನ್ನ ಪಣವನ್ನು ತಿಳಿಯಪಡಿಸುತ್ತಾನೆ. ಕರ್ಣನು ಆ ಪಣದಲ್ಲಿ ಜಯವನ್ನು ದೊರಕಿಸುತ್ತಾನೆ. ಆದರೂ ಅವನನ್ನು ವಿವಾಹವಾಗಲಿಕ್ಕೆ ದ್ರೌಪದಿಯು ಸಿದ್ಧಳಾಗಿಲ್ಲ— ತನ್ನ ಮನೆತನದ ಗೌರವವನ್ನುಳಿಸಲಿಕ್ಕೆಂದು— ಸ್ವತಃ ಶ್ರೀಕೃಷ್ಣನೇ ಅವಳಿಗೆ ಜಾತೀಯತೆಯು ಮುಖ್ಯವಲ್ಲವೆಂದು ಹೇಳಿದರೂ ಕೇಳದೆ ತನ್ನ ಮನಸ್ಸಿಗೆ ಬಂದ ಅರ್ಜುನನನ್ನು ವರಿಸುತ್ತಾಳೆ. ವಧುವರರಿಗೆ ವಿವಾಹ ವಿಷಯದಲ್ಲಿ ಸಂಪೂರ್ಣ

ಸ್ವಾತಂತ್ರ್ಯವಿರಬೇಕಾದರೆ ಈಗ ಸಮಾಜದಲ್ಲಿ ರೂಢವಾಗಿರುವ ಸಮಾಜ ಘಾತಕ ವಾದ ಕನ್ಯಾಶುಲ್ಕ ವರದಕ್ಷಿಣೆಗಳನ್ನು ಹೇಳಹೆಸರಿಲ್ಲದಂತೆ ಮಾಡಬೇಕು. ಕನ್ಯಾ ವಿಕ್ರಯ ಮಾಡುವವರು ಪತಿತರೆಂಬ ಭಾವನೆಯು ನಮ್ಮಲ್ಲಿ ನೆಲೆಗೊಂಡಿರಬೇಕು ಯಾಕೆಂದರೆ "ಪತಿತರಾದರ್......ಪಿರಿದು ಕನ್ಯಾವಿಕ್ರಯಂಗೈದು ಜೀವಿಸುವ ಮಾನ ವನ ಪಿತೃಗಳಂತೆ" ಸಂಸಾರವು ಸುಖಮಯವಾಗಬೇಕಾದರೆ ಪರಸ್ಪರರಲ್ಲಿ ಸ್ನೇಹ ವಿಶ್ವಾಸಗಳು ಅತ್ಯವಶ್ಯವಾಗಿರಬೇಕು. ಆಂಗ್ಲ ಲೇಖಕರೊಬ್ಬರು ತಮ್ಮ ಪ್ರಬಂಧ ದಲ್ಲಿ ಈ ರೀತಿ ಹೇಳಿದ್ದಾರೆ. "There is nothing that poisons the life of a country more surely than any thing which threatens the security, Confidence, and the purity of home life.

ವಿವಾಹದಿಂದಲೇ ವಧುವರರ ಹೊಸ ಜನ್ಮವು ಆರಂಭವಾಗುತ್ತದೆಂಬುದನ್ನು ನಮ್ಮ ಶಾಸ್ತ್ರಕಾರರು ಹಾಗೂ ನೀತಿಕಾರರು ಹೇಳುತ್ತಾರೆ. ಅಂದಮೇಲೆ ಅವರ ಬಾಳು ಸುಖಮಯವಾಗಬೇಕೆಂಬ ಇಚ್ಛೆ ಇದ್ದರೆ ಅವರ ಅಭಿಪ್ರಾಯದಂತೆ ನಡೆಯ ಬೇಕಾದುದು ಮುಖ್ಯ ಕೆಲಸ ತಮ್ಮ ಅಪೇಕ್ಷೆಯಂತೆ ವಧುವರರು ಒಪ್ಪದಿದ್ದರೂ ತಮ್ಮ ಕರ್ತವ್ಯವನ್ನು ಮುಗಿಸಬೇಕೆಂಬ ಅಭಿಲಾಷೆಯಿಂದ ವಿವಾಹಗಳನ್ನು ನೆರವೇರಿಸುವದು ಅನ್ಯಾಯ ಅನಾಹುತಗಳಿಗೆ ಆಹ್ವಾನಕೊಟ್ಟಂತೆ. ಆದ್ದರಿಂದ ಇಂದಿನ ಸಮಾಜವು ಈಗಲಾದರೂ ಎಚ್ಚೆತ್ತು ಈ ತರದ ಅಯೋಗ್ಯಕಾರ್ಯಗಳಿಗೆ ತಡೆ ಹಾಕುವದು ಒಳ್ಳೇದು. ಇದರಂತೆಯೇ ಬಾಲ್ಯವಿವಾಹಗಳನ್ನು ತಡೆಯಬೇಕು ಬಹು ವಿವಾಹಗಳನ್ನು ನಿಯಮ ಬಾಹ್ಯವಾದವುಗಳೆಂದು ಬಹಿಷ್ಕರಿಸಬೇಕು. ಲಕ್ಷ್ಮೀಶ, ಮನು, ಮಹಾಭಾರತದ ಗ್ರಂಥಕರ್ತೃವಾದ ನಾರಣಪ್ಪ ಮೊದಲಾದವರು ಸ್ತ್ರೀಯರಿಗೆ ಸ್ವಾತಂತ್ರ್ಯವಿರಬಾರದೆಂಬ ಅಭಿಪ್ರಾಯವುಳ್ಳವರಾಗಿದ್ದಾರೆ.

"ಪತಿದೈವವೆಂದರಿದು ನಡೆವ ಸತಿಗಹುದು ಪರ
ಗತಿಯಲ್ಲದಂಗನೆಯರತಿಸಾಹಸಿಗಳವರ
ಕೃತಕ ಶೀಲಂಗಳಂ ನಂಬಲಾಗದು ನೋಡ್ ಸ್ವಾತಂತ್ರ್ಯಮಂ ಕುಡಲಾಗದು"
"ನಸ್ತ್ರೀ ಸ್ವಾತಂತ್ರ್ಯ ಮರ್ಹತಿ." ಅಲ್ಲದೆ

"ಪಿತನಿರಲು ದಾತಾರನಿರೆ ನಿಜ
ಪತಿಯಿರಲು ಸುತ ದಾಸ ಸತಿ ಈ
ತ್ರಿತಯದೊಳ್ ಸ್ವಾತಂತ್ರ್ಯವಿಲ್ಲಾವ ಕಾಲದೊಳು"

ಅಂದಮೇಲೆ ಇದಕ್ಕೆ ಕಾರಣವೇನು? ಎಂಬ ಪ್ರಶ್ನೆಯು ಹುಟ್ಟುತ್ತ ಸ್ತ್ರೀಯರ ಪ್ರಕೃತಿ ಹಾಗೂ ಪುರುಷರ ಪ್ರಕೃತಿ ಇವುಗಳನ್ನಷ್ಟು ಲ...

ಕೆಲಮಟ್ಟಿಗೆ ಸಮಾಧಾನವು ದೊರೆಯುತ್ತದೆ. ಸ್ತ್ರೀಯರಲ್ಲಿ ಸಾಕಷ್ಟು ಶಕ್ತಿ ಸಾಮರ್ಥ್ಯವಿಲ್ಲ. ಧೈರ್ಯವಿಲ್ಲ; ಹಾಗೂ ಸ್ತ್ರೀ ಸಹಜವಾದ ಲಜ್ಜೆ ಇವುಗಳನ್ನು ವಿಚಾರಿಸಿದರೆ ಅಡಿಗೆಯ ಮನೆಯೆ ಅವಳ ಕಾರ್ಯಕ್ಷೇತ್ರವಾಗಲು ಯೋಗ್ಯವೆಂದು ಪೂರ್ವಜರು ನಿರ್ಧರಿಸಿದ್ದಾರೆ. ಸ್ತ್ರೀಯರಲ್ಲಿರುವಷ್ಟು ತಾಳ್ಮೆಯು ಪುರುಷನಲ್ಲಿರು ವದಿಲ್ಲ. ಅವಳ ತಾಳ್ಮೆಯೇ ಬಾಳು ಬೆಳೆಯುವದಕ್ಕೆ ಮೂಲವಾಗಿದೆ; ಬಾಹ್ಯ ಜಗತ್ತಿನಲ್ಲಿ ಅವಳಿಂದ ಕೆಲಸವಾಗಲಾರದು. ಅದಕ್ಕೆ ಪುರುಷನೇ ಯೋಗ್ಯ. ಹೀಗೆ ಪೂರ್ವದಲ್ಲಿ ಸ್ತ್ರೀ ಪುರುಷರು ತಮ್ಮ ಶಕ್ತಿ ಬುದ್ಧಿಗನುಗುಣಗಳಾದ ಕಾರ್ಯ ಗಳನ್ನು ಆರಿಸಿಕೊಂಡಿದ್ದಾರೆ. ಅವನ್ನವರು ಒಪ್ಪಿಕೊಂಡದ್ದು ಆಕ್ರಮಣದಿಂದಲೂ ಅಲ್ಲ; ದಾಸ್ಯತ್ವದಿಂದಲೂ ಅಲ್ಲ. ನಿಸರ್ಗವೇ ಈ ರೀತಿ ಮಾಡಿದೆ. ಗುರುಹಿರಿಯರ ಆಜ್ಞೆಗೊಳಪಟ್ಟಿರುವದು ದಾಸ್ಯತ್ವವಲ್ಲ. ಓರ್ವ ಮಹಿಳೆಯು ತನ್ನ ಸಾಹಸದಿಂದ ಅಡಿಗೆ ಮನೆಗಳನ್ನೇ ಕೆಡವಲು ಹೊರಟಿದ್ದಾಳೆ. ಇಂಥವರನ್ನು ಶ್ರೀ. ಜೋಯಿಸ್ ಯವರು "ಅಡಿಗೆ ಮನೆಯನ್ನು ಕೆಡವ ಹೊರಟರೆ ನೀವೇ ನಿರಾಧಾರಿಗಳಾಗು ವಿರಿ" ಎಂಬದಾಗಿ ಎಚ್ಚರಿಸಿದ್ದಾರೆ. ಮನಬಂದಂತೆ ನಡೆಯುವ ಸ್ವಾತಂತ್ರ್ಯವನ್ನು ಇಂದಿನವರು ಬೇಡುವದಾದರೆ ಖಂಡಿತವಾಗಿಯೂ ಅದು ಹಿತಕರವಲ್ಲ ಪಾಶ್ಚಿಮಾತ್ಯ ಸಂಸ್ಕೃತಿಗೂ ನಮ್ಮ ಸಂಸ್ಕೃತಿಗೂ ಮಹದಂತರವಿದೆಯೆಂಬುದನ್ನು ಅವಶ್ಯ ವಾಗಿ ಲಕ್ಷಿಸಬೇಕು. ನಮ್ಮದನ್ನು ನಾವು ರಕ್ಷಿಸಿಕೊಳ್ಳಬೇಕಾದರೆ ಪರರ ಸಂಸ್ಕೃತಿ ಯನ್ನು ಅನುಸರಿಸುವದು ಎಂದಿಗೂ ಯೋಗ್ಯವಲ್ಲ. ಸ್ತ್ರೀಯರು ತಮ್ಮ ಕಾರ್ಯ ಕ್ಷೇತ್ರದಲ್ಲಿದ್ದುಕೊಂಡೇ ಉತ್ತಮರಾಷ್ಟ್ರನಿರ್ಮಾಣಕರನ್ನು ನಿರ್ಮಿಸುವ ಶಕ್ತಿಯು ಅವರಲ್ಲಿದೆ. ತಾಯಿಯ ಹಿತೋಕ್ತಿಗಳು ಮಾಡುವಷ್ಟು ಪರಿಣಾಮವನ್ನು ಬೇರೆ ಯಾವದೂ ಮಾಡುವದು ಶಕ್ಯವಿಲ್ಲ,

ಸ್ತ್ರೀಯರಲ್ಲಿ ಸ್ವಭಾವತಃ ಚಂಚಲತೆಯು ಬಹಳ. ಅವಳಲ್ಲಿ ಸ್ಥಿರತೆಯು ಕಡಿಮೆ. ಮಾನವನನ್ನು ಆತನ ಕರ್ತವ್ಯದ ದಾರಿಯಿಂದ ದೂರೆಳೆಯುವಷ್ಟು ಕೃತಕತೆ ಮೋಹಗಳು ಅವಳಲ್ಲಿ ಬಹಳ. ಸುಧನ್ವನು ತನ್ನ ತಂದೆಯ ಆಜ್ಞೆಯನ್ನು ಮೀರಿ ಕರ್ತವ್ಯಪರಾಙ್ಮುಖನಾದುದು ಸ್ತ್ರೀವ್ಯಾಮೋಹದಿಂದಲೇ ಸ್ತ್ರೀಯರಿಗೆ ಸರ್ವವಿಧ ದಿಂದಲೂ ಸ್ವತಂತ್ರತೆ ಕೊಡುವದು ಭಾರತೀಯ ಸಂಸ್ಕೃತಿ ವಿರೋಧವಾದದ್ದು. ಈ ವಿಷಯದಲ್ಲಿ ಮಹಾಭಾರತದಲ್ಲಿಯೂ ಜೈಮಿನಿಯಲ್ಲಿಯೂ ದೊರೆಯುವ ಆಧಾರಗಳನು ತಮ್ಮ ಮುಂದಿಟ್ಟು ಈ ವಿಷಯವನ್ನು ಮುಗಿಸುತ್ತೇನೆ

ಚಪಲೆ ಚಂಚಲೆ ಚಾಟುವತಿ ಚಂಡಿ ಛಲವಾದಿ
ಕುಪಿತೆ ಕುತ್ಸಿತೆ ಕುಹಕೆ ಕುಜೆ ಕುಡ್ಡೆ ಕುಲಗೇಡಿ

ಕಪಟೆ ಕಂಟಕಿ ಕಡುದುಷ್ಟೆ ಕಲಹಾರ್ಥಿ ವಿಂಸೆ ಪರಪತಿ ಪಾದರಿ
ವಿಪಲೆ ವಿಹ್ವಲೆ ವಿಷಮೆ ವಿಂಹಿ ವಿಪರೀತೆ ಮಿಗೆ
ತಪಿತೆ ತಸ್ಕರಿ ತವಕಿ ತವೆತಂದ್ರಿ ತಾಮಸಿಯೆ
ನಿಪ ವನಿತೆಯರ್ನಿಜಕೆ ನಿಲಿಸಿ ನಿಶ್ಚಯಿಸಿದೊಡೆ ಬಳಿಕ ಬಳಲಿಕೆ ಬಾರದೆ
ಕಾಮಿನಿಯರುಗಳಾರು ಕೆಲಬರು
ಕಾಮಿಸಲು ಕಾಮಿಸುವರಲ್ಲದೆ
ತಾಮಸದಿನಾವೂರುಕಲು ಪೂಜಿಸಿದ ಪೂಜೆಗಳ
ಪ್ರೇಮದಿಂ ಪೂಜಿಸುವರಲ್ಲದೆ
ಸೀಮೆವಿಡಿದಿಹುದಾಗದೆಂಬುದ
ನಾಮದಾಂಧರು ಬಲ್ಲರೇ ಧೃತರಾಷ್ಟ್ರ ಕೇಳೆಂದ
ತನ್ನ ಸುಖದುಃಖಂಗಳೊಳು ನಿ
ರ್ಭಿನ್ನರಹ ಬಾಂಧವರ ವರ್ಜಿಸಿ
ಗನ್ನ ಗಡಕದೊಳುಂಡು ಜಾರುವ ಗಾವಿಲರ ಕೂಡಿ
ಭಿನ್ನರನು ಪತಿಕರಿಸಿ ಬಹುವೃತ್ತಿ
ಯುನ್ನತಿಕೆಯನು ವಿಂಚಿಸುವೊಡದು
ತನ್ನ ತಾನೇ ಕೊಂದು ಕೊಂಡಪು ಭೂಪ ಕೇಳೆಂದಾ

(ಮುಂದೆ ಸಾಗುವದು)

---

## ಪೋಷಕರು

ಗಂ ರೂಪಾಯಿ ಕೊಟ್ಟವರು

(೧) ಶ್ರೀ. ಷ. ಬ್ರ. ಹಸುಗೋಡು ಬೃಹನ್ಮಠಾಧೀಶ ಶ್ರೀರುದ್ರಮುನಿ ಶಿವಾಚಾರ್ಯರವರು

(೨) ,, ಬಾಲತಪಸ್ವಿ ಹೋಟಗಿ ಬೃಹನ್ಮಠಾಧೀಶ ಶ್ರೀಚನ್ನವೀರ ಶಿವಾಚಾರ್ಯರು

(೩) ,, ಭೀಷ್ಮ ಬ್ರಹ್ಮಚಾರಿ ಬೆಂಗಳೂರ ಮಹಾಂತಿನ ಮಠಾಧೀಶ ಶ್ರೀ ಗಂಗಾಧರ ಶಿವಾಚಾರ್ಯ...

# ಧರ್ಮರಾಜ್ಯ

ಸಂಪುಟ ೧ ಬಹುಧಾನ್ಯ ಸಂವತ್ಸರ ಫಾಲ್ಗುಣ ಸಂಚಿಕೆ ೫

ಕೃತದೊಳಾ ತ್ರೇತೆಯೊಳು ದ್ವಾಪರದೊಳುಂ ಕ್ರಮದೆ ।
ಮತಿವಂತ "ನಲ-ರಾಮ-ಧರ್ಮ" ನೃಪರಿಂ ॥
ಅತಿಯಶವನಾಂತು ಬಾಳಿದ ತೆರದೊಳೀ "ಕೃಷ್ಣ-
ಕ್ಷಿತಿಪಾಲನಿಂ" ಬಾಳು "ಧರ್ಮರಾಜ್ಯ"

[ವರಕವಿ ಶ್ರೀವಾಗೀಶ]



ಕರ್ನಾಟಕ ಸಿಂಹಾಸನಾಧೀಶ್ವರ ಶ್ರೀಕೃಷ್ಣರಾಜೇಂದ್ರರು

ಸಂಪಾದಕರು:
...ಪ್ಪ ಮಠದ

ಪತ್ರ ಸಂಪಾದಕರು:
ಕವಿಭೂಷಣ ಹೊಮ್ಮರಡಿ ಮಲ್ಲಣ್ಣಗೌಡರು

# ವಿಷಯ ಸೂಚಿಕೆ



---

## ಸೂಚನೆ

ನಮ್ಮ ಪತ್ರಿಕೆ ಕಾಲಕ್ಕೆ ಸರಿಯಾಗಿ ತಲುಪದಿದ್ದರೆ ಆಕೂಡಲೆ ನಮಗೆ ಬರೆಯಬೇಕು. ಅಂದರೆ ತಕ್ಕ ವ್ಯವಸ್ಥೆ ಮಾಡುವೆವು. ಹಾಗೆ ಮಾಡದೆ ೨-೩ ತಿಂಗಳು ಬಿಟ್ಟು ನಮ್ಮನ್ನು ಆಕ್ಷೇಪಿಸಿದರೆ ನಾವೇನು ಮಾಡುವದಕ್ಕಾಗುತ್ತದೆ? ಆದುದರಿಂದ ಪತ್ರಿಕೆ ಕಾಲಕ್ಕೆ ಸರಿಯಾಗಿ ತಲುಪದಿದ್ದರೆ ಅದೇ ತಿಂಗಳಲ್ಲಿ ನಮಗೆ ಬರೆಯಬೇಕಾಗಿ ಸೂಚಿಸುತ್ತೇವೆ.

ಲೇಖಕರು ಲೇಖನಗಳನ್ನು ಒಂದೇ ಮಗ್ಗಲಿಗೆ ಸ್ವಚ್ಛವಾಗಿ ಬರೆದು ಪ್ರತಿ ತಿಂಗಳ ೧೦ನೇ ತಾರೀಖಿನೊಳಗೆ ನಮಗೆ ಮುಟ್ಟುವಂತೆ ಕಳುಹಿಸಿದರೆ ಅದೇ ತಿಂಗಳ ಸಂಚಿಕೆಯಲ್ಲಿ ಪ್ರಕಟಿಸುವೆವು.

ಸಂಪಾದಕ ಧರ್ಮರಾಜ್ಯ
ಟೆಂಗಿನಕಾಯಿ ಜಿನ್ನಿಂಗ ಫ್ಯಾಕ್ಟರಿ
ಧಾರವಾಡ

---

# ಧರ್ಮರಾಜ್ಯ

ಮುಡೇಸೂರ " ವೀರಶೈವ ಧರ್ಮಾಲಯ " ದಿಂದ

೦ ಹೊರಡುವ ಮಾಸಪತ್ರಿಕೆ ೦



ಸಂಪುಟ ೧ ಫಾಲ್ಗುಣ ಬಹುಧಾನ್ಯ ಸಂವತ್ಸರ ಸಂಚಿಕೆ ೫

## ಇಷ್ಟಲಿಂಗ

—••೧••—

ಶ್ರೀ. ಹೆಚ್. ಎಂ. ಶಿವಾನಂದಯ್ಯ

"ಆ, ಆ, ಆ, ಆ, "

ಈರಮ್ಮ—'ಜೇ ಲಾಲಿ | ಲಾಲಿಮ್ಮ ಲಾಲಿ | ಉಯ್ಯಾಲೀ | ಜೇ'

ಲಿಂಗಮ್ಮ— ಏನೆ, ಯಾಕೆ ಪಿಳ್ಳೆ ಬಾಳ ಅಳತಿದ್ದಂಗೈತೆ.

ಈರಮ್ಮ— ಏನುಮಾಡಬೇಕು ಲಿಂಗಮ್ಮ, ಎತ್ತಿಗೊಂಡೋಗಬ್ಯಾಡ ಅಂದ್ರನ್ನ ಎತ್ತಿಗೆಂಡ್ಲು.

ಲಿಂಗಮ್ಮ— ಯಾರೆ ಆಕೆ?

ಈರಮ್ಮ—ಇನ್ನ್ಯಾರು ಆ ಗೊಡ್ಡಯ್ಯನೇಣ್ತಿ ಬಸಮ್ಮ.

ಲಿಂಗಮ್ಮ— ಆಕೆ ಎತ್ತಿಗೆಂಡ್ರೆ ಯಾಕೆ ಅಳೋದು?

ಈರಮ್ಮ—ಅಯ್ಯೋ! ಬಂಜೆರು ಎತ್ತಿಗೆಂಡ್ರೆ ಹುಡುಗರಿಗೆ ಕಣ್ಣು ಕಿಸ್ರಾಗಿ ಬಲು ಅಳ್ತಾವಂತೆಮ್ಮ; ಏನ್ಮಾಡೋದು. ಆವಾಗ್ಲಿದ್ದ ಬಲು ಅಳತೈತೆ ಪಿಳ್ಳೆ.

ಲಿಂಗಮ್ಮ— ಅಂಗಾದ್ರೆ, ಓಗಿ ತಿಪ್ಪನ್ನು ನನ್ನ ಕರಕಂಡು ಬರಬೇಕಿತ್ತು.

ಈರಮ್ಮ— ಯಾರು ಕೊಟ್ರು ತಿಪ್ಪಮ್ಮನ್ನೇನು?

ಈರಮ್ಮ— ಅಲ್ಲೆ, ಐನೇರು ತಿಪ್ಪಮ್ಮನ್ನ. ಬಜಾರದಾಗೆ ಹುಡುಗರಿಗೆ ಏನನ್ನ ಆದ್ರೆ ಕರಕೊಂಡು ಬರೋದಿಲ್ಲ, ಆಕೇನ.

ಈರಮ್ಮ— ಔದಮ್ಮ ಕರಕಂಡನ್ನ ಬರ್ತೀನಿ.

ಲಿಂಗಮ್ಮನು ಬಸಮ್ಮನ ಮನೆಗೆ ಬರುವಳು.

ಲಿಂಗಮ್ಮ— ಏನ್ಮಾಡತಿಯಮ್ಮ ಬಸಮ್ಮ, ಅಡಿಗೆ ಆಯ್ತು?

ಬಸಮ್ಮ— ಆಯಿತು ಬಾಕ್ಕ, ಕುತ್ತಗ. ಎಲೆಡ್ಕೆ ಕೊಡ್ಲ?

ಲಿಂಗಮ್ಮ— ಒಲ್ಲೆ ತಂಗಿ ಐತೆ; ತಟೂಗು ಕಡ್ಡೀಪುಡಿ, ಕಾಚು ಕೊಡು.

ಬಸಮ್ಮ— ತಗಳ್ಳಮ್ಮ ಚಿಲ್ಲಾದೈತೆ. ಏನು ಬಾಳದೂರ ಬಂದಿಯಲ್ಲಮ್ಮ?

ಲಿಂಗಮ್ಮ— ಏನಿಲ್ಲಮ್ಮ, ಮನ್ಯಾಗ್ನಾತ ಊರಾಗಿದ್ದಿಲ್ಲ. ಅದಕೆ ಈರಮ್ಮಂತಾಗೆ ಹೋಗಿದ್ದೆ; ಅಲ್ತಂಗಿ, ಆಕೆ ಮಗಳ್ನ ಯಾಕೆ ಎತ್ತಿಗೆಂತಿಯಮ್ಮ?

ಬಸಮ್ಮ— ಈಗೇನಮ್ಮ?

ಲಿಂಗಮ್ಮ— ನೀನೇನೊ ಎತ್ತಿಗೆಂಡಿದ್ದೆಂತೆ. ಆಗಿಲಿದ್ದ ಆ ಪಿಳ್ಳೆ ಒಂದೆಸವ ಅಳತೈತಂತೆ. ಬಂಜೇರು ಎತ್ತಿಗೆಂಡ್ರೆ ಹುಡುಗರಿಗೆ ಕಣ್ಣು ಕಿಸ್ರಾಗ್ತೈತಂತೆ.

ಬಸಮ್ಮ— ಯಾರಂದ್ರಮ್ಮ?

ಲಿಂಗಮ್ಮ— ಇನ್ಯಾರು ಆಕೆ ಪತಿವರ್ತೆ ಈರಮ್ಮ!

ಬಸಮ್ಮ— ಹೋಗಲಿ ಬಿಡಮ್ಮ, ಒಬ್ರ ಮಕ್ಕಳ್ನ ಎತ್ತಿಗೆಂಬೋದು ನಮ್ಮದೆ ಸುಮಾರು. ನನ್ನೊಟ್ಟೆಮ್ಯಾಲೆ ದೇವ್ರು ಬಂಡೆ ಹಾಕಿ ಬಿಟ್ಟಾನೆ! ನಮ್ಗೆ ಮಕ್ಕಳಿದ್ರೆ ನಾವ್ಯಾಕೆ ಹಿಂಗ ಅನಿಸಿಗೆಂತಿದ್ವಿ. ನನ್ನ ಕರ್ಮ ಅಕ್ಕ! ಯಾರಂಬೋದೇನೈತಿ.

ಲಿಂಗಮ್ಮ— ಬರ್ತಿನಮ್ಮ, ನಮ್ಮಾತ ಬಂದಿದ್ದಾನು. ಈತ ಬಂದಾಗ್ಗೆ ಮನ್ಯಾಗಿಲ್ದಿದ್ರೆ ನೋಡ್ತಂಗಿ ಬಲು ಸಿಟ್ಟು. ಎಲ್ಲೆಲ್ಲಿಗೆ ಹೋಗ್ಬಾರ್ದಂತೆ.

ಬಸಮ್ಮ— ಆಗ್ಲಿ ಹೋಗಮ್ಮ.

ಬಸಮ್ಮನ ಶಿರಸ್ಸಿನ ಮೇಲೆ ವಜ್ರಾಘಾತವಾಯಿತು. ಹೃದಯಕ್ಕೆ ಸುರುಗಿಯು ನಟ್ಟಂತಾಯಿತು. ವಿಶ್ವವೆಲ್ಲವು ಗಾಢಾಂಧಕಾರವಾಗಿ ಗೋಚರಿಸಿತು. ಮಾನಿನಿಯರಿಗೆ ಅವಮಾನವೆಂಬುದೊಂದು ಮರಣಕ್ಕಿಂತಲೂ ಕಠಿನವು. ಅಡಿಗೆ ಮಾಡುವದನ್ನು ಬಿಟ್ಟಳು. ಮನೆಯೊಳಗಾರೂ ಇದ್ದಿಲ್ಲ. ಭೋರೆಂದು ಅತ್ತಳು.

ಏನು ಮಾಡಿದರೂ ಸಮಾಧಾನವಾಗದು. ನೇಣು ಹಾಕಿಕೊಳ್ಳಲುದ್ಯುಕ್ತಳಾ ದಳು. ಆತ್ಮಹತ್ಯವು ಮಹಾಪಾತಕವೆಂದು ತೋಚಿದೊಡನೆ ಸುಮ್ಮನಾದಳು. ಉನ್ಮತ್ತಳಾಗಿ ಹಾಸುಗೆಯ ಮೇಲೆ ಒರಗಿದಳು. ಹಾಗೆ ನಿಶ್ಚೇಷ್ಟಿತಳಾದಳು.

ರೋಗಿಗಳ ದರ್ಶನಕ್ಕೆ ಹೋಗಿದ್ದ ಪತಿದೇವರ ಸವಾರಿಯೂ ಬಂತು.

ಬಸವಾರ್ಯ– ಉಷ್ ಅಪ! ಏನೆ ಆಗ್ಲೆ ಹೊತ್ತಾಯಿತೇನು? ಇಷ್ಟೊತ್ತಿಗೆ ಹೊಟ್ಟೆ ಹೊಡಿತೀಯೆ. ಏಳು. ಬಡಾನ. ಊಟ ಮಾಡಿ ಕೀರ್ತನ ಕೇಳಾಕೆ ಹೋಗೋಣ.

ಬಸಮ್ಮ– ನಿಮ್ಮ ಕೀರ್ತನೆಗಿಷ್ಟು ಬೆಂಕಿ ಹಚ್ಚರಿ. ಯಾರಿಗೆ ಬೇಕಾಗೈತೆ ಕೀರ್ತನ. ನನಿಗೇನಾದ್ರು ಬಡಾನ ಸಾಯುಂತ ವಿಷ ಇದ್ರೆ ಕೊಡ್ರಿ. ನಾನು ಸಾಯ್ತೀನಿ. (ಎಂದು ಬಿಕ್ಕಿ ಬಿಕ್ಕಿ ಅಳುವಳು.)

ಬಸವಾರ್ಯ– ಆ! ಹಾ! ಏನಾಗೈತೆ? ಏರೇನನ್ನ ಅಂದ್ರು? ನಿನಗೇನು ಕಮ್ಮಿ ಮಾಡೀನಿ ಹೇಳು?

ಬಸಮ್ಮ– ಹೇಳೋದಿನ್ನೇನು ಬಂಜೆ! ಬಂಜೆ! ಅಂತ ಕಂಡೋರು ಕೂಡ ಅನಿಸಿಗೆಂಬೊ ಹಣೆಬರ ಆಗೈತೆ.

ಬಸವಾರ್ಯ– (ದುಃಖಾರ್ತನಾಗಿ) ಪ್ರಿಯೆ! ಶಾಂತಳಾಗು! ನಮ್ಮ ದುರದೃಷ್ಟ!! ಏನು ಕೋಣಕಂಡು ಬರೋದ, ಸಾವಿರ ರೂಪಾಯಿ ಹೋದ್ರೂ ಚಿಂತಿಲ್ಲಂತ ತರಾಕೆ?

ಈರಮ್ಮ– ಏನೋ ಅದೊಂದು ನನಗ್ಗೊತ್ತಿಲ್ಲ. ದಿನ ಬೆಳಗಿದ್ರೂ ಈ ರೀತಿ ಕಂಡೋರು ಬಾಯಾಗೆ ಕರಗೋದು ನನ್ನಿಂದಾಗೊದಿಲ್ಲ. ಇಗ ನಾನು ಮಾತ್ರ ಕೆರೆ, ಬಾವೆ ನೋಡ್ಕೊಂಬೋದು ನಿಶ್ಚಯ.

ಬಸವಾರ್ಯ– ಅಯ್ಯೋ! ನನ್ನ ರನ್ನೆ, ಹಾಗೆ ಮಾಡಬೇಡ. ಸ್ವಲ್ಪ ಶಾಂತಳಾಗು. ಏನ್ಮಾಡೋದು ನನಿಗೆ ತಿಳದಂಗೆ ನಾಲ್ಕಾರು ಲೋದ್ರ ಬಾಟ್ಲ ಕೊಟ್ಟೆ. ಇಪ್ಪತ್ತೊಂದು ವಾರ ಅರಗಿನ ಮಲೆಮ್ಮಗೆ ನಡಕೊಂಡ್ವಿ. ನನ್ನೂರ ಸ್ವಾಮಿಗೂ ಮುಡುಪು ಕಟ್ಟಿದಿವಿ, ಒಂದೂ ದೇವ್ರ ಮನಸಿಗೆ ಬರಲಿಲ್ಲ. ಬೆಳಕರೀಲಿ ದೊಡ್ಡಾಸ್ಪತ್ರಿಗೆ ಹೋಗಿ ಇಬ್ರು ಪ್ರಕೃತಿ ಪರೀಕ್ಷೆನ್ನ ಮಾಡ್ಸೋಣ. ಏಳು ಹೀಗೆ ಕೂತರೆ ನಮ್ಮ ಚಿಂತೆ ಹೆಚ್ಚಾಗುತ್ತೆ. ಕೀರ್ತನಾದರೂ ಕೇಳಿದರೆ ಮನಸಿಗಿಷ್ಟು ಶಾಂತಿಯಾದರೂ ಸಿಗಬಹುದು.

ಕೀರ್ತನ ಶಾಸ್ತ್ರಿಗಳು ಮಾರ್ಕಂಡೇಯನ ಕತೆಯನ್ನು ಹೇಳಲು ಪ್ರಾರಂಭಿಸಿದ್ದರೆ. ಶಿವಕಥಾಶ್ರವಣಕ್ಕಾಗಿ ಜನರು ಕಿಕ್ಕಿರಿದಿದ್ದಾರೆ ಬಸವಲಿಂಗಾರ್ಯರು ಪತ್ನಿಸಹಿತ ಬಂದಿದ್ದಾರೆ.

ಕೀರ್ತನಕಾರರು- ಅಮರಲೋಕಕ್ಕೆ ದಯಮಾಡಿಸಿದ ಯಾವ ಮೃಕಂಡು ಮುನಿಯನ್ನು ಕುರಿತು ದೇವೇಂದ್ರನು. 'ಏ ಮುನಿಪುಂಗವಾ! ಸಂತತಿ ಹೀನರಿಗೆ ಸ್ವರ್ಗದಲ್ಲಿ ಸ್ಥಳವಿಲ್ಲ. ಆದುದರಿಂದ ನೀನು ಹಿಂದಕ್ಕೆ ತೆರಳಬೇಕು. ಜಯ ಜೈ ನಮಃ ಪಾರ್ವತೀಪತಿ ಹರಹರ ಮಹದೇವ.' ನೆರೆದ ಜನರೆಲ್ಲರೂ ಬಸವ ಲಿಂಗಾರ್ಯ, ಬಸಮ್ಮನ ಕಡೆಗೆ ಎವೆಯಿಕ್ಕದೆ ನೋಡುವರು! ಪಕಪಕ ನಗುವರು. ಬಸಮ್ಮನ ಹೃದಯಕ್ಕೆ ನೂರು ಚೇಳು ಕಡಿದಷ್ಟು ನೋವಾಯಿತು. ಅಸಹನೀಯ ಯಾತನೆಯನ್ನು ತಾಳಲಾರದೆ ಅರ್ಧದಲ್ಲಿಯೆ ಸಿಡುಗುಟ್ಟುತ್ತ ಮನೆಗೆ ಬಂದಳು. ಶಿಷ್ಟಾಚಾರವನ್ನರಿತ ಬಸವಲಿಂಗಾರ್ಯನು ಕತೆ ಮುಗಿಯುವವರೆವಿಗೂ ತದೇಕಚಿತ್ತನಾಗಿ ಕೂತನು.

ಬಸಮ್ಮನು ಮನೆಗೆ ಹೋಗಿ ದೇವರ ಮುಂದೆ ತುಪ್ಪದ ದೀವಿಗೆಗಳನ್ನು ಹಚ್ಚಿ, ಅಶ್ರುಧಾರಾಸಕ್ತಳಾಗಿ

ಬಸಮ್ಮ- ಏ ದೇವಾ! ನನಗೇಕೆ ಸಾವು ಬಾರದು. ಈ ನಿಂದೆಯನ್ನು ಸಹಿಸಲಾರೆ. ನೀನೇಕೆ ನಿರ್ದಯನಾದೆ. ಅಯ್ಯೋ ಮನೆಗೆಲಸವನ್ನು ಮಾಡಿ ಬೇಸತ್ತರೂ ಮಗುವಳುವುದನ್ನು ನೋಡಿ ತೊಟ್ಟಿಲಲ್ಲಿದ್ದ ಮಗುವನ್ನೆತ್ತಿ ಮುದ್ದಿಟ್ಟು ಮೊಲೆಯುಣಿಸುತ್ತಿರುವಲ್ಲಿ ಒಂದು ಮೊಲೆಯನ್ನು ಬಾಯಲ್ಲಿಟ್ಟು ಇನ್ನೊಂದು ಕುಚದ ತುದಿಯನ್ನು ಕೈಯಿಂದ ಹದಮಾಡುತ್ತ ನಗುವ ನಂದನನನ್ನೆಂದಿಗೆ ಕಾಣುವೆನೊ. ಪರಮಾತ್ಮ ದಯಪಾಲಿಸು.

ಬಸವಲಿಂಗಾರ್ಯನು ಕೀರ್ತನ ಮುಗಿದ ತರುವಾಯ ಮನೆಗೆ ಬರುವನು

ಬಸವಲಿಂಗ- ಏ ಜಗನ್ಮಯನೆ! ನಿನ್ನ ಲೀಲೆಯು ಅಗಾಧವಾದುದು. ಅಹುದು. ನಾವು ಇದುವರೆವಿಗೂ ಅಗಣಿತ ಅಪರಾಧಗಳನ್ನು ಮಾಡಿದ್ದೇವೆ. ದುಡ್ಡುಗಳಿಸುವ ದುರಾಸೆಗೆ ದಾಸರಾಗಿ ಮನೆಗೆ ಬಂದ ರೋಗಿಗಳನ್ನು ಚುಚ್ಚಿ ಅವರ ಪಾಪವೆಂಬ ರಕ್ತವನ್ನು ಶರೀರವೆಂಬ ಯಂತ್ರಕ್ಕೆ ಉಣಿಸಿದೆನು. ನಿಷ್ಕಪಟಗಳಾದ ಜನರು ನನ್ನಲ್ಲಿ ವಿಶ್ವಾಸವಿಟ್ಟು ನಾನು ಕೇಳಿದಷ್ಟು ಹಣವನ್ನು ಸುರುವಿ ಚಿಕಿತ್ಸೆ ಪಡೆದರು. ಅನೇಕ ಅನಾಥ ರೋಗಿಗಳು ವಾಸಿಯಾದ ಮೇಲೆ ಕೊಡುತ್ತೇವೆ. ಔಷಧಕೊಡಿರೆಂದು ದೈನ್ಯದಿಂದ ಬೇಡಿಕೊಂಡರೂ ನಿರ್ಘೃಣನಾದ ನಾನು ಸ್ವಲ್ಪವಾದರೂ ದಯೆ ತೋರಿಸದೆ ಕೊಂದುಬಿಟ್ಟೆನು. ಮತ್ತೂ ಯಾಚಕರ ಗಾಳಿಯೂ ನಮ್ಮ ಮನೆಗೆ ಸುಳಿದಾಡದಂತೆ ಮಾಡಿರುತ್ತೇವೆ. ಇಷ್ಟೇ ಅಲ್ಲದೆ ಪಿಂಡ ಖರ್ಜುರವು ನಮ್ಮಲ್ಲಿದ್ದು ಹುಣಿಸೆ ಹಣ್ಣಿಗೆ ಆಶಿಸಪಡುವಂತೆ ಇಷ್ಟಾ

ರ್ಥವನ್ನು ಕೊಡುವ ನಮ್ಮ ಇಷ್ಟಲಿಂಗವನ್ನು ಬಿಟ್ಟು ವೈದಿಕ ಮತದಲ್ಲಿ ಹುಟ್ಟಿ ಮಾರಿಯಮ್ಮ, ಮಾರೆಮ್ಮ ಮುಂತಾದ ದೇವತೆಗಳಿಗೆ ಶರಣುಹೋದೆವು. ಇದು ಶುದ್ಧ ಅವಿವೇಕವು.

ಪ್ರಿಯೆ! ನೀನು ಚಿಂತಿಸಬೇಡ. ಈ ದಿನದಿಂದ ಶುದ್ಧಭಾವದಿಂದ ದೀನಾಂಧ ಬಧಿರ ಕುಬ್ಜರನ್ನು ದಾನಧರ್ಮದಿಂದ ತಣಿಸುತ್ತಲೂ ಭಕ್ತಿಯಿಂದ ಇಷ್ಟಲಿಂಗ ವನ್ನು ಅರ್ಚಿಸುತ್ತಲೂ, ಗುರುಜನರನ್ನು ಪೂಜಿಸುತ್ತ; ಜಗದೀಶನ ಸ್ವರೂಪಿಗಳಾದ ಜಂಗಮರನ್ನು ಸೇವಿಸುತ್ತಲೂ ಇರು.

ನಾನು ಇಂದಿನಿಂದಲೂ ನನ್ನ ಔಷಧಾಲಯಕ್ಕೆ 'ದೀನಧರ್ಮ ಚಿಕಿತ್ಸಾಲಯ' ವೆಂದು ಹೆಸರಿಟ್ಟು ಬಂದ ರೋಗಿಗಳಿಗೆ ಉಚಿತವಾಗಿ ಚಿಕಿತ್ಸೆ ಮಾಡುತ್ತೇನೆ. ನಡೆ, ಇನ್ನು ಮಲಗುವ.

ಪತಿ-ಪತ್ನಿಯರಿಬ್ಬರೂ ಇದೇ ರೀತಿ ನಡೆದರು. ಕೆಲವು ದಿವಸಗಳಲ್ಲಿ ಬಸ ಮ್ಮನು ಅಂತರ್ವತಿಯಾದಳು. ಇದೀಗ ಅವರ ಪುಣ್ಯಕ್ಕೆ ಎಣೆಯಿಲ್ಲ. ಬಸಮ್ಮನು ನಿಜವಾಗಿಯೂ ಇಷ್ಟಲಿಂಗನು ಇಷ್ಟಾರ್ಥವನ್ನೇ ಕೊಟ್ಟನಲ್ಲ ಎಂದು ಹಿಗ್ಗಿದಳು.

---

# ಸಿದ್ಧಾರ್ಥ ನಾನಲ್ಲ

೧

ಯಶೋಧರೆ–

ಮನಸೇಕೆ ಕೊರಗುವದೊ ತಾಳ್ಮೆ ಇಲ್ಲದಲೆ ನನ್ನವನು ಬರುತಿಹನು ಜಡ ದೇಹ ಅವನಲ್ಲ

ಮಾನನಿಧಿಯವನು ಜಗದ ಜೀವರೊಳು ಇನಿತು ಅವಸರವೇಕೆ ಮನವೆ ಸೈರಿಸಲೆ

ಅಂದು ನನ್ನಂ ಮರಿಸಿ ಪೋಗಿರ್ದ ಪತಿದೇವ ಇಂದು ತಾ ಬರುತಿಹನು ಅದೇಂ ನಿನ್ನ ಭಾಗ್ಯವೊ

ಕುಂದಿಹನೋ ಕಳೆಗುಂದಿಹನೊ ಪೇಳೆನಿತು ಕಷ್ಟಮಂ ಪೊಂದಿ ಬರುತಿಹನೊ
ಸುಕೃತವೈ ಏನಿದೋಡೇಂ
ಕಾನನದ ಜೀವನವದೆಂತು ಸಹಿಸಿದನೊ ಮುನಿಯಾಗಿ ತಪದೊಳೆಂತು ಬೆಂದಿಹನೊ
ದೀನ ಜನರಾ ಕರೆಗೆ ದನಿಗೊಡಲು ಬಂದಿಹನೋ ಜ್ಞಾನಪ್ರಕಾಶಮಂ ಶಾಕ್ಯರಿಗೆ
ತಂದಿಹನೋ

( ಬುದ್ಧನು ಬರುವಂತೆ ಭಾಸವಾಗುವದು. )

ಬರುತಿಹುದು ಬರುತಿಹುದು ಜ್ಞಾನದೈಸಿರಿಯು ಹೊರಸೂಸುತಿದೆ ತೇಜ
ಭಾನುಮಂಡಲದಂತೆ
ಸೆರೆಹಿಡಿಯುತಿಹುದಾ ನೋಟ ಕಣ್ಮನಗಳನ್ನು ಬರುತಿಹುದು ಬರುತಿಹುದು
ಶಾಕ್ಯರೈಸಿರಿಯು

ಬುದ್ಧ- (ತನ್ನೊಳಗೆ)
ಇಷ್ಟೊಂದು ವ್ಯತ್ಯಾಸ ಇದೇಕೆ ಜಗದೀಶ ಸೃಷ್ಟಿಸಿದ ಜೀವರೊಳು ಹಿರಿದು
ಕಿರಿದೇಕೆ
ಕಷ್ಟಕೊಬ್ಬನ ಮಾಡಿ ಸುಖಕೊಬ್ಬನಂ ಸೃಜಿಸಿದಿಯಾ ಐಸಿರಿಯ ನಿಲಯ-
ವಿದು ನೋಡಲ್ಲಿ ಕಾಣುವದ
ದಾರಿದ್ರದೇವತೆಯ ನಿವಾಸಮಂ ನೋಡು ಕಾರುಣ್ಯ ಪುಟ್ಟದೇ ಎಳೆಮಕ್ಕಳಂ
ನೋಡು
ಹೋರಾಟ ಸಾಗಿಹುದು ಹೊಟ್ಟೆಯೊಡನಲ್ಲಿ ಚಂದ್ರಧರ ಇಷ್ಟೊಂದು
ವ್ಯತ್ಯಾಸ ಈ ನಿನ್ನ ರಾಜ್ಯದೊಳು
(ಪ್ರಕಾಶ) ಕುಶಲವೇ ದೇವಿ ಅದೇನೋ ಹೇಳುವಂತಿದೆ ಶಶಿವದನೆ ಪೇಳ್
ಭಯವಿಲ್ಲ.

ಯಶೋಧರೆ-
ಕರುಣಿಸುವಿಯಾ ದೇವ ಕಾರಣವನರುಹಿ ಪರಿವಾರವನು ತೊರೆದು ಕಾಳ
ರಾತ್ರಿಯೊಳಂದು
ಪರಿಸಿ ಪೋದುದದೇಕೆ ಒಡನಾಡಿಯುಳ ಬಿಟ್ಟು ಕೊರತೆಯನು ಕಂಡೆಯಾ
ನನ್ನ ನಲ್ಮೆಯೊಳು
(ಬುದ್ಧನು ಮೌನವಾಗಿರುತ್ತಾನೆ)
ಇದರರ್ಥವೇನು ಈ ಮೌನವೇಕೆ ಬೆದರಿಕೆಯು ಬಲವಾಯ್ತು ತಪ್ಪಾಯ್ತೆ
ಅಂದು ನಿನ್ನಂ ಕೂಡಿರ್ದ ಒಲವಿನಿಂ ಕೇಳಿಹೆನು ಇಂದದಕೆ ಸ್ಥಳವಿಲ್ಲದೊಡೆ
ಕ್ಷಮಿಸು ದೇವ

ಬುದ್ಧ–

ಇಲ್ಲಿ ತಪ್ಪಿದಿ ದೇವಿ ಬುದ್ಧ ತಾನರಿಯ ವೈಷಮ್ಯವನು ಎಲ್ಲಿರ್ದೊಡೇಂ
ಸರ್ವರನು ಸಮಬುದ್ಧಿಯಿಂ ಕಾಣ್ಬನವನು
ಒಲವಿನಿಂ ನಿನ್ನ ಕೂಡಿರ್ದ ಸುದಿನಗಳಂ ನೆನೆದು ಬೆಲೆಯುಂಟು ನಿನ್ನ
ಪ್ರೇಮಕೆಂದು ಬುದ್ಧ ತಾ ಬಂದಿಹನು

ಯಶೋಧರೆ–

ಬುದ್ಧ ಅವರಾರು? ಸಿದ್ಧಾರ್ಥನಲ್ಲವೇ ಇಲ್ಲಿಗೈತಂದಿಹನು ಸಿದ್ಧಾರ್ಥ ಎನಿತು
ಚಲುವಾದುದೀ ಪೆಸರು
ಸಿದ್ಧಾರ್ಥನೇ ಇಂದು ಬುದ್ಧನಾಗಿಹನೇ ಸಂದೇಹವೆನಗಾಯ್ತು ಸಮಸ್ಯೆಯಂ
ತಿಳುಹುವಿಯಾ ಓ ನನ್ನ ಸಿದ್ಧಾರ್ಥ

ಬುದ್ಧ–

ಸಿದ್ಧಾರ್ಥನಾಗಿರ್ದ ರಾಜಕುವರ ಶಾಕ್ಯಜನರೊಡೆಯ ಬುದ್ಧ ತಾನಾಗಿಹನು
ಸನ್ಯಾಸಿ ಸರ್ವರಡಿಯಾಳು
ಸಿದ್ಧಾರ್ಥಗಿರುತಿಹುದು ಸಿಂಹಾಸನ, ಆದನೊದ್ದು ಬುದ್ಧ ಬಂದಿಹನು
ಧರ್ಮಸಿಂಹಾಸನವ ಸ್ಥಾಪಿಸಲು
ಸಿದ್ಧಾರ್ಥನಾ ಹೃದಯ ಬಹು ಹೇಡಿ ಹೃದಯ ಕಲ್ಮಷದ ಹೃದಯ ಸುಧೀರ
ಹೃದಯವಿದು ಸಾವಿನ ಸಮಸ್ಯೆಯಂ ಬಿಡಿಸಿಹುದು
ಸಿದ್ಧಾರ್ಥ ಬಹುಸ್ವಾರ್ಥಿ ಸುಖಭೋಗಿ ಅನ್ಯರೈಶ್ವರ್ಯದಿಂದಂ ಬುದ್ಧಗಿಲ್ಲವು
ಸ್ವಾರ್ಥ ಭಿಕ್ಷಾನ್ನದಿಂ ಜೀವಿಪನು ಪರಾರ್ಥಕಾಗಿ
ಸಿದ್ಧಾರ್ಥಗಿದ್ದಿತು ಸಂಸಾರ ಯಶೋಧರೆಯು ಅವನಸತಿ

ಯಶೋಧರೆ– ಆ ಯಶೋಧರೆ ನಾನು ಸಿದ್ಧಾರ್ಥನ ಧರ್ಮಪತ್ನಿ

ಬುದ್ಧ– ಇರಬಹುದು ಯಶೋಧರೆಯು ನೀನಾದರೂ ಸಿದ್ಧಾರ್ಥನಾನಲ್ಲ.

ಯಶೋಧರೆ– (ಕಣ್ಣೀರಿಡುತ್ತ) ಘಾತವಾಯಿತು. ವಂಚಿತಳು ನಾನಾದೆ.

ಬುದ್ಧ– ಕಣ್ಣೊಳಗೆ ನೀರೇಕೆ? ಮನನೊಂದಿತೆ?

ಯಶೋಧರೆ– ಉಳಿದುದಿನ್ನೇನು?

ಬುದ್ಧ– ಸಂಕುಚಿತಳಾಗದಿರು ಹಾಳಾದುದೇನಿಲ್ಲಿ? ಶಕ್ತಿಯುತನಾಗಿಹನು ಆ ನಿನ್ನ
ಸಿದ್ಧಾರ್ಥ ಮುಕ್ತಿಪಥಮಂ ಸೃಜಿಸಿಹನು ಬುದ್ಧ ತಾನಾಗಿ ಸೋಂಕದಿರಲಾ
ಸಂಶಯವು ಬುದ್ಧ ಪುಸಿಯಾಡುವನೆ?

ಯಶೋಧರೆ–ಈ ಬುದ್ಧ ನನ್ನವನೇ ಅಂದಿನಾ ಸಿದ್ಧಾರ್ಥನಿವನೇ (ನಮಸ್ಕರಿಸುವಳು)

ಬುದ್ಧ– ಸಂಸಾರ ಶೃಂಖಲೆಯ ಕಡಿದೊಗೆದು ಸಿದ್ಧಾರ್ಥ ಹಿಂಸೆಯಂ ನಿಲ್ಲಿಸಲು
ಘೋರತಪವಾಚರಿಸಿ ಹುಸಿಯಾದವುಗಳೀ ಯಜ್ಞಯಾಗಾದಿಗಳೆಂದು ಹೊಸ
ತನವ ಹುಡುಕಿಹನು ಬುದ್ಧ ಸಿದ್ಧಾರ್ಥನಲ್ಲಾ

ಯಶೋಧರೆ– ಎಂತಿದ್ದರೂ ನೀನು ನನ್ನವನು.

ಬುದ್ಧ– ಮತ್ತೆ ಆ ಸ್ವಾರ್ಥ ಬುದ್ಧನಾಗಿಹನಿಂದು ವಿಶ್ವಸಂಸಾರಿ ಹೆತ್ತವರ ಹೊತ್ತ
ವರ ಭುಜಪಾಂತು ನಿಂತವರ ಪತಿತರಾದವರ ಇವರೆಲ್ಲರಂ ಭೇದವಿಲ್ಲ
ನಿನ್ನಂತೆ ಕಾಣುವನು ಬುದ್ಧ ನಿರ್ವಾಣನವನಲ್ಲ.
ಮರೆಸಿ ಪೋದಾಸಿದ್ಧಾರ್ಥ ಬುದ್ಧನಾಗಿಹನು ಜಡಲಾಗಿಹುದು ಅಂತಃಕರು
ಕಾರಣವ ಕೇಳಿದೆಯಲ್ತೆ ಮಾಯೆಯೆಂಬುದು ಕೇಳ್ ಹಿರಿದಾದ ವೈರಿಯದು
ಬೇರೂರಿ ಸಂಶಯವು ಬಿಡಲಾರಳೆಂದಂತೆ ಮಾಡಿದುದಾಯ್ತು
ಬುದ್ಧನಾಗಿಹನು ವಿಶ್ವಸಂಸಾರಿ ಯಶವಾಂತು ಬಾಳ್ವದಕೆ
ಸಿದ್ಧಾರ್ಥನಾಗಿರ್ದ ರಾಹುಲನ ತಂದೆ ಅವನುದಯವೇ
ಸಿದ್ಧಾರ್ಥನ ರಾಹುವಂ ಕತ್ತರಿಸಿ ಶಾಕ್ಯಮುನಿ ಬುದ್ಧನಂ ಮಾಡಿಹುದು

ಯಶೋಧರೆ– ಬದಲಾಗಲಾರದೇ ಯಶೋಧರೆಯ ಹೃದಯ.
ಬುದ್ಧನನುಸರಿಪುದಕೆ ಬದಲಾಗಲಾರದೆ

ಬುದ್ಧ– ಬುದ್ಧ ಕೇಳುವ ಭಿಕ್ಷೆಯಿದುವೇ ಪ್ರೇಮದಿಂ ಬೇಡುವನು
ನೀಡುವಂತಿದ್ದರೆ ನೀಡು ದೇವಿ ಸ್ವಾರ್ಥವನು ಹೊರದೂಡಿ
ಭೇದವಿಲ್ಲವು ಕೇಳು ಬೌದ್ಧ ಮತದಲ್ಲಿ ಸ್ತ್ರೀ ಪುರುಷರೆಂಬ
ಆದಂ ಬೆಳೆಸು ಬುದ್ಧನನುಜ್ಞತೆಯಂತೆ ಇದೇ ಹಿರಿದಾದ ಭಿಕ್ಷೆ

ಯಶೋಧರೆ– ಸಲ್ಲಿಸುವೆನೀ ಭಿಕ್ಷೆಯಂ

ಬುದ್ಧ– ನೆನಪಿರಲಿ ನೆನಪಿರಲಿ ಸಿದ್ಧಾರ್ಥನಾನಲ್ಲ ಸನ್ಯಾಸಿ ಜೀವನವೇ ಮುಖ್ಯವಿ
ಮತದ

-ಪಾಟೀಲ ಲಿಂಗನಗೌಡ

---

# ಮಾತೆ ನೀನೆಲ್ಲಿ?

—:೦:—

೧

ಎಲ್ಲಿರುವಿ ನೀನೆಂದು ಎಲ್ಲೆಡೆಯು ಅರಸಿದೆನು ।
ಎಲ್ಲಿರ್ದೊಡೇಂ ಮಾತೆ ಸುಖವುಂಟೆ ನಿನಗಲ್ಲಿ ॥
ಬಲು ಸಾಹಸಿಯು ನೀನು ಸಾಹಸದ ತಿರುಳನ್ನು ।
ಹೇಳುವುದ ನೀ ಮರೆತು ಹೊರಟುಹೋದುದದೇಕೆ ?

೨

ಅಂದೆಂದೊ ನಾನರಿಯೆ ನಾನಾಗ ಚಿಕ್ಕವನು ।
ಬಂದು ನಿನ್ನಯ ತಂಗಿ ಕರೆದೊಯ್ದಳಂತೆ ॥
ಕಂದನೆಲ್ಲಿಹನೆಂದು ತಂದೆ ಕೇಳಿದನಂತೆ ।
ನಡೆದುದೆಲ್ಲವನು ನೀ ಪೇಳ್ದೆಯಂತೆ ॥

೩

ತಡೆಯಬಹುದಾಗಿದ್ದಿತೌ – ದಿನಗಳನ್ನು ।
ಒಂದೆರಡು ದಿನದಲ್ಲಿ ಮರಳಿ ಬರುವವನಿದ್ದೆ ॥
ತಡೆಯಲಾರದೆ ವ್ಯಥೆಯ ಆಗಲಿ ನೀನಿರದೆ ।
ಬಂದೆ ನೀನಂದು ಇಂದೆಂತು ತಡೆದಿರುವಿ ॥

೪

ರೋಗವಾವುದೋ ನಾನರಿಯೆನಮ್ಮಾ ।
ಬೇಗಬರುತಿಹನೆಂದು ಭಾಷೆಯನು ಕೊಟ್ಟೆ ॥
ಆಗಬಹುದೆಂದು ಜೋಳ್ಕೊಟ್ಟಿದ್ದೇ ತಪ್ಪಾಯ್ತು ।
ವೇಗದಿಂದಲಿ ಪೋದಿ ತಿರುಗಿಬಾರದ ತೆರದಿ ॥

೫

ಹೇಳಿದುದು ನೆನಪುಂಟು ನಿನ್ನೊಡನೆ ಇದ್ದಾಗ ।
[illegible] ॥

ಒಲುಮುದ್ದು ಪ್ರೇಮ ಕುವರನು ಎಂದಿ ಎನ್ನವ್ವ ||
ಒಲವಿನಾಗರವೆಂದಿ ಹರುಷದಿಂದ ||

೭

ಕಷ್ಟಗಳ ಕರೆಕರೆದು ಸ್ಥಳವನ್ನು ನೀ ಕೊಟ್ಟೆ ।
ಪುಷ್ಟರಾಗಲಿ ನಿನ್ನ ಮಕ್ಕಳೆಂದು ||
ದುಷ್ಟರವರೆಂಬುದನು ನೀನರಿಯದೆ ಹೋದಿ ।
ಎಷ್ಟಾದರೂ ತಾಯ ಕರುಳೆ ಕರುಳು ||

೮

ಪ್ರೇಮದಿಂ ಬೇಡಿದೆಯೆ ಪರಮೇಶನನ್ನು
ಒಮ್ಮನದಿ ಬಾಳಲೆನ್ನಯ ತನುಜರೆಂದು
ಕುಮತಿಗಳು ಅವರೀಗ ಮರ್ಯಾದೆ ಮೀರಿದರೆ
ದುಮುಕದಿಹರೇ ಮುಂದೆ ನರಕಕೂಪದೊಳು ||

೯

ಆಗಲಾಗಲಿ ಮಾತೆ ಜೀವನವು ಜಡವಾಗಿ
ಮುಗಿಸಿದೆಯೆ ನೀ ನಿನ್ನ ಯಾತ್ರೆಯನ್ನು
ಬೇಗದಿಂ ಮರುಳಿ ಬಾ ಸಲ್ಲಿಸುವೆ ಸೇವೆಯನು
ತೆಗೆದುಕೋ ಆದರದಿ ಮುಳಿಸನಳಿದು

೧೦

ನಾಕದಲಿ ನೀನಿಂದು ನಗುತಿರುವಿಯಾ ಏನು
ಬೇಕಿಲ್ಲ ಬೇಕಿಲ್ಲ ಆ ಲೋಕವು
ಬೇಕಾದುದಲ್ಲಿಲ್ಲ ಉಳಿದುದೆಲ್ಲವು ಉಂಟು
ನಾಕು ಬಾ ಇಲ್ಲಿ ಸಾಕುವ ಕಂದರುಂಟು ||

— ಕುಮಾರಿ ಸರ್ವಮಂಗಳಾ

# ಸಮಾಜ ಪುರುಷರು

ಬರೆದವರು: ವರಕವಿ ಶ್ರೀ ವಾಗೀಶ

ನುಡಿವರಯ್ಯೋ! ಜನರು।
ಬಿಡರು ಮಾತ್ಸರ್ಯವಂ।
ಕೆಡುವರನ್ಯರನು ಕೆಡಿಸುತ್ತಲಿಹರು॥
ಹಡೆದ ತಾಯಿಯ ಹರೆಯ।
ಕಡು ಮುದದೆ ಬಣ್ಣಿಸುವ।
ಕಡುಗಬ್ಬಿಗರು ಪಥವ ತಿಳಿಯುತಿಹರು ॥೧॥

ಶಾಂತಿ ಶಾಂತಿಯು ಎಂದು।
ಸಂತಸದೆ ಪೇಳುವರು।
ಅಂತಕನ ಭಾವವನು ಬಿಡದಿರುವರು॥
ಎಂತು ಜನ ಒಲಿಯುವದು?
ಸಂತೋಷ ಪೊಂದುವದು?
ಸಂತೆಯೊಳು ವ್ಯಾಪಾರಿಯಂತಿರುವರು. ॥೨॥

ಒಳಗೊಂದ ಬಿಡದಪ್ಪಿ।
ಬಳಿಮಂದಿಗೊಂದೊರೆದು।
ಗೆಳೆಯರಂದದಿ ನಟನೆಯಾಡುತಿಹರು॥
ಹೊಳೆಯ ದಂಡೆಯ ಹಸುರ।
ನೋಳ್ಪೆಂಬ ಹಸುಗರವ।
ನಳೆವ ಮೊಸಳೆಯ ತೆರದಿ ಹವಣಿಸುವರು ॥೩॥

ಹೆಣ್ಣಿನಾಶೆಗೆ ಕುಲವ।
ಮಣ್ಣುಗೂಡಿಸುತಿಹರು।
ಕಣ್ಣಿದ್ದು ಕುದಿ ಸುಣ್ಣವನೆ ತಿಂಬರೇ?
ಬಣ್ಣನೆಗೆ ಬಲಿಬಿದ್ದು।
ಅಣ್ಣಗಳು ಕುಳಿತಿಹರು।
ಕಣ್ಣಿರು ಕರೆಯೊ ಮ್ಮ ಸುರಿಸಿಹರೇ? ॥೪॥

ಬೇಕಂತೆ ನಾರಿಯೊಳು|
ಏಕಪತಿ ಸೇವೆಯದು।
ಏಕಪತ್ನಿ ವ್ರತವು ಪತಿಗಿಲ್ಲವೊ ?
ಬೇಕು ಬೇಕಾದಂತೆ।
ಕೇಕೆ ಹೊಡೆದಾಡುತಿರೆ।
ಕಾಕುಮಾರ್ಗವು ತಾ ವಿವೇಕಿಯಹುದೇ ? ||೫||

---

—:ಶ್ರೀವೀರೇಶ ಪ್ರಸನ್ನ:—

# ಕನ್ನಡಿಗರಲ್ಲಿ ಪ್ರಾರ್ಥನೆ

[ ಕವಿಭೂಷಣ ಹೊನ್ನುರಡಿ ಮಲ್ಲನಗೌಡರ ]

(ಶರಷಟ್ಪದಿ)

ಕಣ್ಣನು ತೆರೆಯಿರಿ|
ಅಣ್ಣರೆ ನೋಡಿರಿ।
ಚಿನ್ನದ ಭಾರತ ಮಾತೆಯನು ॥
ಕಣ್ಣನು ಬಿಡುವಳು |
ಚಿನ್ನದ ದೇವಿಯು |
ಅನ್ಯರ ಬಲೆಯೊಳು ಬಳಲುವಳು ||೧||

ಕನ್ನಡ ಚಿನ್ನರೆ।
ಬನ್ನಿರಿ ಬೇಗನೆ |
ಹೊನ್ನಿನ ಭಾರತ ಪೊರೆವುದಕೆ ||
ಚೊಣ್ಣದ ಕಪಿಗಳ
ಹಣ್ಣನು ಮಾಡುವ |
ಕಣ್ಣನು ತೆರೆಯಿ:ರಿ ಗಡಗಡನೆ ||೨||

ಕನ್ನಡ ನಾಡಿನ|
ಚನ್ನಿಗರೆಲ್ಲರು।
ಅನ್ಯರ ಮಾಲನು ತರಿಸಿದಿರಿ ! ||
ಅನ್ಯರ ಅರಿವೆಗೆ|
ಅಣ್ಣರೆ ಮೋಹಿಸಿ|
ಅನ್ನವು ಸಿಗದಲೆ ಬಳಲಿದಿರಿ ! ||೩||

ಭರಭರ ರಾಟಿಯು |
ಗರಗರ ತಿರುಗಿರಿ |
ಪರತರ ಖಾದಿಯ ಮಾಡುತಲಿ ||
ಹರನನು ನೆನೆಯುತ|
ಧರಿಸಿರಿ ಖಾದಿಯ।
ಭರತ ಭೂಮಿಯಲಿ ಮೆರೆಯುತಲಿ ||೪||

ಏಳಿರಿ ಬಂಟರೆ |
ಕಾಳಗಕೀಗಲೆ|
ಬೀಳುತ ಏಳುತ ಕುಣಿಯುತಲಿ ||
ಖೂಳರ ತಂಡವ |
ಸೀಳಿರಿ ಜವದಿಂ|
ಬೀಳುತ ಗಾಂಧಿಯ ಚರಣದಲಿ ||೫||

---

# ★ ನಿರಾಶನಾಗಬೇಡ ★

ಒಲವಿನ ಗೆಳೆಯು,

ನಿನ್ನ ಪತ್ರ ಈ ದಿನ ಮುಟ್ಟಿತು. ಮನಸ್ಸಿಗೆ ಸಂತೋಷವಾಯಿತು. ಕಾಲೇಜದ ಹೊಸ ಗೆಳೆಯರ ಪರಿಚಯವು ನನ್ನನ್ನು ಮರೆಯುವಂತೆ ಮಾಡಿರಬಹುದೆಂಬ ಬೆದರಿಕೆಯು ಬಂದಿತ್ತು. ಅದೀಗ ದೂರಾಯ್ತು. ಅಂತೂ ನೀನು ನನ್ನನ್ನು ಮರೆತಿಲ್ಲ. ಸಂತೋಷವಾಯಿತೆಂದು ಬರೆದಿದ್ದೇನೆ. ನಿನ್ನಿಂದ ಓಲೆ ಬಂದುದಕ್ಕೆ ಆನಂದವೇ ಹೊರತು ಆ ಓಲೆಯ ವಿಷಯವನ್ನೋದಿದೊಡನೆಯೇ ನನಗೆ ಅತ್ಯಂತ ಖೇದವಾಯಿತು. ನಿನ್ನಿಂದ... ಅಲ್ಲಲ್ಲ... ನನ್ನ ಇದುವರೆಗಿನ ಜೀವಿತದಲ್ಲಿಯೂ ಈ ತರದ ಓಲೆಯನ್ನು ನೋಡಿರಲಿಲ್ಲ. ಆಯಿತು ಇದರಲ್ಲಿ ಏನೋ ತಥ್ಯವಿರಬೇಕು. ಅದನ್ನು ನಾನು ನನಗೆ ತೋರಿದ ರೀತಿಯಲ್ಲಿ ಬಿಡಿಸಿದ್ದೇನೆ.

ನಿರಾಶೆಯು ಮಾನವನನ್ನು ಆವರಿಸಲೇಬಾರದು. ಅದು ಆವರಿಸಿತೆಂದರೆ ತೀರಿತು. ಅವನ ಜೀವನವೇ ಅವನಿಗೆ ಜಡವೆನಿಸುತ್ತದೆ. ಅದು ಆವರಿಸದಂತೆ ನೋಡಿಕೊಳ್ಳುವದು ಈಗಿನ ತರುಣರ ಕರ್ತವ್ಯ. ಮನುಷ್ಯನು ಯಾವಾಗಲೂ ಆಶಾವಾದಿಯಾಗಿರಬೇಕೆಂದೇ ನನ್ನ ಅಭಿಪ್ರಾಯ. ಪ್ರಪಂಚದ ಸರ್ವವ್ಯಾಪಾರಗಳನ್ನು ಸಾಗಿಸುವ ಆ ದೈವಿ ಶಕ್ತಿಗೆ ನಿನ್ನ ಕೊರತೆ ಕುಂದುಗಳು ತಿಳಿದಿಲ್ಲವೆಂದು ಭಾವಿಸಬೇಡ. ಏನಾದರೊಂದು ಎಡರು ನಿನ್ನ ದಾರಿಯಲ್ಲಿದ್ದರೆ ಅದು ನಿನ್ನ ತತ್ವ ಪರೀಕ್ಷೆಗಾಗಿ ಎಂಬ ಭಾವನೆಯಿಂದ ನಮ್ಮ ಗುರಿಯಿಂದ ನಮ್ಮ ಕರ್ತವ್ಯವನ್ನು ನಾವು ಮುಂದರಿಸಬೇಕಲ್ಲದೆ ದೈವವನ್ನು ಶಪಿಸುತ್ತಾ ಹಿಡಿದುದನ್ನು ಅಷ್ಟಕ್ಕೇ ಬಿಡುವದು ತನ್ನಲ್ಲಿಯೇ ತನಗೆ ಆತ್ಮವಿಶ್ವಾಸವಿಲ್ಲೆಂದು ಹೇಳುವದರ ಹೆಗ್ಗುರುತು. "ಮರಳಿ ಯತ್ನವ ಮಾಡು ಮರಳಿ ಯತ್ನವ ಮಾಡು, ಕೈಗೂಡದಿರಲು" ಎಂದು ಹೇಳುವ ಆರ್ಯೋಕ್ತಿಯು ನಮ್ಮನ್ನಿಂದು ಹುರಿದುಂಬಿಸಿ ಕಾರ್ಯರಂಗಕೆ ಕರೆಯುವದಲ್ಲವೇ? ಆಗಲಿ, ನಿರಾಶೆಯು ಕವಿಯಲಿಕ್ಕೆ ಕಾರಣವೇನಾಯಿತೋ ತಿಳಿಯಲಿಲ್ಲ. ಅದನ್ನು ನಾನೀರೀತಿಯಾಗಿ ಗ್ರಹಿಸಿದ್ದೇನೆ.

(೧) ಸಹಾಯದ ಅಭಾವ

(೨) ಮೇಲಿಂದ ಮೇಲೆ ಸಂಭವಿಸಿದ ಪರಾಭವಗಳು

(೩) ಹೊಸತನವನ್ನು ಹುಡುಕಲಾರದ ಅಂಧ ಶ್ರದ್ಧೆ.

(೪) ನಮ್ಮವರ ಸಂಸ್ಕೃತಿಯು ಮೂಲೆಗುಂಪಾದದ್ದು.

ಕೊನೆಯದಾಗಿ ಮತ್ತೊಂದನ್ನು ನಾನು ದೂರಬೇಕಾಗಿದ್ದರೆ ಇಂದಿನ ಪ್ರಭುತ್ವ ಹಾಗೂ ಶಿಕ್ಷಣ ಮಮತೆಯ ಮಿತ್ರಾ, ನಿನ್ನಯೋಗ್ಯತೆ ಹಾಗೂ ಸಾಹಸಗಳ ಅರಿವು ಪೂರ್ಣವಾಗಿ ನನಗಾಗಿದೆ. ಸಮಾಜದ ಸೇವೆಯೇ ನಿನ್ನ ಗುರಿ ಯೆಂದು ಅನೇಕಸಾರೆ ನನ್ನೊಡನೆ ಪ್ರಸ್ತಾಪಿಸಿದ್ದಿ. ಸೇವೆಯನ್ನು ತಗೆಂ ಕೊಳ್ಳಲಿಕ್ಕೂ ಭಾಗ್ಯಬೇಕು ಇಂದಿನ ಸಮಾಜವಿನ್ನೂ ನಿದ್ರೆಯಲ್ಲಿದೆ ಆ ನಿದ್ರೆ ಯಾವಾಗ್ಗೆ ಮುಗಿಯುವದೋ ನಿನ್ನ ಜೀವಿತದಲ್ಲಿಯೇ ಸಮಾಜ ಪುರುಷನ ನಿದ್ರೆಯು ಹರಿಯಲೆಂದು ನನ್ನದೊಂದು ಬೇಡಿಕೆ ನಿನ್ನಂತಹ ತ್ಯಾಗಿ ವಿದ್ಯಾವಂತ ತರುಣನು ಮತ್ತೊಂದು ದೇಶದಲ್ಲಿ ಜನಿಸಿದ್ದರೆ ಅವನಿಂದು ಏನಾಗುತ್ತಿದ್ದನೋ! ಇದು ಕಲ್ಪ ನೆಗೂ ಕೂಡಾ ನಿಲುಕದ ಚಿತ್ರ. ಮುಂದಿನ ಮೇತಿಂಗಳ ಸುಮಾರಿಗೆ ನಿನ್ನ ಕಾಲೇಜ ವ್ಯಾಸಂಗವನ್ನು ಮುಗಿಸಿಕೊಂಡು ಹೆಚ್ಚಿನ ಜ್ಞಾನಾರ್ಜನೆಗಾಗಿ ಪರದೇಶಕ್ಕೆ ಹೊರಡುವ ತಯಾರಿಯಲ್ಲಿರುವೆನೆಂದು ಬರೆದಿರುವಿ ಈ ಭಾವನೆಯೇ ನಿನ್ನನ್ನು ಆವರಿಸಿದ ನಿರಾಶೆಗೆ ಮೂಲವಾಗಿರಬೇಕು. ನೀನಿಂದು ನಿಸ್ಸಹಾಯಕನೇನೋ ನಿಜ. ಇಡೀ ದೇಶವೇ ದಾರಿದ್ರ್ಯದಲ್ಲಿ ಬಳಲಿ ಬೆಂಡಾಗಿರುವಾಗ ನಿನ್ನದೆಷ್ಟರದು! ಅದ್ಯಾರೋ ಒಬ್ಬ ಮಹಾನುಭಾವರು ಹೇಳಿದ್ದಾರೆ. " ಜಗವೆಲ್ಲ ನಗುತಿರಲಿ ಜಗದಳುವು, ಎನಗಿರಲಿ " ಎಷ್ಟು ಉದಾತ್ತವಾದ ಭಾವನೆಯಿದು! ನಮ್ಮ ಭಾರತದ ದಾರಿದ್ರ್ಯವು ದೂರಾಗುವಂತೆ ಭಾರತವೆಲ್ಲವೂ ಮೊದಲಿನಂತೆ ಸಿರಿಮಯವಾಗುವಂತೆ ನಾವೆಲ್ಲರೂ ಇಂದು ಪ್ರಯತ್ನಿಸೋಣ. ಆ ಮೇಲೆ ನನ್ನ ನಿನ್ನಂಥಹ ವ್ಯಕ್ತಿಗಳ ದಾರಿದ್ರ್ಯದ ಪ್ರಶ್ನೆಯೇ ಉಳಿಯಲಾರದು. ಜಗತ್ತನ್ನೇ ಪೊರೆಯುವಂಥ ಶಕ್ತಿಯುಳ್ಳ ಭಾರತಿಗೆ ತನ್ನ ಮಕ್ಕಳ ಅರಿವಾಗದಿರುವದೇ?

ಒಬ್ಬ ಮಹಾನುಭವಿಗಳು " ಈ ಜಗತ್ತಿನಲ್ಲಿ ನಾವು ಬೇಡಿದ್ದೊಂದು ಬಿಟ್ಟು ಉಳಿದುದೆಲ್ಲವೂ ದೊರೆಯುತ್ತದೆ ಅದೇ ಈ ಸಂಸಾರ " ಎಂದು ಹೇಳಿದ್ದಾರೆ. ಅದು ನಿಜ. ಅದರಂತೆ ನೀನೆಷ್ಟೋ ಕೆಲಸಗಳನ್ನು ಪ್ರಾರಂಭಿಸಿರುವಿ ಅದರ ಭವಿತವ್ಯ ವನ್ನು ಕುರಿತು ಚಿಂತಿಸಿರುವಿ ಆ ಚಿಂತೆ ನಿನಗೇಕೆ? ಕಾರ್ಯವನ್ನು ಮಾಡುವ ವರು ನಾವು ಆದರೆ ಫಲವನ್ನು ಕೊಡುವದು ಆ ಜಗದೀಶನ ಕೈಯಲ್ಲಿ ಆಗು ಹೋಗುವಳು ಅವನನ್ನೇ ಆಶ್ರಯಿಸಿವೆ " ಸೋಲು ಗೆಲುವದು ಪುಣ್ಯವಶ " ಎಂದು ಹೇಳುವದು ಇದನ್ನೇ ಸಮರ್ಥಿಸುವದಲ್ಲವೇ ಅಂತೆಯೇ ಭಗವದ್ಗೀತೆಯಲ್ಲಿ ಶ್ರೀಕೃಷ್ಣನು ಏನಾದರೂ ನಿನ್ನ ಕಾರ್ಯಗಳನ್ನೂ ಧ್ಯೇಯಗಳನ್ನೂ ತಡೆಯಬೇಡ. ಆಗಬೇಕಾದುದು ನಾವರಿಯದಂತೆ ಹೇಗೋ ಆಗಿ ಹೋಗುತ್ತದೆ. ಜನತೆಯನ್ನು

ದೂರಿರುವಿ - ಅವರ ನಿನ್ನ ಹಂಬಲಕ್ಕೆ ಬೆಂಬಲ ಕೊಡರೆಂದು. ಈ ವಿಷಯ ವಾಗಿ ನಾನೊಂದು ಮಾತನ್ನು ಹೇಳಬಯಸುತ್ತೇನೆ. ಜನತೆಯು ಅದೆಷ್ಟು ಜನರಿಗೆ ಬೆಂಬಲ ಕೊಡಬೇಕೋ ನನಗೆ ತಿಳಿಯದಾಗಿದೆ. ಕೃತಕತೆಯು ಬೆಳೆದಿದೆ. ವಂಚಕತ್ವವು ವ್ಯಾಪಿಸಿದೆ. ತಾವಿತ್ತುದಕ್ಕಾಗಿ ಜನತೆಗೆ ಯಾವ ಪ್ರತಿಫಲವು ದೊರೆಯದೆ ಅವರು ಕೊಡುತ್ತಲೇ ಇದ್ದಾರೆ ತಾವು ಕೊಟ್ಟುದು ಸರಿಯಾದ ರೀತಿಯಲ್ಲಿ ವಿನಿಯೋಗಿಸಲ್ಪಡಬೇಕಷ್ಟೇ. ಯಾಕಂದರೆ.

ನರಜನ್ಮವತ್ಯಾಧಿಕವದರೊಳು
ಗುರುಹಿರಿಯರಿವರೆಂದು ದಾನ
ಕ್ಕರುಹರಿವರಲ್ಲೆಂಘು ತಿಳಿಯದೆ ಮೂಢ ಮಾರ್ಗದಲಿ
ಕರೆದಪಾತ್ರಂಗಿತ್ತು ಪಾತ್ರನ
ಪರಿಹರಿಸಲೀ ಎರಡರಿಂ ಸರಿ
ಹರಣಪೈದುವವಾರ್ಜಿಸಿದ . ಧನವರಸ ಕೇಳೆಂದ- || (ವಿದುರನೀತಿ)

ಆ ಕಾರಣ ಮೊದಲು ಜನತೆಯಲ್ಲಿ ವಿಶ್ವಾಸ ಬೆಳಸಿಕೋ ನಿನ್ನ ದುಡ್ಡು ಅಪವ್ಯಯವಾಗಲಾರದೆಂಬ ಬಗ್ಗೆ ಅವರಿಗೆ ಮನವರಿಕೆಯಾಗಿರಲಿ. ಆ ಮೇಲೆ ಮುಂದಿನ ದಾರಿಯು ಸುಗಮವಾಗಿದೆ.

ನಿನ್ನ ಮುಂದಿನ ವಿದ್ಯಾರ್ಜನೆಯ ವಿಷಯವಾಗಿ ನನ್ನ ಸಲಹೆ ಕೇಳಿರುವಿಯಷ್ಟೇ. ಸಂತೋಷ. ನನಗೆ ಸರಿತೋರಿದಂತೆ ವಿವೇಕವನ್ನು ವಂಚಿಸದೆ ನನ್ನ ಅಭಿಪ್ರಾಯವನ್ನು ನಿನ್ನೆದುರಿನಲ್ಲಿಡುತ್ತೇನೆ. ಅದನ್ನು ನೀನು ಒಪ್ಪಲೇಬೇಕೆಂಬ ಕಡ್ಡಾಯವಿಲ್ಲೆಂಬುದನ್ನು ನೆನಪಿನಲ್ಲಿಡು. "ವಿದ್ಯೆಯು ಮಿತಿಮೀರಿ ಬೆಳೆದುಹೋಗಿದೆ" ಎಂದು ಈಗಿನ ಹಿರಿಯರು ಹೇಳುತ್ತಿರುವದನ್ನು ನೀನು ಕೇಳಿರಬಹುದು. ನಿಜವಾಗಿಯೂ ನನಗೆ ಆಶ್ಚರ್ಯವಾಗಿದೆ, ಅವರ ಅಭಿಪ್ರಾಯವನ್ನು ಕೇಳಿ. ಪರದೇಶದ ವಿದ್ಯಾವಂತರೊಡನೆ ನಮ್ಮ ವಿದ್ಯಾವಂತರ ಸಂಖ್ಯೆಯನ್ನು ಹೋಲಿಸಿ ನೋಡಿದರೆ ಇದರ ನಿಜಾಂಶವು ಬಯಲಿಗೆ ಬರುತ್ತಿದೆ. ಈಗ ಕೊಡುತ್ತಿರುವ ಶಿಕ್ಷಣಕ್ಕೆ ವಿದ್ಯೆಯೆಂದು ಕರೆಯಲು ನನ್ನ ಮನಸ್ಸೊಪ್ಪದು. ನಾನು ಕರೆಯಬಹುದಾದರೆ ಇದೊಂದು ಫ್ಯಾಕ್ಟರಿ. ಪರಕೀಯರು ನಮ್ಮನ್ನು ತಮ್ಮ ಅಂಕಿತದಲ್ಲಿಡಲು ತರುಣರ ಸತ್ವವನ್ನು ಹೀರಲು ಈ ಫ್ಯಾಕ್ಟರಿಯಲ್ಲಿ ಕಳಿಸುತ್ತಾರೆ. ನಾನೊಂದು ಎಚ್ಚರಿಕೆಯನು ಕೊಡಬೇಕೆಂದರೆ ನಿಜವಾಗಿಯೂ ಇಂಥ ಫ್ಯಾಕ್ಟರಿಯಲ್ಲಿ ನೀನು ಹೋಗಲೇಬೇಡ. ಹೊಸ ತನವನ್ನು ಹುಡುಕು. ಅಳಿಯುತ್ತಿರುವ ಭಾರತದ ಬೆಳಕನ್ನು ಉಳಿಸಿಕೋ. ತಾಯಿಯ ಕರೆಗೆ ತೀವ್ರವೇ ಉತ್ತರ

ಕೊಡು. ಈ ದಾರಿಯಲ್ಲಿ ಎಡರುಗಳು ಬರಬಹುದು. ಅವನ್ನೆಲ್ಲವನ್ನು ಧೈರ್ಯ ದಿಂದ ಎದುರಿಸು. ಅಂಧಶ್ರದ್ಧೆಯನ್ನು ತೂರು. ಸತ್ಯಸಂಶೋಧನೆಯಲ್ಲಿ ಮುಂದು ವರಿ. ಶಾಲೆ ಕಾಲೇಜುಗಳಲ್ಲಿ ಮಾತ್ರವೇ ಶಿಕ್ಷಣವು ದೊರೆಯುವದೆಂದು ನಿನ್ನ ತಿಳುವಳಿಕೆಯಿದ್ದರೆ ದಯವಿಟ್ಟು ಅದರಿಂದ ದೂರಿರು. ಜಗತ್ತೇ ಒಂದು ಪಾಠ ಶಾಲೆ. ಪ್ರತಿಯೊಬ್ಬ ಮನುಷ್ಯನು ವಿದ್ಯಾರ್ಥಿ ಎಂಬ ಭಾವನೆಯು ಬಲವಾಗಲಿ. ಇದರಿಂದ ನಿನ್ನ ವ್ಯಾಸಂಗಕ್ಕೆ ಅಡಿತಡೆಯನ್ನು ಮಾಡಬಯಸುವೆನೆಂದು ತಿಳಿಯ ಬೇಡ. ಅವಶ್ಯವಾಗಿ ಶಿಕ್ಷಣ ತೆಗೆದುಕೋ. ಅದನ್ನು ನಿನ್ನ ಕಡೆ ದೈನ್ಯದಿಂದ ನೋಡುವ ನಿನ್ನ ಅಜ್ಞ ಜನರಲ್ಲಿ ಪ್ರಚಾರಮಾಡು. ಸ್ವಾರ್ಥಕ್ಕೆ ಎಡೆ ಕೊಡ ಬೇಡ. ಹೊಸತನವನ್ನು ಕಂಡುಹಿಡಿ. ಹೊಸದರಲ್ಲಿ ಆಸಕ್ತಿ ತೋರಿಸು. ಹೊಸ ದನ್ನು ಪ್ರಚಾರ ಮಾಡು. ಹೊಸ ಯುಗವನ್ನು ರಚಿಸು. ಹೊಸ ಬಾಳನ್ನು ಹೂಡು. ಹೊಸ ಭಾರತವನ್ನು ನಿರ್ಮಿಸು.

ಹೆಚ್ಚು ಬರೆಯಲಾರೆ. ಇನ್ನೊಂದು ಮಾತಿದೆ ನಿನ್ನ ವ್ಯಾಸಂಗದೊಡನೆ ನಮ್ಮವರ ಹಿಂದಿನ ಸಂಸ್ಕೃತಿಯನ್ನು ಅಭ್ಯಾಸಿಸು. ಅದನ್ನು ಹೊಸ ದೃಷ್ಟಿ ಯಿಂದ ನೋಡು. ಆರ್ಯಸಂಸ್ಕೃತಿಯ ಅವಮಾನವನ್ನು ಭಾರತೀಯನು ಸಹಿಸಬೇಕೇ? ಈಗಿನ ಕೆಲ ತರುಣರಲ್ಲಿ ಒಕ್ಕಲತನ ಮಾಡುವದು ತಮ್ಮ ಅಂತ ಸ್ತಿಗೆ ಕೀಳೆಂಬ ಭಾವನೆಯು ಬಂದಿದೆ. ಭಾರತದ ಬೆಳಕು ಪರದೇಶದಲ್ಲಿ ಹರ ಡಿದ್ದು ಅವರ ಕೃಷಿಸಂಪತ್ತಿನಿಂದೆಂಬದು ಅವರಿಗೂ ತಿಳಿದೂ ಈ ದಾರಿಯಲ್ಲಿ ನಡೆಯಹತ್ತಿದ್ದಾರೆ. ಒಕ್ಕಲಿಗನಾರು? ಅವನೊಬ್ಬ ಸಂಸ್ಕೃತಿ ಹೀನನಾದ ಕಾಡು ಜೀವಿಯೆಂಬ ಭಾವನೆಯು ಇದೀಗ ನಮ್ಮಲ್ಲಿ ಬಂದಿದೆ. ಅದು ಬಹು ದಿವಸ ನಿಲ್ಲದಂತೆ ನೋಡಿಕೊಳ್ಳುವದು ನಮ್ಮ ಕರ್ತವ್ಯ. ಆಧುನಿಕ ಕವಿಗಳಾದ ಕೆ. ವ್ಹಿ. ಪುಟ್ಟಪ್ಪನವರು ಈ ರೀತಿ ಬರೆಯುತ್ತಾರೆ.

ಯಾರೂ ಅರಿಯದ ನೇಗಿಲ ಯೋಗಿಯೇ ಲೋಕಕೆ ಅನ್ನವನೀಯುವನು. ಹೆಸರನು ಬಯಸದೆ ಅತಿಸುಖಕೆಳಸದೆ ದುಡಿವನು ಗೌರವಕಾಶಿಸದೆ, "ನೇಗಿಲ ಯೋಗಿಯು ನಾನೇ ಮಣ್ಣಿನ ಭೋಗಿಯು ನಾನೇ." ಅಲ್ಲದೆ ಸರ್ವಜ್ಞನು ಕೂಡ "ಕೋಟ ವಿದ್ಯೆಗಳಲ್ಲಿ ಮೇಟಿ ವಿದ್ಯೆಯು ಮೇಲು ರಾಟೆ ಮೇಟಿಗಳಾಟ ನಡೆಯೆ ಜಗದಾಟ ನೋಡೆಂದ" ಎಂದು ಸಾರಿಸಿದ್ದಾನೆ. ಕರ್ತವ್ಯವನ್ನು ಆತ್ಮತೃಪ್ತಿ ಗಾಗಿ ಮಾಡಬೇಕೇ ಹೊರತು ಅದರಲ್ಲಿ ಕೀಳು ಮೇಲುಗಳೆಂಬ ಅಭಿಮಾನಕ್ಕೆ ಖಂಡಿತವಾಗಿಯೂ ಬೀಳಬಾರದು.

ನಮ್ಮತನವೀಗ ನಾಶವಾಗಹತ್ತಿದೆ. ಅದರಲ್ಲಿ ಅನ್ಯರದು ಆಶ್ರಯ ಹೊಂದುತ್ತಿದೆ. ದಿನದಿನಕ್ಕೂ ಬೆಳೆಯುತ್ತಿದೆ. ನಮ್ಮದನ್ನು ನಾವು ಉಳಿಸಿ ಬೆಳಸಿಕೊಳ್ಳಬೇಕಾದರೆ ಅನ್ಯರ ಸಂಸ್ಕಾರದ ಸೆಳವಿಗೆ ನಾವು ಬೀಳಬಾರದು. ನಮಗೊಂದು ಸ್ವತಂತ್ರವಾದ ಪ್ರಭುತ್ವವಿದ್ದರೆ ಏನಾಗುತ್ತಿತ್ತೋ! ಅದೀಗ ಮೂಡಹತ್ತಿದೆ. ಶುಭ ಸೂಚನೆ.

ಗೆಳೆಯಾ, ನೀನು ಕೇಳಿದೆಯೆಂದು ನನ್ನ ಅಭಿಪ್ರಾಯವನ್ನು ಮುಂದಿಟ್ಟೆ. ಇದರಲ್ಲಿ ದೋಷಗಳಿರಬಹುದು. ನಾನು ನಿನ್ನಂತೆಯೇ ಮನುಷ್ಯ. ಮನುಷ್ಯನು ಪರಿಪೂರ್ಣ ಜ್ಞಾನಿಯಲ್ಲದ್ದರಿಂದ ಅವನಿಂದ ತಪ್ಪುಗಳಾಗುವದು ಸ್ವಾಭಾವಿಕವಾಗಿಯೇ ಅದೆ. ಏನಾದರೂ ಒಳಿತಿದ್ದರೆ ಅದನ್ನು ಅನುಸರಿಸು. ನಿನ್ನ ಆರೋಗ್ಯವನ್ನು ಕೆಡಿಸಿಕೊಳ್ಳಬೇಡ. ಜ್ಞಾನಕ್ಕಾಗಿ ಆರೋಗ್ಯವನ್ನು ಆಹುತಿಯಾಗಿ ಕೊಡಬೇಡ. ಎಲ್ಲರನ್ನೂ ತೃಪ್ತಿಗೊಳಿಸುವ ಸಾಹಸಕ್ಕೆ ನಿಜವಾಗಿಯೂ ಬೀಳಬೇಡ. ಮತ್ತೊಮ್ಮೆ ಹೇಳುತ್ತೇನೆ. ಕರ್ತವ್ಯದ ಪಥದಿಂದ ಚ್ಯುತನಾಗಬೇಡ. ಸಾಧಕನಾಗು. ಸರ್ವವನ್ನು ಸಾಧಿಸು. ನೀನು ನಡೆದ ದಾರಿಯು ಮುಂದಿನವರಿಗೆ ಮಾರ್ಗದರ್ಶಕವಾಗಲಿ. ಭಾರತಿಯು ನಿನ್ನಂಥ ಸತ್ಪುತ್ರರನ್ನು ಹೆತ್ತುದಕ್ಕೆ ನನಗೆ ಅಭಿಮಾನವೆನಿಸಿದೆ. ವೇಳೆ ಹೆಚ್ಚಾಗಿದೆ ಕೂಡಿದಾಗ ಮತ್ತೊಮ್ಮೆ ಬರೆಯುತ್ತೇನೆ. ನಿನ್ನ ಕ್ಷೇಮಕ್ಕೆ ತಪ್ಪದೇ ಬರೆಯುತ್ತಿರು.

ಯಾವಾಗಲೂ ನಿನ್ನವನಾದ

ನಿನ್ನೊಲವಿನ

ಗಂಗಾಧರ

---

## ವೀರಶೈವ ರಾಜನಾದ

# ಶಿರಾಳಶೆಟ್ಟಿಯ ರಾಜ್ಯಾರೋಹಣವು

---

ಲೇಖಕ: ರಾಮಯ್ಯಾ ಚನಬಸಯ್ಯಾ ಹಿರೇಮಠ (ಬೀಡಿ)

ಆರ್. ಎಲ್. ಎಸ್. ಪ್ರಾಥಮಿಕ ಶಾಲೆಯ ಹೆ. ಮಾಸ್ತರ, ಧಾರವಾಡ.

ನಮ್ಮ ವೀರಶೈವರ ಇತಿಹಾಸದಲ್ಲಿ ಎಷ್ಟೋ ಅಮೌಲ್ಯ ರತ್ನಗಳು ತೋರಿ ಅಡಗಿರುವವು. ಅವುಗಳ ಇತಿಹಾಸವನ್ನು ನಮ್ಮವರಾಗಲಿ, ಅನ್ಯ ಇತಿಹಾಸ ಶೋಧಕರಾಗಲಿ ಒಟ್ಟುಗೂಡಿಸಿ ಬರೆದಿಡದ್ದು ನಮ್ಮ ದುರ್ದೈವದ ಸಂಗತಿ. ಕರ್ನಾಟಕ ವ ಮಹಾರಾಷ್ಟ್ರ ದೇಶದಲ್ಲಿ ಇತಿಹಾಸ ಮಂಡಲಗಳು ಸ್ಥಾಪನವಾದಂದಿನಿಂದ ಅಲ್ಪ ಸ್ವಲ್ಪ ಇತಿಹಾಸವು ಬೆಳಕಿಗೆ ಬರಹತ್ತಿದೆ. ಇದೊಂದು ಆನಂದದ ಸಂಗತಿಯು. ನಮ್ಮ ಪೂರ್ವಜರು ಯಾರು ಏನೇನು ಪರಾಕ್ರಮ ಮಾಡಿದರು? ರಾಜಕಾರಣದಲ್ಲಿ ಹ್ಯಾಗೆ ಮುಂದುವರೆದರು? ಪ್ರಜೆಗಳ ಸೌಕರ್ಯಕ್ಕಾಗಿ ಏನೇನು ಯೋಜನೆಗಳನ್ನು ಮಾಡಿದ್ದರು? ತಮ್ಮ ದುಡ್ಡನ್ನು ಜನಹಿತದ ಕಾರ್ಯಗಳಲ್ಲಿ ಹೇಗೆ ಸೂರೆಮಾಡಿದರು? ಎಂಬದನ್ನು ಓದಿದ ಕೂಡಲೆ ನಮ್ಮ ಧರ್ಮದ ಬಗ್ಗೆ ಅಭಿಮಾನ ಹುಟ್ಟಿ ಒಂದು ತರದಿಂದ ಅಂತಃಕರಣದಲ್ಲಿ ಸ್ಫೂರ್ತಿ ಉಂಟಾಗುವದೆಂಬದರಲ್ಲಿ ಸಂಶಯವಿಲ್ಲ. ತ್ಯಾಗವೀರ ಶಿರಸಂಗಿಯ ಲಿಂಗರಾಜನ ಕಥೆಯನ್ನು ಕೇಳಿದರೆ ಎಲ್ಲರಿಗೂ ಆಶ್ಚರ್ಯವೂ, ಆನಂದವೂ ಉಂಟಾಗುವದು. ಇದೇ ಮಾದರಿಯ ಒಬ್ಬ ದಾನವೀರ ಶೆಟ್ಟಿಯು ಮಹಾರಾಷ್ಟ್ರದಲ್ಲಿ ಮೂರುವರೆಗಳಿಗೆ ರಾಜ್ಯವಾಳಿ ಮಾಡಿದ ಮಹತ್ಕಾರ್ಯವನ್ನು ವರ್ಣಿಸುವ ಈ ಚಿಕ್ಕ ಲೇಖವನ್ನು ತಮ್ಮೆಲ್ಲರ ಮುಂದಿಡುವೆನು. ಲಕ್ಷಪೂರ್ವಕವಾಗಿ ಓದಬೇಕು.

ಶ್ರೀಧರ ಸ್ವಾಮಿಗಳು ಬರೆದ ಶ್ರೀಯಾಳ ವ ಚಾಂಗುಣಾ ಕಥೆಯು ಇದಲ್ಲ. ವಿಚಾರಮಾಡಿ ನೋಡಲು ಈ ಶ್ರೀಯಾಳನು ಪುರಾಣಪುರುಷನೆಂಬುದು ಸಹಜವೇ ಕಂಡುಬರುವದು ಆದರೆ ನಾವು ಹೇಳುವ ಈ ಶಿರಿಯಾಳಸೆಟ್ಟಿಯು ಈಗಿನ ಕಾಲದಲ್ಲಿ ಐತಿಹಾಸಿಕ ದೊಡ್ಡ ಮನುಷ್ಯನು. ಈ ಶಿರಿಯಾಳ ಸೆಟ್ಟಿಯು ಬಸವೇಶ್ವರನ ತರುವಾಯದವನು. ಬಾಹಮನೀ ಅರಸರ ಕಾಲದಲ್ಲಿ ಪ್ರಸಿದ್ಧಿಗೆ ಬಂದನು.

ಮಹಾರಾಷ್ಟ್ರ ದೇಶವು ಯಾವಾಗಲೂ ದುಷ್ಕಾಳಗ್ರಸ್ತ ಪ್ರದೇಶದಲ್ಲಿ ಎಣಿಸಲ್ಪಡುತ್ತದೆ. ಪ್ರತಿ ಹನ್ನೆರಡು ವರ್ಷದಲ್ಲಿ ಒಮ್ಮೆಯಾದರೂ ಬರವು ಬಿದ್ದೇಬೀಳುವ

ತ್ತದೆ. ಈಗ ಎಲ್ಲ ಕಡೆಗೆ ರೇಲ್ವೆ ಮಾರ್ಗ ವ ಬೋಟುಗಳು ಉಂಟಾದ್ದರಿಂದ ಸುತ್ತುಕಡೆಗೆಲ್ಲ ಕಾಳಿನ ಪೂರೈಕೆಯಾಗುತ್ತದೆ. ಒಂದು ಪ್ರಾಂತದಲ್ಲಿ ಬರಬಿದ್ದರೆ ಬೇರೊಂದು ಪ್ರಾಂತದಿಂದ ಕಾಳುಬರುತ್ತದೆ. ಆದ್ದರಿಂದ ಅದರ ಉಗ್ರ ಸ್ವರೂಪವು ಮೊದಲಿನಂತೆ ಈಗ ಕಂಡುಬರುವದಿಲ್ಲ. ಆದರೆ ಈಗಿನಂತೆ ಪೂರ್ವಕಾಲದಲ್ಲಿ ವಾಹನಗಳ ಸೌಕರ್ಯವಿದ್ದಿಲ್ಲ. ಆಗಿನ ಬರಗಾಲದ ಭಯಂಕರ ಸ್ಥಿತಿಯನ್ನು ವರ್ಣಿಸಿವರೆ ನಿಮಗೆ ಅದು ನಿಜವಾಗಿ ತೋರಲಿಕ್ಕಿಲ್ಲ. ನಮ್ಮ ಶಾಲೆಯ ಇತಿಹಾಸ ವನ್ನು ಓದುತ್ತಿರುವಾಗ ಮಹಾರಾಷ್ಟ್ರದಲ್ಲಿ ದೊಡ್ಡ ಬರಬಿದ್ದಿತೆಂದು ಬರೆದಿರುವರು. ಅದಕ್ಕೆ ದುರ್ಗಾದೇವಿಯ ಬರವೆನ್ನುವರು. ಅದು ಸನ್ ೧೩೯೬ನೇ ಇಸ್ವಿಯಲ್ಲಿ ಸುರುವಾಗಿ ಸತತ ೧೨ ವರುಷ ಒಂದೇ ಸವನೆ ಇತ್ತು. ಅಂದರೆ ೧೪೦೮ರವರೆಗಿತ್ತು. ಈ ಹನ್ನೆಡು ವರುಷದಲ್ಲಿ ಮಳೆಯ ಒಂದಾದರೂ ಹನಿಯು ಉದುರಲಿಲ್ಲ. ಪ್ರಜೆ ಗಳಲ್ಲಿ ಕನಿಷ್ಟ ೩ ಜನರು ನಷ್ಟವಾದರು. ೩ ಜನರು ಪರಧರ್ಮ ಸೇರಿದರು. ಎಲ್ಲ ಗ್ರಾಮಗಳು ಹಾಳಾದವು. ಕೆಲ ಪ್ರಾಂತಗಳು ಬೇಚಿರಾಖ ಆದವು. ಈ ಪ್ರಕಾರ ಬರವು ಎಂದೂ ಬಿದ್ದಿದ್ದಿಲ್ಲ. ಮುಂದೆಯೂ ಬೀಳಲಿಕ್ಕಿಲ್ಲ. ಹೆಣಗಳ ತಲೆಡವಿಗೆಗಳು ಎಲ್ಲ ಕಡೆಯಲ್ಲಿ ಉರುಳಾಡಿದವು. ಜನರು ಪಡಗಳ್ಳಿಯ ಹಣ್ಣಿನ ಮೇಲೆ ಜೀವ ಹಿಡಿದಿದ್ದರು. ಅವು ತೀರಿದ ಮೇಲೆ ಜನರು ಅನ್ನ, ಅನ್ನ, ನೀರು, ನೀರು ಅಂತ ಪ್ರಾಣಬಿಟ್ಟರು. ಕಾಯಿ ಹಣ್ಣುಗಳು ಸಿಗುವದು ದುರ್ಲಭವಾ ಯಿತು. ದನ, ಕರು, ಕುರಿಗಳು ಮೇವಿಲ್ಲದೆ ಪಟಪಟ ಬಿದ್ದು ಸತ್ತುಹೋದವು. ಇದ್ದವುಗಳನ್ನು ಸಾಕುವ ದಿಕ್ಕೇ ಇಲ್ಲದಾಯಿತು. ಈ ಪರಿಸ್ಥಿತಿಯಲ್ಲಿ ಮಹಾತ್ಮ ನಾದ ಶಿರಿಯಾಳ ಶೆಟ್ಟಿಯ ಉದಯವಾಯಿತು. ಆ ಕಾಲದಲ್ಲಿ ಯಾವತ್ತು ಪ್ರಾಂತವು ಸ್ಮಶಾನವತ್ ಕಾಣಹತ್ತಿತು. ಈಗ ನಾವು ಯಾವ ಶೆಟ್ಟಿಯ(ಚಾಜ್ಯಾ)ರೋ ಹಣದ ಉತ್ಸವವನ್ನು ಮಾಡುತ್ತೇವೋ ಅದೇ ಶೆಟ್ಟಿಯೇ ಈ ದುರ್ಗಾದೇವಿಯ ಬರದಲ್ಲಿ ಜೀವದಿಂದುಳಿದವರಿಗೆಲ್ಲ ಜೀವದಾನ ಮಾಡಿದನೆನ್ನಲಿಕ್ಕೆ ಎಳ್ಳಷ್ಟು ಸಂಶಯವಿಲ್ಲ.

ಶ್ರೀ. ದಾತೆಯವರ ಮಧ್ಯಯುಗದ ಇತಿಹಾಸ ಪಾನ ನಂಬರ ೬೭೦ ಇದರಲ್ಲಿಯ ವರ್ಣನ ಭಾ. ವ. ಖಂಡ ೩. ಎ ಗೋಷ್ಠಿ ಪೃಷ್ಠ ೪೬–೪೭ರಲ್ಲಿ ಈ ಪ್ರಕಾರ ವರ್ಣನೆ ಯದೆ. ಶಿರಿಯಾಳಶೆಟ್ಟ ಸನ್ ೧೩೯೬ರ ಸುಮಾರಕ್ಕೆ ಆಗಿಹೋದನು. ಇವನು ಲಿಂಗವಂತ ಬಣಜಿಗನು. ಶಕೆ ೧೩೧೮ ಅಂದರೆ ೧೩೯೬ರಲ್ಲಿ ಬಿದ್ದ ದುರ್ಗಾದೇವಿಯ ಬರದಲ್ಲಿ ಪ್ರಸಿದ್ಧಿಗೆ ಬಂದನು. ಈ ಬರವು ಸತತ ೧೨ ವರ್ಷವಿತ್ತು. ಇವನು ಈ ಕಾಲದಲ್ಲಿ ಸಾವಿರಾರು ಎತ್ತುಗಳನ್ನು ಸಾಕಿ ಗುಜರಾಥ ಮತ್ತು ಮಹಾರಾಷ್ಟ್ರ ದೇಶದಲ್ಲಿ ತಿರುಗಾಡುತ್ತ ಬರಬಿದ್ದ ಪ್ರದೇಶದಲ್ಲಿ ಜನರಿಗೆ ಪುಕ್ಕಟೆಯಾಗಿ ಧಾನ್ಯದ

ಪೂರೈಕೆಯನ್ನು ಮಾಡಿದನು. ಇದರಿಂದ ಬಹುಜನರು ಬದುಕಿದರು. ಈ ಪುಣ್ಯಾತ್ಮನು ಮಾಡಿದ ಮಹತ್ಕಾರ್ಯವು ದಿಗ್ದೇಶಗಳನ್ನು ವ್ಯಾಪಿಸಿತು. ಆಗ ಬೇದರದ ರಾಜನು ಈ ಪುಣ್ಯಪುರುಷನನ್ನು ಕರಿಸಿ "ನಿನಗೆ ಏನು ಬೇಕು ಬೇಡು" ಅನ್ನಲು ಅವನು ತನ್ನ ದಸೆಯಿಂದ ಗ್ರಾಮ, ಸೀಮೆಗಳನ್ನು ಜಹಗೀರಾಗಿ ಬೇಡದೆ ಫಕ್ತ ೩|| ಗಳಿಗೆ ನಿನ್ನ ಸಿಂಹಾಸನವನ್ನು ಏರುವ ಅಧಿಕಾರವನ್ನೂ, ನಿನ್ನ ಮುದ್ರೆಯನ್ನೂ ನನಗೆ ಕೊಡು ಅಂತ ಬೇಡಿಕೊಂಡನು. ಅದನ್ನು ಕೇಳಿ ಬಾದಶಹನಿಗೆ ಆಶ್ಚರ್ಯವಾಯಿತು. ಆದರೂ ವಚನ ಕೊಟ್ಟಂತೆ ತನ್ನ ಗಾದಿಯನ್ನು ಬಿಟ್ಟಿಳಿದು ಸಿರಿಯಾಳ ಶೆಟ್ಟಿಯನ್ನು ಗಾದಿಯ ಮೇಲೆ ಕೂಡ್ರುಹೇಳಿದನು. ಆಗ್ಗೆ ಸಿರಿಯಾಳ ಸೆಟ್ಟಿಯು ಪ್ರಭೋ ಈ ಸಿಂಹಾಸನದ ಮೇಲೆ ಪಾದವಿಡುವಷ್ಟು ಯೋಗ್ಯತೆಯು ನನ್ನದಲ್ಲ, ಅಂತ ವಿನಂತಿ ಮಾಡಿಕೊಂಡನು. ಮತ್ತು ತನ್ನ ಶಿಕ್ಕೆಯುಂಗರವನ್ನು ಅವನ ಸ್ವಾಧೀನಕ್ಕೆ ಕೊಟ್ಟನು. ಅದಕ್ಕೆ ಶಿರಿಯಾಳನು ನಾನು ೩|| ಗಳಿಗೆಯಲ್ಲಿ ಏನೇನು ಮಾಡುತ್ತೇನೆ ಅದಕ್ಕೆ ಮಂಜೂರಿಯನ್ನು ಕೊಡು. ಅನ್ನಲು ಬಾದಶಹನು ಕಬೂಲಾದನು.

ಆಗ ಶಿರಿಯಾಳ ಶೆಟ್ಟಿಯು ಬಾದಶಹನು ಈ ಪೂರ್ವದಲ್ಲಿ ಧರ್ಮ ಸಮ್ಮಂಧಿವ ದೇವಸ್ಥಾನ ಸಮ್ಮಂಧಿ ಯಾವ ಯಾವದನ್ನು ಖಾಲಸಾತ ಮಾಡಿದ್ದನೋ ಅವನ್ನೆಲ್ಲ ಪುನಃ ಕೊಟ್ಟನು. ಮತ್ತು ಹೊಸದಾಗಿ ದೇವಸ್ಥಾನಗಳಿಗೆ ಉತ್ಪನ್ನ ಹಾಕಿಕೊಟ್ಟನು. ೩|| ಗಳಿಗೆಯಾದ ಮೇಲೆ ಶಿಕ್ಕೆಯನ್ನು ಬಾದಶಹನ ಮುಂದೆ ಇಟ್ಟು ಕೈಮುಗಿದು ನಿಂತುಕೊಂಡನು. ಇದರಿಂದ ದೇವಾಲಯಗಳಿಗೆ ಲಕ್ಷಗಟ್ಟಲೆ ಉತ್ಪನ್ನವಾಯಿತು. ಇದೂ ಅಲ್ಲದೆ ಬೇರೆ ಬೇರೆ ಸತ್ಕಾರ್ಯಗಳಿಗೆ ಹೊಸಹೊಸ ದೇಣಿಗೆಗಳನ್ನು ಕೊಟ್ಟನೇ ಹೊರ್ತು ತನಗೆ ಮಾತ್ರ ಒಂದು ಕವಡಿಯಷ್ಟು ಲಾಭವನ್ನು ಮಾಡಿಕೊಳ್ಳಲಿಲ್ಲ. ಇವನ ಈ ನಿರಪೇಕ್ಷ ಬುದ್ಧಿಯನ್ನು ಕಂಡು ಜನರಿಗೂ ಬಾದಶಹನಿಗೂ ಆಶ್ಚರ್ಯವಾಯಿತು. ಆಗ ಬಾದಶಹನು ಅವನು ನನಗೇನೂ ಬೇಡ, ಬೇಡ ಅನ್ನುತ್ತಿರಲು ಜುಲುಮೆಯಿಂದ ಅವನ ಮಗನಿಗೆ ಸರದಾರ ಪದವಿಯನ್ನು ಕೊಟ್ಟನು. ಅವನ ವಂಶದ ನಾಮಶೆಟ್ಟಿಯೆಂಬ ಸರದಾರನಿಗೆ ಮಾಣದೇಶದ ಬಂಡು ಮುರಿಯಲಿಕ್ಕೆ ಕಳುಹಿದನು. (ಮಾಣದೇಶವೆಂದರೆ ಸಾತಾರಾ ಜಿಲ್ಹೆಯ ಪೂರ್ವಭಾಗ) ಅವನ ಸೈನ್ಯವು ವರಕುಟಿ ಎಂಬ ಗ್ರಾಮದ ಬಳಿಗೆ ತಳವೂರಿ ನಿಂತಿತು. ಅಂದಿನಿಂದ ಆ ಊರಿಗೆ "ನಾಮಶೆಟ್ಟವರಕುಟಿ" ಎಂಬ ಹೆಸರುಂಟಾಯಿತು. ಆಊರು ಮ್ಹಸವಡದಿಂದ ದಕ್ಷಿಣಕ್ಕೆ ನಾಲ್ಕು ಹರದಾರಿಯ ಮೇಲೆ ಅದೆ. ಇದರ ಮೇಲಿಂದ ಸ್ವಲ್ಪ ಕಾಲ ಪರ್ಯಂತ ಸಿಕ್ಕ ರಾಜ್ಯಾಧಿಕಾರಕ್ಕೆ ಶಿರಿಯಾಳಶೆಟ್ಟಿಯ ರಾಜ್ಯ ಅನ್ನುತ್ತಾರೆ. ಈ ಮಾತು ಶ್ರಾವಣ ಶುದ್ಧ ಷಷ್ಠಿಗೆ

ಉಂಟಾಯಿತು. ಆದ್ದರಿಂದ ಆ ದಿವಸವೇ ಈ ಉತ್ಸವ ಮಾಡುವರು. ಆದರೆ ಈ ಚರಿತ್ರೆಯು ಜನರಿಗೆ ಗೊತ್ತಿರುವದಿಲ್ಲ. ಇದು ದಂತ ಕಥೆಯಲ್ಲ ಸತ್ಯವಾದ ಇತಿಹಾಸವದೆ. ಇದು ಸಿರಿಯಾಳಶೆಟ್ಟಿಯ ಜಯಂತಿಯಲ್ಲ. ಅಥವಾ ಮಹಂತಿ ಅಲ್ಲ. ಶಿರಿಯಾಳ ಶೆಟ್ಟಿಯ ರಾಜ್ಯಾರೋಹಣದ ದಿವಸವು. ನಮ್ಮ ಲಿಂಗವಂತರಲ್ಲಿ ಯುದ್ಧ ಮಾಡದೆ ಧರ್ಮಬುದ್ಧಿಯಿಂದ ದಾಸೋಹ ನಡಿಸಿ ಶರಣ ಮಾರ್ಗದಿಂದ ರಾಜ್ಯ ಸಂಪಾದಿಸಿದವನು ಈ ಶಿರಿಯಾಳ ಶೆಟ್ಟಿಯು.

ದಕ್ಷಿಣ ಹಿಂದುಸ್ಥಾನದಲ್ಲಿ ವರ್‍ಹಾಡ, ಮರಾಠವಾಡಾ, ಕೊಂಕಣ, ಮಹಾರಾಷ್ಟ್ರ ವಗೈರೆ ಪ್ರಾಂತಗಳಲ್ಲಿ ದರ ವರ್ಷ ಶ್ರಾವಣ ಶುದ್ಧ ೬ನೇ ದಿವಸ ಪ್ರತಿಯೊಂದು ಹಳ್ಳಿ ವ ಪಟ್ಟಣಗಳಲ್ಲಿ ಸಾಯಂಕಾಲ ಸುಮಾರಕ್ಕೆ ಒಂದು ದೊಡ್ಡ ಉತ್ಸವವನ್ನು ಮಾಡುತ್ತಾರೆ. ಇದನ್ನು ವೀರಶೈವರಕ್ಕಿಂತ ವೀರಶೈವೇತರರೇ ಮಾಡುವದು ಹೆಚ್ಚು. ಈ ಉತ್ಸವದ ಮುಖ್ಯ ಕ್ರಮವೇನಂದರೆ—

ಉತ್ಸವದ ಮುಖ್ಯ ಭಾಗವೆಂದರೆ ಒಂದು ಮಣ್ಣಿನ ದೊಡ್ಡ ಪುರುಷಾಕೃತಿಯನ್ನು ಮಾಡುತ್ತಾರೆ. ಮತ್ತು ಗುಮಟದಂತೆ ಆಕಾರ ತಯಾರ ಮಾಡುತ್ತಾರೆ. ಅಂದರೆ ಅದಕ್ಕೆ ತಾಬೂತದಂತೆ ಆಕಾರ ಮಾಡುತ್ತಾರೆ. ಅದರಲ್ಲಿ ವಿಶೇಷವೇನಂದರೆ ಆ ಮೂರ್ತಿಯನ್ನು ತಯಾರಿಸಿ ಮೂರ್ತಿಯ ಕೊರಳಲ್ಲಿ ಲಿಂಗಧಾರಣವನ್ನು ಮಾಡುತ್ತಾರೆ. ಆ ಮೂರ್ತಿಯು ಕೊರಳಲ್ಲಿ ಲಿಂಗಧಾರಣ ಯಾಕೆ ಮಾಡುತ್ತಾರೆ. ಲಿಂಗಧಾರಣ ಮಾಡುವದರಿಂದ ಆ ಮೂರ್ತಿಯು ಲಿಂಗವಂತನದಿರಬೇಕು. ಇದನ್ನು ಒಬ್ಬನಾದರೂ ವೀರಶೈವನು ನಿರೀಕ್ಷಣೆ ಮಾಡದಿದ್ದದ್ದು ದುರ್ದೈವದ ಸಂಗತಿಯು. ಈ ಶಿರಿಯಾಳಶೆಟ್ಟಿಯ ಉತ್ಸವವು ಪ್ರತಿ ಶ್ರಾವಣ ಮಾಸದಲ್ಲಿ ಶುದ್ಧ ಷಷ್ಠಿಗೆ ಆಗುತ್ತದೆ. ಮೇಲೆ ವರ್ಣಿಸಿದ ಮೂರ್ತಿಯನ್ನು ಕುಂಬಾರನಿಂದ ತಯಾರು ಮಾಡಿಸಿ, ಎರಡು ಗಂಟೆಯ ಸುಮಾರಿಗೆ ಮನೆಯಲ್ಲಿ ಆ ಮೂರ್ತಿಯ ಪ್ರತಿಷ್ಠಾಪನೆ ಮಾಡುವರು. ಆ ಮೇಲೆ ತಮ್ಮ ಬಂಧು ಬಾಂಧವರಿಗೆ ಮತ್ತು ಮಿತ್ರರಿಗೆ ಊಟಕ್ಕೆ ಹೇಳುವರು. ಊಟವಾದ ಮೇಲೆ ಸಾಯಂಕಾಲದ ಸುಮಾರಿಗೆ ಬಾಲ, ಬಾಲಿಕೆಯರು ಶಿರಿಯಾಳಶೆಟ್ಟಿಯ ಮೂರ್ತಿಯ ಸುತ್ತಲು ಶೆಟ್ಟಿಯ ಸಂಬಂಧದ ಪದಗಳನ್ನು ಅನ್ನುತ್ತ ಪ್ರದಕ್ಷಿಣೆ ಹಾಕುವರು. ಆ ಪದಗಳನ್ನನ್ನುತ್ತ ಪ್ರದಕ್ಷಿಣೆ ಹಾಕುವದನ್ನು ನೋಡಿದರೆ ಮನಸ್ಸಿಗೆ ಬಹಳ ಆನಂದವಾಗುವದು. ಆ ಪದಗಳನ್ನು ಲಕ್ಷವಿಟ್ಟು ಕೇಳಿದರೆ ಅವುಗಳಲ್ಲಿ ಶಿರಿಯಾಳಶೆಟ್ಟಿಯ ದಾನದ ವಿಷಯಕ್ಕೆ, ಅವನ ಔದಾರ್ಯದ ವಿಷಯಕ್ಕೆ, ಅವನು ಮೂರುವರೆ ಗಳಿಗೆ ರಾಜ್ಯಭಾರ ಮಾಡಿದ ವಿಷಯಕ್ಕೆ ಪದಗಳಿರುವವೆಂದು ಕಂಡುಬರುವದು. ಆ ಪದದ ಮೊದಲನೇ ಪದವು ಮರಾಠಿಯಲ್ಲಿದ್ದದ್ದು "ಶಿರಿಯಾಳಶೇಟ ಲಿಂಗಾಯತವಾಣ್ಯಾ" ಈ

ಪ್ರಕಾರ ಮರಾಠಿ ಭಾಗದಲ್ಲಿ ಆಪಸ ಮೇಲಿನ ಎಷ್ಟೋ ಪದಗಳಿರುವವು. ಈ ತರದ ಪದಗಳನ್ನು ಯಾರಾದರೂ ಸಂಗ್ರಹಿಸಿ ವರ್ತಮಾನ ಪತ್ರದಲ್ಲಿ ಕೊಟ್ಟರೆ ಬಹಳೇ ನೆಟ್ಟಗಾಗುವದು.

ಶಿರಿಯಾಳಶೆಟ್ಟಿಯು ಉತ್ಸವದಲ್ಲಿ ತಾಸೆ, ಬಜಂತ್ರಿ ಬಾರಿಸುತ್ತ ಪುರುಷ ಮಂಡಳಿಯು ಫೇರಿ ಹಾಕುತ್ತ, ಕುಣಿಯುತ್ತಾ ತಿರುಗುವರು. ಆ ಮೇಲೆ ಶಿರಿಯಾಳ ಶೆಟ್ಟಿಯ ಮೂರ್ತಿಯನ್ನು ಮನೆಯಿಂದ ಹೊರಗೆ ತೆಗೆದು, ಮುಂದಿನ ಅಂಗಳದಲ್ಲಿ ಮೂರ್ತಿಯನ್ನು ಸ್ಥಾಪಿಸುವರು. ಆ ಮೇಲೆ ಹೊರಗೆ ೩|| ಗಳಿಗೆ ಮೂರ್ತಿಯನ್ನು ಇಟ್ಟು, ಆ ಮೇಲೆ ಮೂರ್ತಿಯನ್ನು ಹೊರಗೆ ಪ್ರಯಾಣಕ್ಕೆ ತೆಗೆಯುವರು. ತಾಬೂತದಂತೆ ಮೆರೆಯಿಸಿ, ಊರಹೊರಗೆ ಒಯ್ದು ಮೂರ್ತಿಯನ್ನು ವಿಸರ್ಜನ ಮಾಡುವರು. ಈ ಪ್ರಕಾರದ ಪದ್ಧತಿಯು ಪ್ರತಿವರ್ಷ ತಪ್ಪದೆ ನಡೆಯುತ್ತದೆ. ಈ ಪ್ರಕಾರ ಶಿರಿಯಾಳಶೆಟ್ಟಿಯ ಮೂರುವರೆ ಗಳಿಗೆಯ ರಾಜ್ಯ ತೀರಿತೆಂದು ತಿಳಿಯುವರು.

ಈ ಶಿರಿಯಾಳನ ಕಾಲಕ್ಕೆ ಯಾವ ರಾಜನಿದ್ದನು ನೋಡುವಾ. ಸಿರಿಯಾಳನ ಕಾಲದಲ್ಲಿ ಸನ್ ೧೩೯೬ರಿಂದ ೧೪೦೮ರ ವರೆಗೆ ಬಹುದೊಡ್ಡ ಬರ ಬಿದ್ದಿತೆಂದು ಹಿಂದೆ ಹೇಳಿರುವೆವಷ್ಟೆ; ಆ ಕಾಲಕ್ಕೆ ಕರ್ನಾಟಕ ವ ಮಹಾರಾಷ್ಟ್ರ ದೇಶಗಳು ಬಹಾಮನಿ ಅರಸರ ರಾಜ್ಯಕ್ಕೆ ಸೇರಿದ್ದವು. ಮೊದಲು ಬಹಾಮನಿ ರಾಜಧಾನಿಯು ಕಲಬುರ್ಗೆ ಇತ್ತು. ಮುಂದೆ ಅಹಮ್ಮದಶಹನೆಂಬವನು ಗುಲಬುರ್ಗೆಯನ್ನು ಬಿಟ್ಟು ಬೀದರವನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡನು. ಅದೇ ಅಹಮ್ಮದಶಹನೇ ಈ ನಮ್ಮ ಶಿರಿಯಾಳಶೆಟ್ಟಿಗೆ ರಾಜ್ಯವನ್ನು ಕೊಟ್ಟಿದ್ದನು. ಈ ಅರಸನು ಬಹಳ ಶೂರನೂ, ದಯಾವಂತನೂ ಇದ್ದುದಲ್ಲದೆ, ಹಿಂದೂಜನರ ಅಭಿಮಾನಿ ಇದ್ದನೆಂದು ಇತಿಹಾಸಕಾರರು ವರ್ಣಿಸಿದ್ದಾರೆ. ಈ ಕಥೆಯ ಮೇಲಿಂದ ಹೀಗೆ ಅನುಮಾನವಾಗುತ್ತದಲ್ಲಾ ದಾನವೀರ ಶಿರಿಯಾಳ ಶೆಟ್ಟಿಯು ಇದಕ್ಕೂ ಹೆಚ್ಚಿನ ಮಹತ್ವದ ಕಾರ್ಯಮಾಡಿರಬೇಕೆಂದು ನನಗನಿಸುತ್ತದೆ. ಆದರೆ ಶೋಧಕರು ಅವನ ಮಹತ್ಕಾರ್ಯವನ್ನು ಗೊತ್ತುಹಚ್ಚಿ ಪ್ರಸಿದ್ಧಪಡಿಸಬೇಕು. ಆದರೆ ವೀರಶೈವನಾದ ಈ ಶೆಟ್ಟಿಯ ರಾಜ್ಯಾರೋಹಣ ದಿವಸವನ್ನು ವೀರಶೈವೇತರ ಜನರು ಮಾಡುವದೇ ಬಹಳ. ಇದು ವೀರಶೈವರಿಗೆ ಲಾಂಛನಾಸ್ಪದವಲ್ಲವೇ? ಸ್ವಾಭಿಮಾನ ಶೂನ್ಯತೆಯ ಲಕ್ಷಣವಲ್ಲವೆ? ಪರಧರ್ಮದವರು ಇತ್ತಲಾಗಿ ಮುಂಬೈಯಲ್ಲಿ ಕೆಲಜನ ವೀರಶೈವರು ಸಾಮುದಾಯಿಕ ರೀತಿಯಿಂದ ಈ ರಾಜ್ಯಾರೋಹಣ ದಿವಸವನ್ನು ಸುರುಮಾಡಿರುವರೆಂಬುದು ಆನಂದದ ಸಂಗತಿಯು. ವೀರಶೈವರು ಕೆಲ ಮಹಾತ್ಮರ ಜಯಂತಿ ಉತ್ಸವವನ್ನು ಮಾಡುತ್ತಾರೆ. ಪುಣ್ಯತಿಥಿಗಳನ್ನು

ಮಾಡುತ್ತಾನೆ. ಆದರೆ ವೀರಶೈವ ರಾಜ್ಯಾರೋಹಣ ದಿವಸವನ್ನು ಯಾವಾಗ್ಯೂ ಯಾರೂ ಮಾಡಿದ್ದಿಲ್ಲ. ಆದರೆ ಸಿರಿಯಾಳ ಶೆಟ್ಟಿಯ ಪರಮ ಚಾರಿತ್ರ್ಯದಿಂದ ಸಮಾಜದ ಮೇಲೆ ಹೊಸ ಬೆಳಕು ಬಿದ್ದಂತಾಗಿದೆ. ಕಾರಣ ಪ್ರತಿಯೊಬ್ಬ ವೀರ ಶೈವನು ಈ ರಾಜ್ಯಾರೋಹಣ ದಿವಸವನ್ನು ಪಾಲಿಸುವದು ಅವನ ಆದ್ಯಕರ್ತವ್ಯವು. ಮತ್ತು ಈ ಹೊಸಯುಗದಲ್ಲಿ ಇಂಥಾ ಜ್ಞಾನಿ ಮತ್ತು ದಾನಿ ಮಹಾತ್ಮರು ನಮ್ಮ ಸಮಾಜದಲ್ಲಿ ಹುಟ್ಟಲಿ ಅಂತಾ ಆ ಪಾರ್ವತೀಪತಿಯನ್ನು ಬೇಡಿಕೊಂಡು ಈ ಲೇಖ ವನ್ನು ಮುಗಿಸುತ್ತೇನೆ.



ಮಲವಿಸರ್ಜನೆಗಾಗಿ ಯಾವ ಕೃತ್ರಿಮ ಉಪಾಯುಗಳೂ ಬೇಕಾಗಿಲ್ಲ. ಸ್ವಭಾವಸಿದ್ಧವೂ ಶುದ್ಧವೂ ಆದ ಹಿಂದಿನ ದಿನದ ಒಂದು ಸೇರು ತಣ್ಣೀರು ಪ್ರಾತಃಕಾಲ ಹೊಟ್ಟೆಯನ್ನು ಸೇರಿದರೆ ಸಾಕು. ಇದಕ್ಕಿಂತಲೂ ಹೆಚ್ಚಾಗಿ ಆರೋಗ್ಯವನ್ನುಂಟುಮಾಡುವ ಔಷಧಿಯು ಜಗತ್ತಿನಲ್ಲಿ ಮತ್ತೊಂದಿಲ್ಲವೆಂದೇ ಹೇಳಬಹುದು. ನೀರನ್ನಾದರೂ ಒಮ್ಮೆಲೆ ಗಟಗಟನೆ ಕುಡಿಯಬಾರದು. ಪ್ರಾತಃ ಕಾಲದಲ್ಲಿ ಹೀಗೆ ತಣ್ಣೀರು ಕುಡಿಯುವದರಿಂದ ಮಲವಿಸರ್ಜನೆ ಸರಿಯಾಗಿ ಆಗುವುದಲ್ಲದೆ ಇನ್ನೂ ಬೇರೆ ಅಲಭ್ಯ ಲಾಭಗಳುಂಟಾಗುವುವೆಂದು ಕಂಡುಬಂದಿದೆ. ಇದನ್ನು ಪರೀಕ್ಷಿಸಿ ನೋಡಿದವರಿಗೆ ಅವಶ್ಯವಾಗಿ ಸುಖವುಂಟಾಗಿದೆ. ತಣ್ಣೀರು ಅಂತಹ ವಸ್ತುವೇ ಅಹುದು. ಅದರ ಪ್ರಶಂಸೆಯನ್ನು ನೋಡಿರಿ:—

ಆಪೋಽಮೃತರಸೋ ಹ್ಯಾಪಃ ಶುಕ್ರಮಾಪಃ ಪ್ರವರ್ತತೇ |
ಸರ್ವಸ್ಯ ಬೀಜಮಾಪೋ ವೈ ಸರ್ವಮಪ್ಸು ಪ್ರತಿಷ್ಠಿತಂ ||

ನೀರು ನೀರಲ್ಲ. ಅದು ಅಮೃತ; ಅಮೃತವಷ್ಟೇ ಅಲ್ಲ; ಅದು ರಸ; ರಸ ವಷ್ಟೇ ಅಲ್ಲ, ಅದು ಶುಕ್ರ (ವೀರ್ಯ); ಶುಕ್ರವಷ್ಟೇ ಅಲ್ಲ, ಅದು ಎಲ್ಲದಕ್ಕೂ ಬೀಜ (ಕಾರಣ) ವಾಗಿದೆ. ಎಂದ ಮೇಲೆ ಇನ್ನೆಷ್ಟು ವರ್ಣನೆ ಬೇಕು? ವಾಚ ಕರೇ! ನಿಜವಾಗಿಯೂ ನೀರು ಅಮೃತವೇ ಆಗಿದೆ. ಅಂತೆಯೇ ಅಮರ ಕವಿಯು ಇದಕ್ಕೆ "ಪಯಃ ಕೀಲಾಲಮಮೃತಮಂ" ಎಂದು ಅಂದಿರುವನು. ಆದುದರಿಂದ ಮಲಶುದ್ಧಿಗಾಗಿ ಜಲಪಾನವು ಆವಶ್ಯಕವಾದುದೆಂದು ತಿಳಿಯಿರಿ. ಇನ್ನು ಈ ಮಲ ಶುದ್ಧಿಗಾಗಿ ಊಟದೊಡನೆಯೂ ಊಟವಾದ ಮೇಲೂ ಹಣ್ಣು ಹಂಪಲು ಕಾಯಿ ಸೊಪ್ಪುಗಳನ್ನು ಅವಶ್ಯವಾಗಿ ತೆಗೆದುಕೊಳ್ಳಬೇಕು. ಇವುಗಳಿಂದ ಮಲಬದ್ಧ ತೆಯು ಬೇಗನೆ ನಿವಾರಣೆ ಹೊಂದುವುದು. ಕನ್ನಡದಲ್ಲಿ "ಪಾಲಕ"ವೆಂದು ಹೆಸ ರುಳ್ಳ ಸೊಪ್ಪು ಮಲಬದ್ಧತೆಯನ್ನು ದೂರ ಮಾಡುವುದರಲ್ಲಿ ಹೆಸರಾಗಿದೆ. ಈ ಸೊಪ್ಪನ್ನು ಮೆಂತೆಯ ಸೊಪ್ಪಿನಂತೆ ಬೇಳೆಯಲ್ಲಾಗಲಿ ಪ್ರತ್ಯೇಕವಾಗಿಯಾಗಲಿ ಬೇಯಿಸಿ ಅನ್ನ ರೊಟ್ಟಿಗಳ ಕೂಡ ತೆಗೆದುಕೊಳ್ಳುತ್ತಾರೆ. ಕಾನೆದೆಗಿದ ಬೆಚ್ಚನ ಹಾಲು ಇದೇ ಗುಣವುಳ್ಳದೆಂದು ತಿಳಿದಿರುವುದರಿಂದ ರಾತ್ರಿ ಊಟವಾದ ಸ್ವಲ್ಪ ಹೊತ್ತಿನ ಮೇಲೆ ಒಂದು ಸೇರು ಇಲ್ಲವೇ ಎರಡು ಸೇರು ಹಾಲನ್ನು ತಮ್ಮ ಆರೋ ಗ್ಯವನ್ನು ನೋಡಿಕೊಂಡು ಕುಡಿಯುವದು ಒಳ್ಳೇದು.

ನಾವು ಯಾವಾಗಲೂ ಕುಳಿತಿರುವುದರಿಂದಲೂ, ಶೀಘ್ರ ಪಚನವಾಗದ ಆ ಆಹಾರವನ್ನು ಹೆಚ್ಚಾಗಿ ತಿನ್ನುವುದರಿಂದಲೂ ಬೊಜ್ಜು ಬೆಳೆಯಲು ಪ್ರಾರಂಭವಾ ಗುವುದು. ಇಂತಹ ಸಮಯದಲ್ಲಿ ತಿರುಗಾಡುವದು, ಆಸನ ಮುಂತಾದ ವ್ಯಾಯಾಮ

ಗಳನ್ನು ಮಾಡುವುದು ಅತ್ಯಾವಶ್ಯಕವು. ಹೊಟ್ಟೆಯು ಯಾವಾಗಲೂ ಶುದ್ಧವಾಗಿರ ಬೇಕೆಂಡರೆ ಮೊದಲು ಬಾಯಿಯು ಶುದ್ಧವಾಗಿರಬೇಕು. ಬಾಯಿಗೂ ಹೊಟ್ಟೆಗೂ ಬಹಳ ಸಂಬಂಧವಿದೆ. ಅನ್ನವು ಹೊಟ್ಟೆಯನ್ನು ಸೇರುವುದು ಬಾಯಿಯಿಂದಲೇ. ಬಾಯಿಯೊಂದು ಸ್ವಚ್ಛವಾಗಿರದಿದ್ದರೆ ಉಂಡನ್ನವೆಲ್ಲವೂ ವಿಷವಾಗುವುದರಲ್ಲಿ ಸಂಶಯವೇ ಇಲ್ಲ. ಆದುದರಿಂದ ಬಾಯಿಯನ್ನು ಹಸನಾಗಿ ತೊಳೆದುಕೊಂಡು ಶಾಂತಚಿತ್ತನಾಗಿ ಊಟಕ್ಕೆ ಕುಳಿತು ಆಹಾರವನ್ನು ಸಣ್ಣಾಗಿ ಜಗಿದು ಹೊಟ್ಟೆ ಯನ್ನು ತುಂಬಬೇಕು. ಜಪಗುಟ್ಟುತ್ತಾ ಗಪಗಪನೆ ತಿಂದು ಕೂಡ್ರುವುದರಿಂದ ಅನಾರೋಗ್ಯದ ಹೊರತು ಬೇರೆ ಯಾವ ಲಾಭವೂ ಇಲ್ಲ. ಆಹಾರವನ್ನು ಚನ್ನಾಗಿ ಜಗಿದು ತಿನ್ನುವುದಕ್ಕಾಗಿಯೇ ದೇವರು ನಮಗೆ ಭದ್ರವಾದ ಹಲ್ಲುಗಳನ್ನು ಕೊಟ್ಟಿ ರುವನು. ನಾವು ಆ ಹಲ್ಲುಗಳನ್ನು ದುಡಿಸದೆ ಸಿಕ್ಕ ವಸ್ತುಗಳನ್ನು ಹಾಗೆಯೇ ನುಂಗಿಬಿಟ್ಟರೆ ಹಲ್ಲಿನ ಕೆಲಸವನ್ನು ಹೊಟ್ಟೆಯು ಮಾಡಬೇಕಾಗುವುದರಿಂದ ಆಹಾ ರವು ಚನ್ನಾಗಿ ಜೀರ್ಣವಾಗುವುದಿಲ್ಲ; ರೋಗಗಳುಂಟಾಗುವುದು ಇದೇ ಸಮಯು.

ಮಲಾವರೋಧವುಂಟಾದಾಗ ಬಲಾತ್ಕಾರದಿಂದ ಮಲವಿಸರ್ಜನೆ ಮಾಡು ವುದು ಒಳ್ಳೇದಲ್ಲ. ಇದರಿಂದ ಒಮ್ಮೊಮ್ಮೆ ವೀರ್ಯದ ವರೆಗೂ ಪೆಟ್ಟು ತಗಲು ವುದುಂಟು. ಈ ಮಲಾವರೋಧವನ್ನು ತಪ್ಪಿಸುವುದಕ್ಕಾಗಿ ಅಳಲೆಕಾಯಿ, ನೆಲ್ಲಿ ಕಾಯಿ, ತಾರೆಕಾಯಿಗಳೆಂಬ ತ್ರಿಫಲಗಳ ನಾಲ್ಕಾಣೆ ತೂಕ ಪುಡಿಯನ್ನು ರಾತ್ರಿಯ ಊಟವಾದ ಮೇಲೆ ಮಲಗುವುದಕ್ಕೆ ಸ್ವಲ್ಪ ಮುಂಚೆ ೧೦ ತೊಲೆ ಬಿಸಿ ನೀರಿನಲ್ಲಿ ಹಾಕಿಕೊಂಡು ಕುಡಿಯಬೇಕು. ಇದರಿಂದ ಮಲವಿಸರ್ಜನೆ ಸರಿಯಾಗಿ ಆಗುವು ದಲ್ಲದೆ ವಾತ, ಪಿತ್ತ, ಕಫಗಳು ಹೆಚ್ಚಾಗದೆ ಸರಿಯಾದ ಸ್ಥಿತಿಯಲ್ಲಿರುವವು. ತ್ರಿಫಲಾ ಚೂರ್ಣವನ್ನು ತೆಗೆದುಕೊಳ್ಳುವುದು ಸಾಧ್ಯವಾಗದಿದ್ದರೆ ನಾಲ್ಕಾಣೆ ತೂಕ ಅಳಲೆಕಾಯಿ ಪುಡಿಯನ್ನಾದರೂ ಹತ್ತು ತೊಲೆ ತಣ್ಣೀರಿನಲ್ಲಿ ಪ್ರಾತಃಕಾಲ ೪-೫ ಘಂಟೆಯ ಸಮಯದಲ್ಲಿಯೇ ತೆಗೆದುಕೊಳ್ಳಬೇಕು. ಇದರಿಂದಲೂ ಮಲಬದ್ಧ ತೆಯು ದೂರಾಗುವುದು. ಅಳಲೇ ಕಾಯಿಯಲ್ಲಿ ಇಂತಹ ಅದ್ಭುತ ಗುಣವು ಇರು ವುದರಿಂದಲೇ ವೈದ್ಯ ಶಾಸ್ತ್ರವು- "ಯಸ್ಯ ಮಾತಾ ಗೃಹೇನಾಸ್ತಿ ತಸ್ಯ ಮಾತಾ ಹರೀತಕೀ" (ಯಾವ ಮನುಷ್ಯನಿಗೆ ಮನೆಯಲ್ಲಿ ಹಡೆದ ತಾಯಿಯಿಲ್ಲವೋ ಆತನಿಗೆ ಅಳಲೆ ಕಾಯಿಯೇ ತಾಯಿಯು) ಎಂದು ಇದನ್ನು ಹೊಗಳಿದೆ. ಕೆಲವ ರಿಗೆ ಅಗ್ನಿಮಾಂದ್ಯದಿಂದಲೂ ಮಲಬದ್ಧತೆಯಾಗುವುದುಂಟು. ಅಂತಹ ಸಮಯ ದಲ್ಲಿ ತಮ್ಮ ಪ್ರಕೃತಿ ಸ್ಥಿತಿಯನ್ನು ತಿಳಿದುಕೊಂಡು ಅಳಲೆಕಾಯಿ ಪುಡಿಯೊಡನೆ ಶುಂಠೀ ಪುಡಿಯನ್ನು ಮಿಶ್ರಮಾಡಿ ಬೆಲ್ಲದೊಡನಾಗಲಿ, ಸೈಂಧವ ಲವಣದೊಡ ನಾಗಲಿ ತೆಗೆದುಕೊಳ್ಳಬೇಕು. ಕೆಲವರಿಗೆ ಮಲವಿಸರ್ಜನೆಯು ಸರಿಯಾಗಿದ್ದರೂ

ಹಸಿವೆಯಾಗುತ್ತಿರುವುದಿಲ್ಲ. ಇಂಥ ಸಮಯದಲ್ಲಿ ಅವರು ಯವಕ್ಷಾರ ಶುಂಠೀ ಪುಡಿಗಳನ್ನು ಅಥವಾ ಶುಂಠೀಪುಡಿಯೊಂದನ್ನೋ ತುಪ್ಪದಲ್ಲಿ ಕಲಿಸಿ ತೆಗೆದುಕೊಳ್ಳಬೇಕು. ಈ ಮೂರು ಔಷಧಗಳು ಪ್ರಾತಃಕಾಲಕ್ಕೆ ತೆಗೆದುಕೊಳ್ಳಲು ಯೋಗ್ಯವಾದವುಗಳು.

ಮಲಬದ್ಧತೆಯೆಂಬುದು ನಮ್ಮ ಉನ್ನತಿಯ ಸಕಲ ಮಾರ್ಗಗಳಲ್ಲಿಯೂ ತೊಂದರೆಯನ್ನುಂಟುಮಾಡುತ್ತಿರುವುದು. ಎಲ್ಲಾ ರೋಗಗಳೂ ಮಲಬದ್ಧತೆಯಿಂದಲೇ ಉಂಟಾಗುವವೆಂಬುದು ಎಲ್ಲರಿಗೂ ತಿಳಿದ ಮಾತಾದರೂ ಇದರ ನಿವಾರಣೆಗೆ ಪ್ರಯತ್ನಪಡತಕ್ಕವರು ಕಡಿಮೆ. ಮಲಬದ್ಧತೆಯ ನಿವಾರಣೆಯ ಕಡೆಗೆ ಲಕ್ಷ್ಯಕೊಡದಿದ್ದರೆ ವೀರ್ಯವು ಕೆಡುವುದೆಂಬ ಮಾತು ಸತ್ಯವಾಗಿದೆ. ನಮ್ಮೀ ಶರೀರವೆಂಬ ವೃಕ್ಷಕ್ಕೆ ವೀರ್ಯವೇ ಮೂಲವಾಗಿದೆ. ಇಂತಹ ಅಮೌಲ್ಯವಾದ ಮೂಲವೀರ್ಯವೇ ನಾಶವಾಗಹತ್ತಿದರೆ ಮುಂದೇನು? "ಛಿನ್ನೇಮೂಲೇ ನೈವಶಾಖಾನಪತ್ರಂ" (ಮೂಲವೇ ಕಡಿದು ಹೋದ ಮೇಲೆ ಟೊಂಗೆಗಳಿಲ್ಲ ಎಲೆಗಳಿಲ್ಲ) ಎಂದು ಈ ಶರೀರ ವೃದ್ಧಿಗೆ ತಿಲೋದಕವನ್ನು ಬಿಡಬೇಕಾಗುವುದು.

## ಹಲ್ಲಂ ತಿಕ್ಕುವುದು

ಆರೋಗ್ಯ ಮತ್ತು ಸುಖಮಯ ಜೀವವನ್ನು ಹೊಂದುವುದಕ್ಕಾಗಿ ಹಲ್ಲುಗಳನ್ನು ಜೋಪಾನವಾಗಿಟ್ಟುಕೊಳ್ಳುವುದು ಅತ್ಯಾವಶ್ಯಕವಾದ ಕಾರ್ಯವಾಗಿದೆ. ಆದಕ್ಕಾಗಿಯೇ ನಮ್ಮ ಮೊದಲಿನ ಹಿರಿಯರು ಕಡ್ಡಿಯಿಂದ ಹಲ್ಲುಜ್ಜುವುದನ್ನು ಪ್ರಧಾನವಾದ ನಿತ್ಯ ಕರ್ಮವೆಂದು ಭಾವಿಸಿ ತಮ್ಮ ಆಚಾರವಿಧಿಯಲ್ಲಿ ಬರೆದಿಟ್ಟಿರುವರಲ್ಲದೆ ಹಾಗೆ ಪ್ರಚಾರವನ್ನೂ ಮಾಡಿದ್ದಾರೆ. ಬಹುಶಃ ಕಾಶೀ ಮೊದಲಾದ ಉತ್ತರ ಪ್ರಾಂತಗಳ ಜನರು ಯಾವಾಗಲೂ ಕಡ್ಡಿಯಿಂದ ಹಲ್ಲುಜ್ಜದೆ ಒಂದು ಗುಟುಕು ನೀರು ಕುಡಿಯುವುದನ್ನು ಅಧರ್ಮವೆಂದು ತಿಳಿಯುತ್ತಾರೆ. ಈ ದಂತಧಾವನವಿಲ್ಲದೆ ರೋಗದ ಸಮಯದಲ್ಲಿ ಅವರು ಔಷಧಿಯನ್ನು ಕುಡಿಯುವದಿಲ್ಲವೆಂದ ಮೇಲೆ ಊಟಮಾಡುವುದಂತೂ ದೂರೇ ಉಳಿಯಿತು, ಆದುದರಿಂದಲೇ ಈ ಜನರಲ್ಲಿ ದಂತರೋಗವುಳ್ಳವರು ಬಹಳ ಕಡಿಮೆ. ಆದರೆ ಕೆಲವರಿಗೆ ಈ ವಿಧಾನವು ಅನಾವಶ್ಯಕವೆಂದು ತಿಳಿದುಬಂದು ಉದಾಶೀನರಾಗಿಯೂ ಇರಬಹುದು. ಇದಕ್ಕೆ ಫಲವಾಗಿ ಅವರು ಹಲ್ಲು ಹುಳಿಯುವುದೇ ಮುಂತಾದ ದಂತರೋಗವುಳ್ಳವರಾಗಿ ತಮ್ಮ ಬಾಳುವೆಯನ್ನು ದುಃಖಮಯವನ್ನಾಗಿ ಮಾಡಿಕೊಳ್ಳುವರು. ಕೆಲವರು ಅಗ್ನಿಮಾಂದ್ಯ, ಅಜೀರ್ಣ ಮುಂತಾದವುಗಳಿಂದ ಯಾವಾಗಲೂ

ರಾಗಿ ಇರುವುದೂ ಇದೇ ಕಾರಣ. ಕೆಲವರು ಅಲ್ಪಸ್ವಲ್ಪ ಹಲ್ಲು ನೋವಿನಲ್ಲಿ ಪ್ರಕೃತಿ ಸಿದ್ಧಗಳಾದ ತಮ್ಮ ಹಲ್ಲುಗಳನ್ನು ಕೀಳಿಸಲಿಕ್ಕೆ ಯತ್ನಿಸುವುದಾದರೂ ಇದೇ ಕಾರಣ. ಹಲ್ಲುಗಳು ಕೆಟ್ಟ ಮೇಲೆ ಕೃತ್ರಿಮಗಳಾದ ಹಲ್ಲುಗಳನ್ನು ಹಾಕಿಸಿ ಕೊಂಡು ಯಾವದೋ ಒಂದು ತೆರನಾಗಿ ಭೋಜನಾದಿಕಾರ್ಯಗಳನ್ನು ಸಾಗಿಸುವುದ ಕ್ಕಿಂತಲೂ ಮೊದಲಿನಿಂದಲೂ ದಂತರಕ್ಷಣೆಯ ಸಲುವಾಗಿ ಜಾಗರೂಕರಾಗಿದ್ದರೆ, ಮುಂದೆ ಇಂತಹ ದುರ್ದಶೆಯುಂಟಾಗಲಾರದು. 'ದುಃಖದಲ್ಲಿ ಎಲ್ಲರೂ ಸ್ಮರಣೆ ಮಾಡುವರು ಸುಖದಲ್ಲಿ ಯಾರೂ ಮಾಡುವದಿಲ್ಲ ಯಾರು ಸುಖದಲ್ಲಿ ಸ್ಮರಣೆ ಮಾಡುವರೋ ಅವರಿಗೆ ದುಃಖವೆಲ್ಲಿದೆ?' ಎಂಬ ಪೂರ್ವ ಕವಿಯ ವಾಕ್ಯವನ್ನು ನೆನಪಿನಲ್ಲಿಡಬೇಕು.

ಪ್ರಕೃತಿ (ಭೂಮಿ) ಯು ಭಾರತವಾಸಿಗಳ ಸಲುವಾಗಿ ಅನೇಕ ಗುಣಕಾರಿ ಗಳಾದ ಗಿಡಗಳನ್ನು ಕೊಟ್ಟಿರುತ್ತದೆ. ಆ ಗಿಡಗಳ ಮಿದುವಾದ ಹೊಸ ಹೊಸ ಕಡ್ಡಿಗಳು ಎಲ್ಲಿ ಬೇಕಾದರೂ ದೊರೆಯುತ್ತವೆ. ಯಾವ ಗಿಡದ ಕಡ್ಡಿಯಿಂದ ಸ್ವಚ್ಛತೆ ಯಲ್ಲದೆ ಹಲ್ಲುಗಳ ಬೇರಿಗೆ ಹೊಸ ರಸದ ಲಾಭವಾಗುವದೋ ಅಂತಹ ಕಡಿ ಯಿಂದಲೇ ಹಲ್ಲುಗಳು ರೋಗಹಿತವಾಗುವವಲ್ಲದೆ ಗಟ್ಟಿಯಾಗುತ್ತವೆ. ಮತ್ತು ದಂತರೋಗಕ್ಕೆ ಹೊರತಾದ ಬಗೆಬಗೆಯ ಮುಖರೋಗಗಳೂ ನಾಶವಾಗಿ ಅನ್ನ ದಲ್ಲಿ ರುಚಿಯೂ ಪಾಚನ ಶಕ್ತಿಯೂ ಹೆಚ್ಚುತ್ತದೆ. ಈಗಿನ ಸಮಯದಲ್ಲಿ ಪ್ರಚಾರ ವಾಗುತ್ತಿರುವ ಬ್ರಶ್ಶುಗಳಲ್ಲಿ ಈ ಮೇಲ್ಕಂಡ ಗುಣಗಳಿಲ್ಲ. ಅಲ್ಲದೆ ಇವುಗಳನ್ನು ನಿತ್ಯವೂ "ಕಾರ್ಬೋಲಿಕ ಲೋಶನ್" ಮುಂತಾದ ದ್ರವ್ಯಗಳಿಂದ ಸ್ವಚ್ಛ ತೊಳೆ ದಿಡಲೇ ಬೇಕಾಗುತ್ತದೆ. ಹಾಗಿಡದೆ ಹೋದರೆ ಅಂತಹ ಬ್ರಶ್ಶುಗಳಿಂದ ಹಲ್ಲು ಗಳಿಗೆ ಅವಶ್ಯವಾಗಿ ರೋಗ ತಗಲುವುದು. ಆದರೆ ಕಡ್ಡಿಗಳನ್ನು ಪ್ರತಿನಿತ್ಯ ಹೊಸ ಹೊಸದಾಗಿ ತೆಗೆದುಕೊಳ್ಳಬೇಕಾಗುವುದರಿಂದಲೂ ಉಚ್ಚಿದ ಕಡ್ಡಿಗಳನ್ನು ಬಿಸಾಡಬೇಕಾಗುವುದರಿಂದಲೂ ರೋಗಗಳು ಹರಡುವ ಭೀತಿಯಿಲ್ಲ. ಬ್ರಶ್ಶು ಪಾವ ಡರುಗಳಿಗಿಂತ ಗಿಡಗಳ ಹೊಸದಾದ ಮಿದುವಾದ ಕಡ್ಡಿಯು ಯಾವ ವಿಘ್ನ ಗಳಿಲ್ಲದೆ ಹಿತವನ್ನು ಮಾಡುವುದರಲ್ಲಿ ಎಷ್ಟೋ ಪಾಲು ಮಿಗಿಲಾಗಿದೆ.

ಕಿರಿಬೆರಳಿನಷ್ಟು ದಪ್ಪದಿಂದ ಅವರವರ ಅಪೇಕ್ಷೆಯಂತೆ ಇದಕ್ಕೂ ಸಣ್ಣಸಣ್ಣದಾ ಗಿಯೂ ೧೨ ಬೆರಳುದ್ದವಾಗಿಯೂ, ಅಂಕಡೊಂಕವಾಗಿರದೆಯೂ, ಗಂಟಿಲ್ಲದುದಾ ಗಿಯೂ, ದೋಷರಹಿತವಾದ ಒಳ್ಳೆಯ ನೆಲದಲ್ಲಿ ಹುಟ್ಟಿದ ಗಿಡದಿಂದ ಆಗಲೇ ಕಿತ್ತು ತಂದುದಾಗಿಯೂ ಇರುವ ಕಡ್ಡಿಯನ್ನು ಶೌಚಾದಿ ಕ್ರಿಯಾನಂತರ ಸ್ನಾನಕ್ಕೆ ಮುನ್ನ ಪ್ರಾತಃಕಾಲದಲ್ಲಿ ಹಲ್ಲುಜ್ಜುವುದಕ್ಕಾಗಿ ಉಪಯೋಗಿಸಬೇಕು. ಇಚ್ಛೆ ಇದ್ದವರು ಸಾಯಂಕಾಲದಲ್ಲಿ ಮತ್ತೊಮ್ಮೆ ಸ್ನಾನಕ್ಕೆ ಮುಂಚೆ ಉಪಯೋಗ ಮಾಡಬಹುದು.

# ಧರ್ಮರಾಜ್ಯ

ಸಂಪುಟ ೧ | ಪ್ರಮಾಥಿನಾಮ ಸಂವತ್ಸರ ಚೈತ್ರ | ಸಂಚಿಕೆ ೬

ಕೃತದೊಳಾ ತ್ರೇತೆಯೊಳು ದ್ವಾಪರದೊಳುಂ ಕ್ರಮದೆ ।
ಮತಿವಂತ "ನಲ-ರಾಮ-ಧರ್ಮ" ನೃಪರಿಂ ॥
ಅತಿಯಶವನಾಂತು ಬಾಳಿದ ತೆರದೊಳೀ "ಕೃಷ್ಣ- ।
ಕ್ಷಿತಿಪಾಲನಿಂ" ಬಾಳು "ಧರ್ಮರಾಜ್ಯ" !॥

[ವರಕವಿ ಶ್ರೀವಾಗೀಶ]



ಕರ್ನಾಟಕ ಸಿಂಹಾಸನಾಧೀಶ್ವರ ಶ್ರೀಕೃಷ್ಣರಾಜೇಂದ್ರರು

ಸಂಪಾದಕರು :
ಎಂ. ವ್ಹಿ. ಮಠದ

ಸಹ ಸಂಪಾದಕರು:
ಕವಿಭೂಷಣ ಹೊಮ್ಮರಡಿ ಮಲ್ಲಣ್ಣಗೌಡರು

# ವಿಷಯ ಸೂಚಿಕೆ



## ಸೂಚನೆ

ನಮ್ಮ ಪತ್ರಿಕೆ ಕಾಲಕ್ಕೆ ಸರಿಯಾಗಿ ತಲುಪದಿದ್ದರೆ ಆಕೂಡಲೆ ನಮಗೆ ಬರೆಯಬೇಕು. ಅಂದರೆ ತಕ್ಕ ವ್ಯವಸ್ಥೆ ಮಾಡುವೆವು. ಹಾಗೆ ಮಾಡದೆ ೨-೩ ತಿಂಗಳು ಬಿಟ್ಟು ನಮ್ಮನ್ನು ಆಕ್ಷೇಪಿಸಿದರೆ ನಾವೇನು ಮಾಡುವದಕ್ಕಾಗುತ್ತದೆ? ಆದುದರಿಂದ ಪತ್ರಿಕೆ ಕಾಲಕ್ಕೆ ಸರಿಯಾಗಿ ತಲುಪದಿದ್ದರೆ ಅದೇ ತಿಂಗಳಲ್ಲಿ ನಮಗೆ ಬರೆಯಬೇಕಾಗಿ ಸೂಚಿಸುತ್ತೇವೆ.

ಲೇಖಕರು ಲೇಖನಗಳನ್ನು ಒಂದೇ ಮಗ್ಗಲಿಗೆ ಸ್ವಚ್ಛವಾಗಿ ಬರೆದು ಪ್ರತಿ ತಿಂಗಳ ೧೦ನೇ ತಾರೀಖಿನೊಳಗೆ ನಮಗೆ ಮುಟ್ಟುವಂತೆ ಕಳುಹಿಸಿದರೆ ಅದೇ ತಿಂಗಳ ಸಂಚಿಕೆಯಲ್ಲಿ ಪ್ರಕಟಿಸುವೆವು.

ಸಂಪಾದಕ "ಧರ್ಮರಾಜ್ಯ"
ಟೆಂಗಿನಕಾಯಿ ಚನ್ನಿಂಗ ಫ್ಯಾಕ್ಟರಿ
ಧಾರವಾಡ

# ಧರ್ಮರಾಜ್ಯ

ಮುಡೇಸೂರ "ವೀರಶೈವ ಧರ್ಮಾಲಯ" ದಿಂದ
○ ಹೊರಡುವ ಮಾಸಪತ್ರಿಕೆ ○



ಸಂಪುಟ ೧ ಪ್ರಮಾಥಿನಾಮ ಸಂವತ್ಸರ ಚೈತ್ರ ಸಂಚಿಕೆ ೬

## ಮಹಾಸಭಾ ವಿಚಾರದಲ್ಲಿ ಭಿನ್ನಾಭಿಪ್ರಾಯವುಳ್ಳ ಪ್ರತಿನಿಧಿಗಳಲ್ಲಿ ಅರಿಕೆ

ಹುಬ್ಬಳ್ಳಿಯಲ್ಲಿ ವೀರಶೈವ ಮಹಾಸಭೆಯು ನಡೆದುಹೋಗಿ ಎಷ್ಟೋ ದಿನಗಳಾದವು. ಈ ಸಭಾ ವಿಚಾರವಾಗಿ ಸಂಯುಕ್ತ ಕರ್ನಾಟಕ, ಕರ್ನಾಟಕ ಬಂಧು, ಶರಣಸಂದೇಶ, ಪಂಚಾಚಾರ್ಯಪ್ರಭಾ, ಬಸವರಾಜ ಮೊದಲಾದ ಇನ್ನೂ ಅನೇಕ ಪತ್ರಿಕೆಗಳಲ್ಲಿ ಬೇರೆ ಬೇರೆ ವಿಧವಾದ ಲೇಖಗಳು ಪ್ರಕಟವಾಗಿವೆ. ಅಖಿಲಭಾರತಕ್ಕೇನೆ ಸಂಬಂಧಪಟ್ಟ ಈ ಸಭೆಯ ವಿಚಾರದಲ್ಲಿ ಅನೇಕರು ಭಿನ್ನಾಭಿಪ್ರಾಯಪಡುವುದು ಸಹಜವಾಗಿದೆ. ಕಾಂಗ್ರೆಸ್ಸಿನಂತಹ ಮಹಾ ಮಹಾ ಸಂಸ್ಥೆಯವರೇ ಪ್ರತಿಕ್ಷಣವೂ ಒಂದೊಂದು ಮಾತಿಗಾಗಿ ತಿಕ್ಕಾಡುತ್ತಿರುವಾಗ ನಮ್ಮ ವೀರಶೈವ ಜನಾಂಗಕ್ಕಷ್ಟೇ ಸಂಬಂಧಪಟ್ಟಿರುವ ಈ ಸಭೆಯಲ್ಲಿ ಎಲ್ಲರ ವಿಚಾಗಳೂ ಒಂದಾಗಿ ಭಿನ್ನಾಭಿಪ್ರಾಯಗಳು ಬಾರದಿರಲು ಸಂಬಂಧವೇ ಇಲ್ಲ. ಆದರೆ ಆ ಭಿನ್ನಾಭಿಪ್ರಾಯಗಳು ಕೊನೆಯ ವರೆಗೂ ಹಾಗೆಯೇ ಉಳಿದು ಸಮಾಜದ ಉನ್ನತಿಗೆ ಭಂಗತರುವಂತಾಗಬಾರದು. ಕಾಂಗ್ರೆಸಿನಲ್ಲಿ ಒಡಕುಂಟಾಗಬಾರದೆಂದು ಮಹಾತ್ಮಾಗಾಂಧಿಯವರಂತಹ ಲೋಕಮಾನ್ಯರೂ ತಮ್ಮ ಸೋಲನ್ನೊಪ್ಪಿ ಶಾಂತಿಸ್ಥಾಪನೆಯನ್ನು ಮಾಡುತ್ತಿದ್ದಾರೆ. ಕಾಂಗ್ರೆಸ ಮಹಾ ಸಂಸ್ಥೆಯು ಲೋಕಕಲ್ಯಾಣವನ್ನು ಮಾಡಲೆಂಬ ಉದ್ದೇಶದಿಂದ ಈ ವಿಧವಾಗಿ ಅನೇಕರು ಯತ್ನಿಸುತ್ತಿದ್ದಾರೆ. ಅಖಿಲಭಾರತ ವೀರಶೈವ ಮಹಾಸಭೆಯೆಂದಮೇಲೆ ಅದು ಒಂದು ವರ್ಗ, ಒಂದು ದೇಶಕ್ಕೆ ಸಂಬಂಧಿಸಿದ್ದಲ್ಲ. ಅದು ಸೇತು ಸೀತಾಚಲಪರ್ಯಂತ ವ್ಯಾಪಕವಾಗಿರುವ ಸಮಸ್ತಲಿಂಗಧಾರಿಗಳಿಗೆ ಸಂಬಂಧಿಸಿದ್ದಾಗಿದೆ. ಈ ಸಭೆಯಿಂದ ಪ್ರತಿಯೊಬ್ಬ ಲಿಂಗಧಾರಿಯೂ ತನ್ನ ಉನ್ನತಿಯನ್ನು ಮಾಡಿಕೊಳ್ಳಲು ಹಕ್ಕುದಾರನಿದ್ದಾನೆ. ಇಂಥಾದ್ದರಲ್ಲಿ ಈ ಮಹಾಸಭೆಯನ್ನು

ಒಂದು ಸಂಕುಚಿತ ಪಕ್ಷಕ್ಕೆಳೆದು ಆ ಪಕ್ಷಕ್ಕನುಕೂಲವಾದ ಕಾರ್ಯಗಳನ್ನೇ ಅಲ್ಲಿ ಮಾಡಿಕೊಳ್ಳಬೇಕೆಂಬುದು ಅತ್ಯಂತತುಚ್ಛವಾದ ಸಂಗತಿಯಾಗಿದೆ. ಪಂಚಾಚಾರ್ಯ ಪ್ರಭಾ ಹಾಗೂ ಬಸವರಾಜ ಪತ್ರಿಕೆಗಳಲ್ಲಿ ಪ್ರಕಟವಾದ ಪ್ರತಿನಿಧಿಗಳ ಲೇಖನಗಳಿಂದ ಮಹಾಸಭೆಯು ಏಕಪಕ್ಷಕ್ಕೆ ಸೇರಿದ್ದೆಂದು ವ್ಯಕ್ಯವಾಗುತ್ತದೆ. ಏಕಪಕ್ಷಕ್ಕೆ ಸೇರಿಕೊಂಡು ಕಾರ್ಯಗಳನ್ನು ಮಾಡಬೇಕೆಂಬುದು ಮಹಾಸಭೆಯ ಉದ್ದೇಶವಲ್ಲ. ಆದರೆ ಪಕ್ಷಭೇದಗಳನ್ನು ಹೋಗಲಾಡಿಸುವದೇ ಅದರ ಪ್ರಧಾನೋದ್ದೇಶವಾಗಿದೆ. ಹೀಗಿದ್ದು ಈ ಸಭೆಯಲ್ಲಿ ಸೇರಿಕೊಂಡು ಕಾರ್ಯಮಾಡುವ ಏಕಪಕ್ಷದವರು ಈ ಮಹಾಸಭೆಗೂ ಪಕ್ಷವನ್ನಂಟಿಸುವದು ಅತ್ಯಂತ ನಿಂದನೀಯವಾದ ಕಾರ್ಯವಾಗಿದೆ. ಮಹಾಸಭೆಯು ಪಕ್ಷಪಾತಗಳಿಗೆ ಆಶ್ರಯವನ್ನು ಕೊಡುತ್ತ ಬಂದರೆ ಸಮಾಜವು ಸಂಘಟಿತವಾಗಿ ಉಳಿಯಲು ಸಾಧ್ಯವೇ ಇಲ್ಲ. ಈಗಿನ ಜಗತ್ತಿನ ವಾತಾವರಣದಲ್ಲಿ ಸ್ವಲ್ಪ ಅಲೆದಾಡಿದರೆ ವೀರಶೈವರಲ್ಲಿ ಎಷ್ಟು ಪಕ್ಷಗಳಿರುವವೆಂಬುದು ಗೊತ್ತಾಗದೆ ಇರದು. (೧) ಆಚಾರ್ಯರ ಪಕ್ಷ. ಇದರಲ್ಲಿಯೂ ೪-೫ ಅಥವಾ ಅದಕ್ಕೆ ಹೆಚ್ಚ್ಯೋ ಪೋಟ ಭೇದಗಳಿರಬೇಕೆಂದು ಕಾಣುತ್ತದೆ. ಇವುಗಳ ವಿವರ:— (೧) ಕೇವಲ ಆಚಾರ್ಯರನ್ನೇ ಒಪ್ಪುವವರು. (೨) ಆಚಾರ್ಯರೊಡನೆ ಶಿವಶರಣರನ್ನೊಪ್ಪುವವರು. (೩) ಕೇವಲ ಪ್ರಾಚೀನಾರ್ಯರನ್ನೇ ಒಪ್ಪುವವರು. (೪) ಆಚಾರ್ಯರನ್ನೂ ವಿರಕ್ತರನ್ನೂ ಸಮನಾಗಿ ಒಪ್ಪುವವರು.

೨. ವಿರಕ್ತರ ಪಕ್ಷ:— ಇದರಲ್ಲಿಯೂ ಅನೇಕ ಭೇದಗಳಿರಬೇಕೆಂದು ತೋರುವದು. (೧) ಕೇವಲ ವಿರಕ್ತರನ್ನೇ ಒಪ್ಪುವವರು. (೨) ವಿರಕ್ತರೊಡನೆ ಆಚಾರ್ಯರನ್ನೂ ಸಮನಾಗಿ ಒಪ್ಪುವವರು.

೩. ನವಮತವಾದಿಗಳ ಪಕ್ಷ:— ಇದರಲ್ಲಿಯೂ ಅನೇಕ ಭೇದಗಳಿರುವಂತೆ ಕಾಣುವುದು. (೧) ವೇದಾಗಮಗಳನ್ನೊಪ್ಪದವರು. (೨) ಹೆಣ್ಣು–ಗಂಡು ಎರಡೇ ರೂಪಗಳನ್ನು ಒಪ್ಪುವವರು. (೩) ಜಂಗಮ (ಅಯ್ಯಗಳ) ಗುಂಪನ್ನೇ ಹಾಳುಮಾಡಬೇಕೆಂಬುವವರು. (೪) ಶಿವಲಿಂಗ ಮುಂತಾದವುಗಳೇನನ್ನೂ ಧರಿಸದೆ ಲಿಂಗಾಯತರೆಂದು ಹೇಳಬೇಕೆನ್ನುವವರು. (೫) ವಿಧಿನಿಷೇಧಗಳಾವವನ್ನೂ ಒಪ್ಪದವರು.

ಇವೆಲ್ಲವೂ ಅತಿ ಸಂಕ್ಷಿಪ್ತವಾಗಿ ವಿವರಿಸಲ್ಪಟ್ಟವೆ. ಇದಲ್ಲದೆ ಇನ್ನೂ ಅನೇಕ ಭೇದಗಳಿರಬಹುದು. ಈ ಅನಂತ ಭೇದಗಳಿಂದ ಕೂಡಿರುವ ವೀರಶೈವರಿಗೆಲ್ಲಾ ಇದೊಂದೇ ಮಹಾಸಭೆಯು. ಶಾಂತಿಯನ್ನುಂಟುಮಾಡಬೇಕಾದರೆ ಕಷ್ಟವಿಲ್ಲದೆ ಇದ್ದೀತೆ? ಈ ವಿಚಾರವು ಎಲ್ಲರಿಗೂ ಗೊತ್ತೇ ಇದೆ. ಆದುದರಿಂದ ಈಗ ಕೆಲವರ್ಷ

ಗಳಿಂದೀಚೆಗೆ ಈ ಮಹಾ ಸಭೆಯು ಹೇಗಾದರೂ ಪ್ರತಿವರ್ಷವೂ ಜರುಗಲಿ ಎಂಬ ಹೇತುವಿನಿಂದ ಈ ಸಭೆಗೆ ರಾಜಕೀಯ ಪ್ರಸಂಗಗಳನ್ನೇ ಹೆಚ್ಚಾಗಿ ಅಂಟಿಸುತ್ತ ಬಂದಿರುವುದು ಪ್ರತ್ಯಕ್ಷವಾಗಿದೆ. ಈ ವರ್ಷ ನಡೆದ ಮಹಾಸಭೆಯೂ ಅಷ್ಟೇ ಆಗಿದೆ. ಹೀಗಿರುವಾಗ ಪಕ್ಷಸಾಧನೆಯನ್ನೇ ಪ್ರಧಾನವಾಗಿಇಟ್ಟುಕೊಂಡಿರುವ ಪ್ರತಿನಿಧಿಗಳು ಮಹಾಸಭೆಯನ್ನು ತಮ್ಮ ತಮ್ಮ ಪಕ್ಷಕ್ಕೆಳೆದು ಆ ರೀತಿ ಪತ್ರಿಕೆಗಳಲ್ಲಿ ಲೇಖನ ಗಳನ್ನು ಬರೆಯುತ್ತಿರುವುದು ದಡ್ಡತನವಲ್ಲದ್ದೆ ಬೇರೆಯಲ್ಲ.

ಮಹಾಸಭೆಯ ಆರಂಭವಾದುದು ವೀರಶೈವ ಮತದ ಸರ್ವಾಂಗೀಣ ಉನ್ನತಿ ಗಾಗಿಯೇ ಎಂಬುದು ಬಹುದಿನಗಳಿಂದ ಸಾಗಿಬಂದ ವಾರ್ತೆಯಾಗಿದೆ. ಆದರೆ ಕೆಲವು ಸಭೆಗಳಿಂದ ಚತುರ್ವಿಧ ಪುರುಷಾರ್ಥಗಳಲ್ಲಿ ಅರ್ಥ-ಕಾಮಗಳೆರಡನ್ನೇ ಆಶ್ರಯಿಸಿ ಹೋಗುವ ಪದ್ಧತಿಯು ರೂಢವಾಗುತ್ತ ಬಂದಿದೆ. ಹೇಗಿದ್ದರೂ ಯಾವ ವಿಧದಿಂದಲಾದರೂ ಒಟ್ಟನ ಮೇಲೆ ಈ ಸಭೆಯಿಂದ ಕೆಲಭಾಗವಾದರೂ ಸಮಾಜೋನ್ನತಿ ಕಾರ್ಯ ನಡೆದರೆ ಸಾಕು. ಇದನ್ನೇ ಎಲ್ಲರೂ ಬಯಸುವುದೊ ಳಿತು. ಈ ಸಭೆಯು ನಮ್ಮ ಪಕ್ಷವನ್ನು ಎತ್ತಿ ಹಿಡಿಯುವದಿಲ್ಲ. ನಮ್ಮ ಪಕ್ಷ ವನ್ನು ಎತ್ತಿಹಿಡಿಯುವದಿಲ್ಲವೆಂದು ವಾದಿಸುವುದಕ್ಕೆ ಯತ್ನಿಸುವುದು ಎಷ್ಟೂ ಸಮಂ ಜಸವಾಗುವುದಿಲ್ಲ. ಕೆಲವರು ಧರ್ಮಕ್ಕೆ ಎಷ್ಟೂ ಆಶ್ರಯವನ್ನು ಈ ಸಭೆಯು ಕೊಡುತ್ತಿಲ್ಲವೆಂದು ಬರೆಯುವರು. ಹೀಗಾಗುವುದೂ ಸಹಜವಾಗಿಯೇ ಇದೆ. ಏಕೆಂದರೆ ಈಸಭೆಯಲ್ಲಿ ಕೇವಲ ಧರ್ಮವಿಚಾರ ಪ್ರತಿಪಾದನೆಗೇನೇ ಸಮಯವನ್ನು ಕೊಡುವುದಾದರೆ ಧರ್ಮ-ಧರ್ಮದಲ್ಲಿಯೇ ಮೇಲು-ಕೀಳೆಂದು ವಾದಿಸುವವರಿಗೂ ಅವಕಾಶ ದೊರೆತು ಕೋಲಾಹಲಕ್ಕೆ ಕಾರಣವಾಗುವುದು. ಈ ಅನೇಕ ಕಾರಣಗ ಳಿಂದ ಮಹಾಸಭೆಯನ್ನು ಅನೇಕರು ಟೀಕಿಸುತ್ತಲಿರುವುದು ಸರಿಯಲ್ಲ. ಪಕ್ಷ ಪ್ರತಿ ಪಕ್ಷಗಳ ಸೋಗನ್ನು ಮಹಾಸಭೆಯಮೇಲೆ ಹಾಕಿ ಹೀಗೆ ಲೇಖಗಳನ್ನು ಬರೆಯುತ್ತ ಹೊರಟರೆ ಸಮಾಜದಲ್ಲಿ ಎಂದಿಗೂ ಶಾಂತಿ ಸ್ಥಾಪನೆಯಾಗಲಾರದು. ಮತ್ತಿಷ್ಟು ವೈಮನಸ್ಯಕ್ಕೆ ಕಾರಣವಾಗಿ ಬೆಳೆಯುತ್ತಿರುವ ಮತವನ್ನು ಕುಗ್ಗಿಸಿದಂತಾಗುವುದು. ಅಲ್ಲದೆ ಪಕ್ಷಗಳ ವೃದ್ಧಿಗೂ ಅವಕಾಶವನ್ನೊಡ್ಡಿದಂತಾಗುವುದು.

ಆದುದರಿಂದ ಉಭಯಪಕ್ಷಗಳ ಪ್ರತಿನಿಧಿಗಳು ಭಿನ್ನಾಭಿಪ್ರಾಯದಿಂದ ಪತ್ರಿಕೆ ಗಳಲ್ಲಿ ಇನ್ನು ಮುಂದೆ ಹೀಗೆ ಲೇಖಗಳನ್ನು ಬರೆಯದೆ ವೀರಶೈವ ಮಹಾಸಭೆ ಯನ್ನು ಯಾವ ಪಕ್ಷಕ್ಕೂ ಸೇರಿಸದೆ ಅದೊಂದನ್ನಾದರೂ ಮಧ್ಯವರ್ತಿಯನ್ನಾಗಿರಿಸಿ ಕೊಂಡು ಸರ್ವರ ಉನ್ನತಿಯನ್ನು ಇದರಿಂದ ಮಾಡಿಕೊಳ್ಳುವುದು ಸರ್ವೋ ತ್ತಮವಾದ ದಾರಿಯಾಗಿದೆ. ಅಖಿಲ ಭಾರತ ವೀರಶೈವ ಮಹಾಸಭೆಗೆ ಏಕಪಕ್ಷದ ಅಪವಾದವನ್ನು ಹೊರಿಸಿ ಅದರಿಂದುಂಟಾಗಬೇಕಾಗಿರುವ ಭಾವೀ ಉನ್ನತಿಗಳಿಗೆ

ಒಂದು ಸಂಕುಚಿತ ಪಕ್ಷಕ್ಕೆಳೆದು ಆ ಪಕ್ಷಕ್ಕನುಕೂಲವಾದ ಕಾರ್ಯಗಳನ್ನೇ ಅಲ್ಲಿ ಮಾಡಿಕೊಳ್ಳಬೇಕೆಂಬುದು ಅತ್ಯಂತತುಚ್ಛವಾದ ಸಂಗತಿಯಾಗಿದೆ. ಪಂಚಾಚಾರ್ಯ ಪ್ರಭಾ ಹಾಗೂ ಬಸವರಾಜ ಪತ್ರಿಕೆಗಳಲ್ಲಿ ಪ್ರಕಟವಾದ ಪ್ರತಿನಿಧಿಗಳ ಲೇಖನಗಳಿಂದ ಮಹಾಸಭೆಯು ಏಕಪಕ್ಷಕ್ಕೆ ಸೇರಿದ್ದೆಂದು ವ್ಯಕ್ತವಾಗುತ್ತದೆ. ಏಕಪಕ್ಷಕ್ಕೆ ಸೇರಿಕೊಂಡು ಕಾರ್ಯಗಳನ್ನು ಮಾಡಬೇಕೆಂಬುದು ಮಹಾಸಭೆಯ ಉದ್ದೇಶವಲ್ಲ. ಆದರೆ ಪಕ್ಷಭೇದಗಳನ್ನು ಹೋಗಲಾಡಿಸುವದೇ ಅದರ ಪ್ರಧಾನೋದ್ದೇಶವಾಗಿದೆ. ಹೀಗಿದ್ದು ಈ ಸಭೆಯಲ್ಲಿ ಸೇರಿಕೊಂಡು ಕಾರ್ಯಮಾಡುವ ಏಕಪಕ್ಷದವರು ಈ ಮಹಾಸಭೆಗೂ ಪಕ್ಷವನ್ನಂಟಿಸುವದು ಅತ್ಯಂತ ನಿಂದನೀಯವಾದ ಕಾರ್ಯವಾಗಿದೆ. ಮಹಾಸಭೆಯು ಪಕ್ಷಪಾತಗಳಿಗೆ ಆಶ್ರಯವನ್ನು ಕೊಡುತ್ತ ಬಂದರೆ ಸಮಾಜವು ಸಂಘಟಿತವಾಗಿ ಉಳಿಯಲು ಸಾಧ್ಯವೇ ಇಲ್ಲ. ಈಗಿನ ಜಗತ್ತಿನ ವಾತಾವರಣದಲ್ಲಿ ಸ್ವಲ್ಪ ಅಲೆದಾಡಿದರೆ ವೀರಶೈವರಲ್ಲಿ ಎಷ್ಟು ಪಕ್ಷಗಳಿರುವವೆಂಬುದು ಗೊತ್ತಾಗದೆ ಇರದು. (೧) ಆಚಾರ್ಯರ ಪಕ್ಷ. ಇದರಲ್ಲಿಯೂ ೪-೫ ಅಥವಾ ಅದಕ್ಕೆ ಹೆಚ್ಚೋ ಪೋಟ ಭೇದಗಳಿರಬೇಕೆಂದು ಕಾಣುತ್ತದೆ. ಇವುಗಳ ವಿವರ:— (೧) ಕೇವಲ ಆಚಾರ್ಯರನ್ನೇ ಒಪ್ಪುವವರು. (೨) ಆಚಾರ್ಯರೊಡನೆ ಶಿವಶರಣರನ್ನೊಪ್ಪುವವರು. (೩) ಕೇವಲ ಪ್ರಾಚೀನಾರ್ಯರನ್ನೇ ಒಪ್ಪುವವರು. (೪) ಆಚಾರ್ಯರನ್ನೂ ವಿರಕ್ತರನ್ನೂ ಸಮನಾಗಿ ಒಪ್ಪುವವರು.

೨. ವಿರಕ್ತರ ಪಕ್ಷ:– ಇದರಲ್ಲಿಯೂ ಅನೇಕ ಭೇದಗಳಿರಬೇಕೆಂದು ತೋರುವದು. (೧) ಕೇವಲ ವಿರಕ್ತರನ್ನೇ ಒಪ್ಪುವವರು. (೨) ವಿರಕ್ತರೊಡನೆ ಆಚಾರ್ಯರನ್ನೂ ಸಮನಾಗಿ ಒಪ್ಪುವವರು.

೩. ನವಮತವಾದಿಗಳ ಪಕ್ಷ:– ಇದರಲ್ಲಿಯೂ ಅನೇಕ ಭೇದಗಳಿರುವಂತೆ ಕಾಣುವುದು. (೧) ವೇದಾಗಮಗಳನ್ನೊಪ್ಪದವರು. (೨) ಹೆಣ್ಣು–ಗಂಡು ಎರಡೇ ರೂಪಗಳನ್ನು ಒಪ್ಪುವವರು. (೩) ಜಂಗಮ (ಅಯ್ಯಗಳ) ಗುಂಪನ್ನೇ ಹಾಳುಮಾಡಬೇಕೆಂಬುವವರು. (೪) ಶಿವಲಿಂಗ ಮುಂತಾದವುಗಳೇನನ್ನೂ ಧರಿಸದೆ ಲಿಂಗಾಯತರೆಂದು ಹೇಳಬೇಕೆನ್ನುವವರು. (೫) ವಿಧಿನಿಷೇಧಗಳಾವವನ್ನೂ ಒಪ್ಪದವರು.

ಇವೆಲ್ಲವೂ ಅತಿ ಸಂಕ್ಷಿಪ್ತವಾಗಿ ವಿವರಿಸಲ್ಪಟ್ಟವೆ. ಇದಲ್ಲದೆ ಇನ್ನೂ ಅನೇಕ ಭೇದಗಳಿರಬಹುದು. ಈ ಅನಂತ ಭೇದಗಳಿಂದ ಕೂಡಿರುವ ವೀರಶೈವರಿಗೆಲ್ಲಾ ಇದೊಂದೇ ಮಹಾಸಭೆಯು. ಶಾಂತಿಯನ್ನುಂಟುಮಾಡಬೇಕಾದರೆ ಕಷ್ಟವಿಲ್ಲದೆ ಇದ್ದೀತೆ? ಈ ವಿಚಾರವು ಎಲ್ಲರಿಗೂ ಗೊತ್ತೇ ಇದೆ. ಆದುದರಿಂದ ಈಗ ಕೆಲವರ್ಷ

ಗಳಿಂದೀಚೆಗೆ ಈ ಮಹಾ ಸಭೆಯು ಹೇಗಾದರೂ ಪ್ರತಿವರ್ಷವೂ ಜರುಗಲಿ ಎಂಬ ಹೇತುಪಸಿಂದ ಈ ಸಭೆಗೆ ರಾಜಕೀಯ ಪ್ರಸಂಗಗಳನ್ನೇ ಹೆಚ್ಚಾಗಿ ಅಂಟಿಸುತ್ತ ಬಂದಿರುವುದು ಪ್ರತ್ಯಕ್ಷವಾಗಿದೆ. ಈ ವರ್ಷ ನಡೆದ ಮಹಾಸಭೆಯೂ ಅಷ್ಟೇ ಆಗಿದೆ. ಹೀಗಿರುವಾಗ ಪಕ್ಷಸಾಧನೆಯನ್ನೇ ಪ್ರಧಾನವಾಗಿಇಟ್ಟುಕೊಂಡಿರುವ ಪ್ರತಿನಿಧಿಗಳು ಮಹಾಸಭೆಯನ್ನು ತಮ್ಮ ತಮ್ಮ ಪಕ್ಷಕ್ಕೆಳೆದು ಆ ರೀತಿ ಪತ್ರಿಕೆಗಳಲ್ಲಿ ಲೇಖನ ಗಳನ್ನು ಬರೆಯುತ್ತಿರುವುದು ಪಡ್ಡತನವಲ್ಲದ್ದೆ ಬೇರೆಯಲ್ಲ.

ಮಹಾಸಭೆಯ ಆರಂಭವಾದುದು ವೀರಶೈವ ಮತದ ಸರ್ವಾಂಗೀಯ ಉನ್ನತಿ ಗಾಗಿಯೇ ಎಂಬುದು ಬಹುದಿನಗಳಿಂದ ಸಾಗಿಬಂದ ವಾರ್ತೆಯಾಗಿದೆ. ಆದರೆ ಕೆಲವು ಸಭೆಗಳಿಂದ ಚತುರ್ವಿಧ ಪುರುಷಾರ್ಥಗಳಲ್ಲಿ ಅರ್ಥ-ಕಾಮಗಳೆರಡನ್ನೇ ಆಶ್ರಯಿಸಿ ಹೋಗುವ ಪದ್ಧತಿಯು ರೂಢವಾಗುತ್ತ ಬಂದಿದೆ. ಹೇಗಿದ್ದರೂ ಯಾವ ವಿಧದಿಂದಲಾದರೂ ಒಟ್ಟಿನ ಮೇಲೆ ಈ ಸಭೆಯಿಂದ ಕೆಲಭಾಗವಾದರೂ ಸಮಾಜೋನ್ನತಿ ಕಾರ್ಯ ನಡೆದರೆ ಸಾಕು. ಇದನ್ನೇ ಎಲ್ಲರೂ ಬಯಸುವುದೊ ಳಿತು. ಈ ಸಭೆಯು ನಮ್ಮ ಪಕ್ಷವನ್ನು ಎತ್ತಿ ಹಿಡಿಯುವದಿಲ್ಲ. ನಮ್ಮ ಪಕ್ಷ ವನ್ನು ಎತ್ತಿಹಿಡಿಯುವದಿಲ್ಲವೆಂದು ವಾದಿಸುವುದಕ್ಕೆ ಯತ್ನಿಸುವುದು ಎಷ್ಟೂ ಸಮಂ ಜಸವಾಗುವುದಿಲ್ಲ. ಕೆಲವರು ಧರ್ಮಕ್ಕೆ ಎಷ್ಟೂ ಆಶ್ರಯವನ್ನು ಈ ಸಭೆಯು ಕೊಡುತ್ತಿಲ್ಲವೆಂದು ಬರೆಯುವರು. ಹೀಗಾಗುವುದೂ ಸಹಜವಾಗಿಯೇ ಇದೆ. ಏಕೆಂದರೆ ಈಸಭೆಯಲ್ಲಿ ಕೇವಲ ಧರ್ಮವಿಚಾರ ಪ್ರತಿಪಾದನೆಗೇನೇ ಸಮಯವನ್ನು ಕೊಡುವುದಾದರೆ ಧರ್ಮ-ಧರ್ಮದಲ್ಲಿಯೇ ಮೇಲು-ಕೀಳೆಂದು ವಾದಿಸುವವರಿಗೂ ಅವಕಾಶ ದೊರೆತು ಕೊಲಾಹಲಕ್ಕೆ ಕಾರಣವಾಗುವುದು. ಈ ಅನೇಕ ಕಾರಣಗ ಳಿಂದ ಮಹಾಸಭೆಯನ್ನು ಅನೇಕರು ಟೀಕಿಸುತ್ತಲಿರುವುದು ಸರಿಯಲ್ಲ. ಪಕ್ಷ ಪ್ರತಿ ಪಕ್ಷಗಳ ಸೋಗನ್ನು ಮಹಾಸಭೆಯಮೇಲೆ ಹಾಕಿ ಹೀಗೆ ಲೇಖಗಳನ್ನು ಬರೆಯುತ್ತ ಹೊರಟರೆ ಸಮಾಜದಲ್ಲಿ ಎಂದಿಗೂ ಶಾಂತಿ ಸ್ಥಾಪನೆಯಾಗಲಾರದು. ಮತ್ತಿಷ್ಟು ವೈಮನಸ್ಯಕ್ಕೆ ಕಾರಣವಾಗಿ ಬೆಳೆಯುತ್ತಿರುವ ಮತವನ್ನು ಕುಗ್ಗಿಸಿದಂತಾಗುವುದು. ಅಲ್ಲದೆ ಪಕ್ಷಗಳ ವೃದ್ಧಿಗೂ ಅವಕಾಶವನ್ನೊಡ್ಡಿದಂತಾಗುವುದು.

ಆದುದರಿಂದ ಉಭಯಪಕ್ಷಗಳ ಪ್ರತಿನಿಧಿಗಳು ಭಿನ್ನಾಭಿಪ್ರಾಯದಿಂದ ಪತ್ರಿಕೆ ಗಳಲ್ಲಿ ಇನ್ನು ಮುಂದೆ ಹೀಗೆ ಲೇಖಗಳನ್ನು ಬರೆಯದೆ ವೀರಶೈವ ಮಹಾಸಭೆ ಯನ್ನು ಯಾವ ಪಕ್ಷಕ್ಕೂ ಸೇರಿಸದೆ ಅದೊಂದನ್ನಾದರೂ ಮಧ್ಯವರ್ತಿಯನ್ನಾಗಿರಿಸಿ ಕೊಂಡು ಸರ್ವರ ಉನ್ನತಿಯನ್ನು ಇದರಿಂದ ಮಾಡಿಕೊಳ್ಳುವುದು ಸರ್ವೋ ತ್ತಮವಾದ ದಾರಿಯಾಗಿದೆ. ಅಖಿಲ ಭಾರತ ವೀರಶೈವ ಮಹಾಸಭೆಗೆ ಏಕಪಕ್ಷದ ಅಪವಾದವನ್ನು ಹೊರಿಸಿ ಅದರಿಂದುಂಟಾಗಬೇಕಾಗಿರುವ ಭಾವೀ ಉನ್ನತಿಗಳಿಗೆ

ನಿಷ್ಣವನ್ನು ತಂದೊಡ್ಡುವುದು ಎಂದಿಗೂ ಸರಿಯಲ್ಲ. ಈಗ ಪ್ರಧಾನ ರಾಜಕೀಯ ಮಹಾಸಂಸ್ಥೆಯಾಗಿರುವ ಕಾಂಗ್ರೆಸ್ಸಿನಲ್ಲಾದರೂ ಎಷ್ಟೋ ಪಾರ್ಟಿಗಳಿವೆ. ಅವೆಲ್ಲಾ ಪಾರ್ಟಿಗಳನ್ನು ಕಾಂಗ್ರೆಸಿನಲ್ಲಿ ತರುವುದಕ್ಕೆ ಅವರೆಷ್ಟೋ ಜನರು ಎಷ್ಟೋ ದಿನಗಳಿಂದ ಯತ್ನಿಸುತ್ತಿರುವರಷ್ಟೇ! ಮುತ್ಸದ್ದಿಗಳು ಅವೆಲ್ಲವನ್ನೂ ತಮ್ಮ ಬುದ್ಧಿ ಕೌಶಲ್ಯದಿಂದ ಬೇಗನೆ ಸರಿಪಡಿಸಿ ಮತ್ತೆಯೂ ಆ ಮಹಾಸಂಸ್ಥೆಯನ್ನು ಸಾರ್ವಜನಿಕ ಉನ್ನತಿಗಾಗಿ ಹೋರಾಡಿಸುತ್ತಿರುವುದು ಪ್ರತ್ಯಕ್ಷವಾಗಿದೆ. ಅದರಂತೆಯೇ ಸಮಾಜ ಪ್ರಮುಖರು ಅದೆಷ್ಟೋ ಪಕ್ಷಪಂಗಡಗಳು ವೀರಶೈವ ಸಮಾಜದಲ್ಲಿ ಬೇರೂರಿದ್ದರೂ ಅವಾವನ್ನೂ ಗಮನಿಸದೆ ಈ ವೀರಶೈವ ಮಹಾಸಭೆಯನ್ನು ಸರ್ವೋನ್ನತಿಗೆ ಸಾಧಕವಾಗುವಂತೆ ಕಾಯ್ದುಕೊಳ್ಳುವುದೇ ಭೂಷಣವು.

ಧಾರ್ಮಿಕೋನ್ನತಿಯು ಈ ಸಭೆಯಿಂದಾಗುವುದಿಲ್ಲವೆಂದು ಕೆಲವರ ಬರಹ. ಧಾರ್ಮಿಕೋನ್ನತಿಯನ್ನು ಮಾಡಿಕೊಳ್ಳುವುದಕ್ಕಾಗಿ ವೀರಶೈವ ಸಮಾಜದಲ್ಲಿ ವರ್ಷಕ್ಕೆ ಅದೆಷ್ಟೋ ವೇಳೆ ಅನೇಕ ಪ್ರಸಂಗಗಳಲ್ಲಿ ಸಭೆಗಳು ನಡೆಯುತ್ತವೆ. ಅವುಗಳ ಮೂಲಕವಾಗಲಿ ಅಥವಾ ಧರ್ಮೋನ್ನತಿ ಸಭಾ ಎಂಬ ನಾಮ ನಿರ್ದೇಶದಿಂದಲಾಗಲಿ ಆ ಕಾರ್ಯವನ್ನು ಮಾಡಿಕೊಳ್ಳಲು ಎಲ್ಲರಿಗೂ ಬರಬಹುದು. ಆದುದರಿಂದ ಉಗ್ರವಾದಿಗಳೂ ಸೌಮ್ಯವಾದಿಗಳೂ ಇತರ ಸಭೆಗಳ ಮುಖಾಂತರವಾಗಿ ಧರ್ಮೋನ್ನತಿಯನ್ನು ಮಾಡಿಕೊಳ್ಳಲು ಸಾಧ್ಯವಿರುವಾಗ ಮಹಾಸಭೆಗೇನೇ ಆ ಎಲ್ಲಾ ಆಕ್ಷೇಪಗಳನ್ನೂ ಆರೋಪಿಸಿ ಮಹಾಸಭೆಯನ್ನು ಒಂದು ಪಕ್ಷದವರ ಸಭೆಯೆಂದು ಅಪಪ್ರಚಾರ ಮಾಡಬಾರದೆಂದು ಈ ಮೂಲಕ ಆಯಾ ಪಕ್ಷಗಳ ಪ್ರತಿನಿಧಿಗಳಲ್ಲಿ ಅರಿಕೆ ಮಾಡಿಕೊಳ್ಳುತ್ತೇವೆ.

ಈ ಲೇಖದಿಂದ ಆ ಉಭಯ ಪಕ್ಷದವರು ಪತ್ರಿಕೆಗಳಲ್ಲಿ ಕಲಹದ ಲೇಖಗಳನ್ನು ಬರೆಯುವದು ಬಿಟ್ಟು ಪಕ್ಷ ಪ್ರತಿ ಪಕ್ಷಗಳ ಏಕೀಕರಣಕ್ಕೆ ಸಹಾಯಕವಾಗುವ ಲೇಖಗಳನ್ನು ಬರೆಯುವದರಲ್ಲಿ ತೊಡಗಬಹುದೆಂದೂ ಸಮಾಜ ಕಲ್ಯಾಣದಲ್ಲಿ ಭಾಗವಹಿಸುವರೆಂದೂ ಭಾವಿಸಲಾಗಿದೆ.

---

## ಬಳ್ಳಾರಿಯ "ಬಳ್ಳೇಶ್ವರ" ಭಕ್ತ ಮಲ್ಲಿನಾಥರ ಕಥೆ

ಪೂರ್ವಕಾಲದಲ್ಲಿ ಭಕ್ತರ ಪ್ರೀತಿಗೆ ಪಾತ್ರನಾದ ಮಲ್ಲಿನಾಥನೆಂಬ ಒಬ್ಬ ಭಕ್ತನಿದ್ದ. ಆತನು ಶಿವನು ಸೇವಿಸಿದಲ್ಲದೆ ಭೋಜನ ಮಾಡುವದಿಲ್ಲವೆಂಬ ನಿಯಮವನ್ನು ಮಾಡಿಕೊಂಡಿದ್ದ. ಒಂದು ಸಮಯದಲ್ಲಿ ಬಂಧುಜನರೊಡನೆ ಪರದೇಶಕ್ಕೆ ಹೊರಟು ಮಾರ್ಗದಲ್ಲಿ ಅರಣ್ಯದ ನಡುವೆ ಇಳಿದುಕೊಂಡಿದ್ದರು. ಅಲ್ಲಿ ಶಿವಾಲಯಮಂ ಕಾಣದೆ ಹೋದ್ದರಿಂದ ಆಹಾರವಿಲ್ಲದೆ ಆದಿನವನ್ನು ಕಳೆದು ಮರುದಿನ ಎದ್ದು ಜೊತೆಯವರ ಸಂಗಡ ಹೊರಟರು. ಆ ದಿನದಲ್ಲಿಯೂ ಅಡವಿಯಲ್ಲಿ ಶಿವಾಲಯವು ಸಿಕ್ಕಲಿಲ್ಲ. ಆದ್ದರಿಂದ ಆತನ ಮಿತ್ರರೂ ಬಂಧುಗಳೂ ಹೆದರಿ "ಅಯ್ಯಾ, ಈತ ಮುದುಕ, ಮೇಲೆ ಕಣ್ಣುನೋವು. ಈ ಕಾಲದಲ್ಲಿ ಬಿಸಿಲು ಉಗ್ರವಾಗಿದೆ. ಈ ದಿನವೂ ಆಹಾರವಿಲ್ಲದಿದ್ದರೆ ಈತನುಳಿಯುವದಿಲ್ಲ" ಎಂದು ಬಗೆದು ಒಂದು ಕಪಟೋಪಾಯವನ್ನು ಹೂಡಿ ಹುಲ್ಲು ಎಲೆಗಳಿಂದ ಒಂದು ಪರ್ಣಕುಟಿಯನ್ನು ರಚಿಸಿ ಅದರಲ್ಲೊಂದು ಬಳ್ಳವಂ ತಲೆ ಕೆಳಗೆ ಮಾಡಿಟ್ಟು ಕಾಡು ಹೂಗಳಿಂದ ಮುಚ್ಚಿ ಬಂದು ಆನಂದದಿಂದ ಆ ಭಕ್ತನಂ ಕುರಿತು "ಮಲ್ಲಿನಾಥಾ, ನಿನ್ನ ಭಾಗ್ಯದಿಂದ ಅರಣ್ಯದಲ್ಲಿ ಶಿವಾಲಯವೊಂದು ದೊರೆತಿದೆ ನೋಡಿರಿ" ಎಂದು ತೋರಿಸಿದರು. ಅಲ್ಲಿ ಆ ಬಳ್ಳವಂ ಶಿವನೆಂದೇ ಭಾವಿಸಿ ವಂದಿಸಿದನು. ಆತನ ಭಾವನೆಯಿಂದ ಆ ಬಳ್ಳವೂ ಲಿಂಗವಾಯಿತು. ಪದ್ಧತಿಯಂತೆ ಎಲ್ಲ ಕಾರ್ಯಗಳೂ ಮುಗಿದು ಊಟವಾದ ಮೇಲೆ ವಿಶ್ರಾಂತಿಗಾಗಿ ಕೂತಿರುವ ಸಮಯದಲ್ಲಿ ಮಲ್ಲಿನಾಥನನ್ನು ಕುರಿತು ಆತನ ಬಂಧುಗಳು ಯಾರೋ ಒಬ್ಬನನ್ನು ಕುರಿತು ಆ ಗುಡಿಸಲಲ್ಲಿಯ ಬಳ್ಳವು ಲಿಂಗವಾಗಿ ಪೂಜೆಹೊಂದಿ ಈತನನ್ನು ಊಟಮಾಡುವಂತೆ ಆಯಿತೆಂದು ಹೇಳಿದರು,

ಆ ವಂಚಕರ ಮಾತಿನಿಂದ ಮಲ್ಲಿನಾಥನು ಕೋಪಗೊಂಡು ಭಕ್ತವತ್ಸಲನಾದ ಸ್ವಾಮಿಯನ್ನು ನೋಡಿರೆಂದು ಶೀಘ್ರದೊಳು ಎದ್ದು ಗುಡಿಸಲಿಗೆ ಬಂದು ದೇವರನ್ನು ತೋರಿಸಿದನು, ಬಳ್ಳವು ಆಕಾರದ ಲಿಂಗವೇ ಆಗಿದ್ದಿತು. ನೋಡಿದವರೆಲ್ಲರೂ ಭೀತಿಯಿಂದ ನಡುಗಿ ಆತನನ್ನು ನಮುಸ್ಕರಿಸಿ ಭಕ್ತಿಯಿಂದ ಅನೇಕ ಬಗೆಯಾಗಿ ಕೊಂಡಾಡಿ ಆತನನ್ನು ಶಾಂತಗೊಳಿಸಿದರು.

ಆಗಿನಿಂದ ಆ ಸ್ಥಳದಲ್ಲಿ (ಬಳ್ಳಾರಿಯಲ್ಲಿ) "ಬಳ್ಳೇಶ್ವರ"ನೆಂಬ ಹೆಸರಿನಿಂದ ಕನ್ನಡದೇಶದ ಭಾಗ್ಯದ ಮೊಳಕೆ ಎಂಬಂತಿದ್ದಾನೆ. ಆ ದಿನ ಮೊದಲ್ಗೊಂಡು ವಿನಯದಿಂದ ಎಲ್ಲರೂ ಮಲ್ಲಿನಾಥಶೆಟ್ಟಿಯನ್ನು ತಂದೆಯಂತೆ, ಗುರುವಿನಂತೆ, ರಾಜನಂತೆ, ದೇವರಂತೆ ಕಂಡರು, ಈ ದೇವರಿಗೆ ಮಲ್ಲೇಶ್ವರನೆಂತಲೂ ಕರೆಯುವರು.

(ಈಬಳ್ಳಾರಿಯ ಬಳ್ಳೇಶ್ವರನ ರಥೋತ್ಸವವು ಅಂತ್ಯತ ಉತ್ಸುಕತೆಯಿಂದ ನಡೆಯುತ್ತಲಿದೆ. ಶ್ರೀಮಾನ್ ವಿರೂಪಾಕ್ಷಪ್ಪನವರು ಜಾನೆಕುಂಟಿ ಇವರು ಧರ್ಮಾಧಿಕಾರಿಗಳಾಗಿ ಕಾರ್ಯವನ್ನು ದಕ್ಷತೆಯಿಂದ ನಿರ್ವಹಿಸುತ್ತಿರುವದು ಸರ್ವ ಸಮಾಜಕ್ಕೂ ಭೂಷಣವಾಗಿದೆ).

---

## "ಸ್ವಾತಂತ್ರ್ಯ"

ಲೇ:— ಹುನಗುಂದ ತಿಪ್ಪಣ್ಣ, ಹೊಸಪೇಟೆ

ಕಂ|| ಭಾರತ ಸ್ವಾತಂತ್ರವಾಗದು |
ವೀರರ! ಪರತಂತ್ರವಳಿಯದಲ್ಲದೆ ಮತ್ತಂ ||
ಮೀರಿದ ಬಡತನ ಪೋಗದು |
ಬಾರದು ಸ್ವಾತಂತ್ರ್ಯ ಮತದ ವೈಷಮ್ಯತೆಯೊಳ್ || ೧ ||

ಹಿಂದುಗಳೊಂದೆಂಬೀಮನ |
ಮುಂದಾಗುವದೊಳಿತು ತಾತ್ತ್ವಿಕಾಚಾರಗಳೊಳ್ ||
ಹಿಂದಾದ ಭಾರತೀಯರ— |
ನೊಂದಾಗಲು ಪೇಳುತಿರ್ಪ ಗಾಂಧಿಯೇ ಧನ್ಯಂ || ೨ ||

ನಮ್ಮಯ ದೇಶದ್ಘೊಳೆಂದುಂ |
ನಮ್ಮಧಿಕಾರಗಳೆ ಬೇಕು ಧರ್ಮದ ನಡೆಯೊಳ್ ||
ಇಮ್ಮನವಾಗಲುಬಾರದು |
ಒಮ್ಮನ ಬಲವೆಂಬ ವೃದ್ಧತತ್ತ್ವವೆ ಬೇಕೈ || ೩ ||

ಹಿರಿಕಿರಿದಿಲ್ಲ ನರತ್ವದಿ |
ಹಿರಿಯರೆ ತಾವ್ ಮಾಡಿಕೊಂಡರಾ ಭೇದಗಳಂ ||
ವರಪಂಚತತ್ತ್ವಗಳ್ ಪುರ |
ಹರನಾಜ್ಞೆಯತೆರದೆ ಜಗದಿ ಸರಿಯಾಗಿಹವೈ || ೪ ||

ಸುಜ್ಞಾನತಾಪಸರುಗಳ್ |
ವಿಜ್ಞಾನವಾದಿ ಬಸವರಂತಹ ಪುತ್ರರ್ ||
ಯಜ್ಞದ ಭಾರತಿಗಿಲ್ಲೆನೆ |
ಸುಜ್ಞಾನಿ "ಸುಭಾಸ" ಬಂದನೌ ಪೊರೆಮಾತೆ! || ೫ ||

---

## ಸಾದರ ಸ್ವೀಕಾರ

೧. ಕರ್ನಾಟಕ ರಘುವಂಶಂ [ಬೆಲೆ ೧-೪-೦] ೨. ಕರ್ನಾಟಕ ಕುಮಾರಸಂಭವಂ [ಬೆಲೆ ೧-೩-೦] ೩. ಶ್ರೀಮತ್ಕರ್ಣಾಟಕ ಭಗವದ್ಗೀತೆ [ಬೆಲೆ ೧-೦-೦] ಗ್ರಂಥಕರ್ತರು:— ಆಸ್ಥಾನ ವಿದ್ವಾನ್ ಪಂ. ವೈ. ನಾಗೇಶಶಾಸ್ತ್ರಿಗಳವರು, ಸರ್ವದರ್ಶನ ತೀರ್ಥ, ಬಳ್ಳಾರಿ.

೧. ಲಾವಣ್ಯವತಿ [ಬೆಲೆ೦-೮-೦] ಸುಶೀಲೆ [ಬೆಲೆ೦-೮-೦] ಕಾದಂಬರಿಗಳು ಗ್ರಂಥಕರ್ತರು:— ಶ್ರೀಮಾನ್ ಯಂ. ಕೆ. ನಾಗಪ್ಪನವರು ಬಿ. ಎ., ಸಬ್‌ರಜಿಸ್ಟ್ರಾರ್ ಹೂವಿನಹಡಗಲಿ.

೧ ಯಮನೂರ ಸಮಾಚಾರವೇನು? [ಬೆಲೆಯಿಲ್ಲ] ೨. ಗೋಮಹಿಮೆ [ಬೆಲೆಯಿಲ್ಲ] ಗ್ರಂಥಕರ್ತರು:— ಶ್ರೀ. ಕಲ್ಲಿನಾಥ ವೀ. ಹಿರೇಮಠ, ದ್ಯಾಂಪುರ.

೧. ಮಂಗಲಗೀತಾವಲಿ [ಬೆಲೆ ೦-೨-೦] ಗಂಥಕರ್ತರು:— ಹೊಸಪೇಟೆ ಸಂಸ್ಕೃತ ಶಾಲಾಧ್ಯಾಪಕರಾದ ಉಜ್ಜಯಿನೀಮಠದ ಪಂ. ವೇ. ಶಂಕರಶಾಸ್ತ್ರಿಗಳವರು.

೧. ಸತ್ಯಶೋಧ— ಲೇಖಕರು ಶ್ರೀಮಾನ್ ಮಹದೇವಪ್ಪ ಬಸವಪ್ಪ ಕುಂಬಾರ್ ನೂಲ್ವಿ, ಶಾಲಾ ಮಾಸ್ತರ, ಹುಬ್ಬಳ್ಳಿ

ಈ ಗ್ರಂಥಗಳನ್ನು ಆದರಪೂರ್ವಕವಾಗಿ ಸ್ವೀಕರಿಸಿದ್ದೇವೆ. ವಿಮರ್ಶೆಯನ್ನು ಪ್ರಕಟಿಸಿದೆ.

ಸಂಪಾದಕ "ಧರ್ಮರಾಜ್ಯ"

# ವೀರಶೈವರು ಶೂದ್ರರಲ್ಲ

[ ಲೇ:— ಪಟ್ಟದಸ್ವಾಮಿ ಹಿರೇಮಠ ವಕೀಲ. ಹುಬ್ಬಳ್ಳಿ ]

## ಲೈಂಗ್ಯ ಪುರಾಣದಲ್ಲಿ

||ವೇದೇಷು ಶಾಸ್ತ್ರಸಂಘೇಷು, ಪುರಾಣೇಷ್ವಾಗಮೇಷು ಚ | ಬ್ರಾಹ್ಮಣಸ್ಯ ಸಮಾಖ್ಯಾತಂ ಲಿಂಗಧಾರಣಮುತ್ತಮಂ || ಯಜುರಪ್ಯಾಹ ಸರ್ವಂ ವೈ ಲಿಂಗಂ ಸ್ಥಾಪಯತೀ ಚ ||

ವೇದಗಳಲ್ಲಿ ಶಾಸ್ತ್ರಗಳಲ್ಲಿ ಪುರಾಣಗಳಲ್ಲಿ ಆಗಮುಗಳಲ್ಲಿ ಬ್ರಾಹ್ಮಣನಿಗೆ ಲಿಂಗ ಧಾರಣವು ಅವಶ್ಯಕವೆಂದು ಹೇಳಲ್ಪಟ್ಟಿದೆ. "ಸರ್ವಲಿಂಗಂ ಸ್ಥಾಪಯತಿ" ಎಂದು ಯಜುರ್ವೇದವು ಸಾರುತ್ತಿರುವದು.

ತೈತ್ತರೀಯೋಪನಿಷತ್ತಿನಲ್ಲಿ ಓಂಗವೋ ಬಾಹ್ಮಣೇ ಧಾರಣಂ ಮೇ ಅಸ್ತ್ಯನಿ ರಾಕರಣಂ || ಎಂದು ಶಿವಲಿಂಗ ಧಾರಣ ಸಂಬಂಧಪಟ್ಟ ಸೂತ್ರದಲ್ಲಿ ಹೇಳಲ್ಪಟ್ಟಿದೆ.

ಇದೇ ಮೇರೆಗೆ ಧರ್ಮಶಾಸ್ತ್ರದ ಶಿಖರದ ಮೇಲಿದ್ದ ವೇದೋಪನಿಷದಾಗಮ ಗಳಲ್ಲಿ ಶಿವಲಿಂಗ ಧಾರಣದ ಬಗ್ಗೆ ಅನೇಕ ಸೂತ್ರಗಳು ಬರೆಯಲ್ಪಟ್ಟದ್ದರಿಂದ ಲಿಂಗಾಂಗಿಗಳಾದ ವೀರಶೈವರು ವೇದಮಾನ್ಯರೆಂದು ಧಾರಾಳವಾಗಿ ಹೇಳಬಹುದು. ಇಷ್ಟೇ ಅಲ್ಲದೆ ವೀರಶೈವರ ಪ್ರಾಣ ಸ್ವರೂಪವಾದ ಇಷ್ಟಲಿಂಗ ಪೂಜಾ ಸಮಯಕ್ಕೆ ವಿಮುಸ್ವೇದದೊಳಗಿನ ಮಂತ್ರಗಳು ಯಜುರ್ವೇದದೊಳಗಿನ ಮಂತ್ರಗಳು ಮತ್ತು ತೈತ್ತರೀಯ ಬ್ರಾಹ್ಮಣ ಮತ್ತು ತೈತ್ತರೀಯಾರಣ್ಯಕ ಮಂತ್ರಗಳು ಸದಾ ಪಠನ ಮಂತ್ರಗಳಾಗಿವೆ.

"ಉತ್ತಿಷ್ಠ ಬ್ರಾಹ್ಮಣಸ್ಪತೆ | ದೇವಯಂತಸ್ತ್ವೇಮಹೆ" ಎಂಬ ಅನೇಕ ಮಂತ್ರಗಳು ವೀರಶೈವರ ಮುಖ್ಯ ಮಂತ್ರಗಳಾಗಿವೆ. ವೀರಶೈವರಲ್ಲಿ ಶಿವಾಚಾ ರ್ಯರು ಶಿವಯೋಗಿಗಳು ಇಷ್ಟಲಿಂಗ ಪೂಜೆಯ ಕಾಲದಲ್ಲಿ ಪ್ರತಿನಿತ್ಯ ಯಜು ರ್ವೇದಿಯ ರುದ್ರಾಧ್ಯಯನ ಮಾಡುವದನ್ನು ನಾವು ಪ್ರತ್ಯಕ್ಷವಾಗಿ ಕಾಣುತ್ತೇವೆ. ಇಷ್ಟೇ ಅಲ್ಲದೆ ವೀರಶೈವರಲ್ಲಿ ಯಾರ ಮನೆಯೊಳಗಾದರೂ ಪಿಶಾಚಬಾಧೆ ಅಥವಾ ಆಗಿಂದಾಗ್ಗೆ ಕಷ್ಟಪ್ರಸಂಗಗಳು ಬರಲಿಕ್ಕೆ ಹತ್ತಿದರೆ ಸರಿಯಾಗಿ ರುದ್ರಾಧ್ಯಯನ

ಮಾಡಿದ ಶಾಸ್ತ್ರಿಗಳನ್ನಾಗಲಿ ಸ್ವಾಮಿಗಳನ್ನಾಗಲಿ ಬಿನ್ನವಿಸಿಕೊಂಡು ತಮ್ಮ ಮನೆಯಲ್ಲಿ ರುದ್ರಾಧ್ಯಯನ ಮಾಡಿಸುತ್ತಾರೆ.

ಈ ರೀತಿಯಾಗಿ ವೀರಶೈವರ ಪ್ರಪಂಚದಲ್ಲೆಲ್ಲ ವೇದಘೋಷವು ತುಂಬಿದ್ದರಿಂದ ವೀರಶೈವರಿಗೆ ವೇದಬಾಹಿರರೆನ್ನಬಹುದೇ! ವೇದೋಪನಿಷತ್ ಸೂತ್ರಗಳ ಮೇಲೆಯೇ ತಮ್ಮ ಧರ್ಮಮಂದಿರವನ್ನು ಕಟ್ಟಿದ ವೀರಶೈವ ಮತಾಚಾರ್ಯರ ಶಿವತತ್ವ ಛತ್ರದಲ್ಲಿ ಬೆಳೆದ ವೀರಶೈವರು ವೇದಾಧ್ಯಯನ ವೇದಪಠಣ ಮಾಡುವದಿಲ್ಲವೇ? ವೀರಶೈವರಲ್ಲಿ ಬೇರೆ ಬೇರೆ ಕಡೆಗೆ ವೈದಿಕ ಪಾಠಶಾಲೆಗಳುಂಟು. ವೀರ ಮಾಹೇಶ್ವರ ವರ್ಗದ ವಟುಗಳು ಮತ್ತು ಶಾಸ್ತ್ರಿಗಳು ವೇದಪಠನ ಮಾಡುವದನ್ನು ಈಗ್ಯೂ ನಾವು ಪ್ರತ್ಯಕ್ಷ ಕೇಳುತ್ತೇವೆ. ವೀರಶೈವರು ವೇದಪಠಣವು ಒಳ್ಳೇ ಪವಿತ್ರವಾದದ್ದೆಂದು ಮತ್ತು ಅತುಲ ಫಲಪ್ರದಾಯಕವೆಂದು ಈಗಲೂ ಭಾವಿಸುತ್ತಾರೆ. ಆದ್ದರಿಂದ ವೀರಶೈವ ಧರ್ಮದ ಬೀಜವು ವೇದಗಳಲ್ಲಿದ್ದದರಿಂದ ವೀರಶೈವರು ಸರ್ವರೀತಿಯಿಂದ ವೇದಾಧ್ಯಯನ ಮಾಡಲಿಕ್ಕೆ ಸಮರ್ಥರೂ ಮತ್ತು ಅಧಿಕಾರಿಗಳೂ ಇದ್ದದರಿಂದ ಶೂದ್ರಶ್ರೇಣಿಯಲ್ಲಿ ಸರ್ವಥಾ ಬರಲಾರರು.

## ವೀರಶೈವರಿಗೆ ಷಟ್ಕರ್ಮಗಳುಂಟು;

## ಶೂದ್ರರಿಗೆ ಇರುವದಿಲ್ಲಾ

ವೀರಶೈವರಲ್ಲಿ ಮೋಕ್ಷ ಸಾಧನೆಗಾಗಿ ಮತ್ತು ಜೀವನದ ಸಾಧನೆಗಾಗಿ ಆಚರಿಸತಕ್ಕ ಕರ್ಮಗಳು ಇವೆ. ಆಧ್ಯಾತ್ಮಿಕ ಬಲವನ್ನು ಬೆಳಸಿ ಶಿವಪರಿಜ್ಞಾನಪರನಾಗಿ ಅದರಲ್ಲಿಯೇ ಆನಂದವನ್ನು ಹೊಂದಿ ಸದಾಶಿವಮಯನಾಗಿ ಬೆಳಗುವಂತೆ ಮಾಡುವ ಜ್ಞಾನಪೂರಿತ ಕರ್ಮಗಳು ಮೋಕ್ಷ ಸಾಧನಗಳಾಗಿ ಪರಿಣಮಿಸುತ್ತವೆ. ಮತ್ತು ಶಿವನಲ್ಲಿ ರತಿಯನ್ನು ಬೆಳಸಿ ಮೆರೆಯುವ ಶಿವಭಕ್ತನ ಲೌಕಿಕ ವೃತ್ತಿಯು ಕೂಡ ನಿರ್ಮಾಲ್ಯದಿಂದ ಕೂಡಿರುವಂತೆ ಆಚರಣೆಯನ್ನು ಇಟ್ಟುಕೊಳ್ಳುವದು ಜೀವನದ ಸಾಧನವಾಗಿಯೂ ಇರುತ್ತದೆ. ಮೋಕ್ಷ ಸಾಧಕ ಕರ್ಮಗಳು ಮೂರು:-ಯಜನ, ಅಧ್ಯಾಪನ, ಪ್ರತಿಗ್ರಹ ಈ ಪ್ರಕಾರವಾಗಿ ಒಟ್ಟು ಆರು ಕರ್ಮಗಳು ವೀರಶೈವ ಅಪ್ರಾಕೃತ ಬ್ರಾಹ್ಮಣರು ಆಚರಿಸತಕ್ಕ ಪ್ರಧಾನ ಕರ್ಮಗಳೆಂದು ಶಿವಾಗಮಗಳು ಪ್ರತಿಪಾದಿಸುತ್ತವೆ. ಮೋಕ್ಷ ಸಾಧಕ ಕರ್ಮಗಳು ಕೇವಲ ಭಕ್ತಿ, ಜ್ಞಾನ, ವೈರಾಗ್ಯಗಳೆಂಬ ಮೂರು ವಿಭಾಗಗಳಿಂದ ಕೂಡಿದವುಗಳಿದ್ದು, ಯಜನ, ಅಧ್ಯಯನ ಮತ್ತು ದಾನ, ಇವುಗಳನ್ನೇ ಸೂಚಿಸುತ್ತವೆ.

ವೀರಶೈವ ಅಪ್ರಾಕೃತ ಬ್ರಾಹ್ಮಣರು (೧) ಶಿವಾರ್ಚನೆಯನ್ನು ಮಾಡುವದು. (೨)ಋಗ್ವೇದಾದಿ ವೇದಗಳನ್ನು ಪಠಣಮಾಡುವದು ಮುಂತಾದ ಕರ್ಮಗಳನ್ನು ಆಚರಿಸಲು ಧರ್ಮಶಾಸ್ತ್ರಶಾಸನವಿದೆ. ಮತ್ತು ಅದರ ಜೀವನದ ಸಾಹಿತ್ಯಕ್ಕಾಗಿ ಈ ತರದಿಂದ ಶಿವಾರ್ಚನೆ ಮಾಡಿಸುವದು, ಮತ್ತು ಯೋಗ್ಯರಿಂದ ದಾನ ತೆಗೆದುಕೊಳ್ಳುವದು, ಇವೇ ಕರ್ಮಗಳನ್ನು ಆಚರಿಸುತ್ತಾರೆ. ಶೂದ್ರರು ಮೇಲ್ಕಾಣಿಸಿದ ಷಟ್ಕರ್ಮಗಳನ್ನು ಆಚರಿಸಲಿಕ್ಕೆ ಅರ್ಹರಿಲ್ಲದ್ದರಿಂದ ಧರ್ಮಶಾಸ್ತ್ರಗಳು ಶೂದ್ರರಿಗೆ ಇಂಥ ಯಾವ ಕರ್ಮವಿಧಿಯನ್ನು ನಿಯಮಿಸಿಕೊಟ್ಟಿರುವದಿಲ್ಲ. ಆದ್ದರಿಂದ ವೀರಶೈವರು ಶೂದ್ರಶ್ರೇಣಿಯಲ್ಲಿ ಎಂದೂ ಬರಲಾರರು.

## ವೀರಶೈವರಿಗೆ ದಶಕರ್ಮಗಳುಂಟು;
## ಶೂದ್ರರಿಗೆ ಇರುವದಿಲ್ಲಾ

ಮೇಲೆ ಕಾಣಿಸಿದ ಷಟ್ಕರ್ಮಗಳು ವೀರಶೈವ ಅಪ್ರಾಕೃತ ಬ್ರಾಹ್ಮಣರಿಗೆ ಪ್ರಧಾನಕರ್ಮಗಳೆಂದು ಶಿವಾಗಮಗಳಲ್ಲಿ ಪ್ರತಿಪಾದಿಸಲ್ಪಟ್ಟವೆ. ಇವು ಉಳಿದ ಮತೀಯರಿಂದ ಆಚರಿಸಲ್ಪಡುವ ಷಟ್ಕರ್ಮಗಳಿಗೆ ಬೇರೆಯಾಗಿವೆ. ಇವಲ್ಲದೆ ವೀರಶೈವರಿಗೆ ದಶಕರ್ಮ ಪದ್ಧತಿಯೂ ಮಾನ್ಯವಾಗಿದ್ದು ಈ ವರೆಗೆ ರೂಢಿಯಲ್ಲಿಯೂ ಉಂಟು. ದಶಕರ್ಮಗಳೆಂದರೆ ಗರ್ಭಾದಾನ, ಪುಂಸವನ, ಸೀಮಂತ, ಜಾತಕರ್ಮ, ನಾಮಕರಣ, ಅನ್ನಪ್ರಾಶನ, ಚೌಲ, ದೀಕ್ಷಾ, ವಿವಾಹ ಅಂತೇಷ್ಟಿ ಈ ಪ್ರಕಾರವಾಗಿರುತ್ತವೆ. ವೀರಶೈವ ಧರ್ಮಶಾಸ್ತ್ರಗಳ ಶಾಸನದ ಮೇರೆಗೆ ವಿಧಿವತ್ತಾಗಿ ದಶಕರ್ಮ ಪದ್ಧತಿಯು ನಮ್ಮ ಸಮಾಜದಲ್ಲಿ ನಡಿಯುತ್ತಾ ಬಂದಿದೆಯಷ್ಟೇ! ಈ ರೀತಿಯಾಗಿ ಶಾಸನಬದ್ಧ ನಡವಳಿಕೆಯಿಂದ ವೀರಶೈವರು ಕೂಡಿದಾಗ್ಯೂ ನಮ್ಮೀ ಸಮಾಜದ ಹತಭಾಗ್ಯದಿಂದ ಜಗತ್ತಿನಲ್ಲಿಯ ಧರ್ಮಶಾಸ್ತ್ರಗಳಲ್ಲಿ ಅಗ್ರಸ್ಥಾನವನ್ನು ಹೊಂದುವ ತತ್ವಗಳ ನಿಧಿಯು ಅಧಃಪಾತಕ್ಕಿಳಿಸಲ್ಪಟ್ಟಿದೆ.

ಶೂದ್ರ ಕರ್ಮಗಳೆತ್ತ? ವೀರಶೈವ ಪರಿಪೂತ ಕರ್ಮಗಳೆತ್ತ? ವೀರಶೈವರು ತಮ್ಮ ಆಚಾರ ವಿಚಾರಗಳಲ್ಲಿಯೂ ಶಿವಸ್ವರೂಪವನ್ನು ಆಹ್ವಾನಿಸಿ ನಿತ್ಯ ಕರ್ಮಗಳೆಲ್ಲ ಶಿವಮಯವಾಗುವಂಥ ಆಚರಣೆಗಳನ್ನು ಕಲ್ಪಿಸುವ ಸಿದ್ಧಾಂತವು ವೀರಶೈವ ಮತದಲ್ಲಿ ಅದೆ. ಇಂಥ ಸಿದ್ಧಾಂತದ ರಹಸ್ಯವನ್ನು ವಿಚಾರಿಸುವ ಗೊಡವೆಗೇನೇ ಹೋಗದೆ ಕೇವಲ ಪರಮತೀಯ ಧರ್ಮಗ್ರಂಥಗಳ ಮೇಲಿಂದ ವೀರಶೈವರ ಆಚಾರ ವಿಚಾರಗಳನ್ನು ಕಲ್ಪಿಸುವದು ಕೇವಲ ಅನ್ಯಾಯವಾದದ್ದು, ಮತ್ತು ಮಾನವ ಬುದ್ಧಿಗೆ ವಿರೋಧವಾದದ್ದು ಆಗಿದೆ.

## ವೀರಶೈವರ ಮೇಲೆ ಬಂದ ಶೂದ್ರತ್ವದ ದುರಾಪವಾದವು ನಿರಾಧಾರವಾದದ್ದು

ವೀರಶೈವರ ಮತ್ತು ಶೂದ್ರರ ನಡುವಿನ ಭಿನ್ನಭೇದಗಳು ಮತ್ತು ಆಚಾರ ವಿಚಾರಗಳು ಎಷ್ಟು ಪರಸ್ಪರ ವಿರೋಧವಿರುತ್ತವೆಂಬುದು ಮೇಲ್ಕಾಣಿಸಿದ ಕೆಲವು ಉದಾಹರಣೆಗಳ ಮೇಲಿಂದ ಸ್ಪಷ್ಟವಾಗಿ ತಿಳಿಯುವದು. ಈ ಪ್ರಕಾರದ ದುರಪವಾದಕ್ಕೆ ವೀರಶೈವರಲ್ಲಿಯ ವಿದ್ಯಾಹೀನತೆ ಆರ್ಥಿಕದುಸ್ಥಿತಿ ಮತ್ತು ಧರ್ಮ ಶಾಸ್ತ್ರ ಜ್ಞಾನದ ಅಭಾವ ಸಾಮಾಜಿಕ ತತ್ವಗಳ ನಿರಾಕರಣೆ ಇವೇ ಮೊದಲಾದವುಗಳು ಸಹಾಯಕಾರಿಯಾಗಿರಬೇಕೆಂದು ತಿಳಿಯುತ್ತದೆ. ವೀರಶೈವರಲ್ಲಿ ಕ್ರಮೇಣ ಶಿಕ್ಷಣವು ಲಯವಾಗುತ್ತಾ ಉದರ ಪೋಷಕ ವ್ಯವಹಾರಗಳನ್ನು ಸಾಗಿಸುವದು ಸುರುವಾಯಿತು. ಈಗಲಾದರೂ ಇದೇ ಪದ್ಧತಿಯು ಕೆಲ ಕೆಲವು ಚಿಕ್ಕಹಳ್ಳಿಗಳಲ್ಲಿ ವೀರಶೈವ ಬೇಸಾಯಗಾರರಲ್ಲಿ ಉಳಿದಿದೆ.

---

॥ ಶ್ರೀಶೈಲಮಲ್ಲಿಕಾರ್ಜುನ ಪ್ರಸೀದತು ॥

## ಶ್ರೀಶೈಲಕ್ಷೇತ್ರದಲ್ಲಿ ಚಿಕ್ಕಮಣ್ಣೂರು ಸ್ವಾಮಿಗಳವರ ಅಧ್ಯಕ್ಷತೆಯಲ್ಲಿ ಧಾರ್ಮಿಕ ಸಭಾ

ಸಮಾಜ ಬಂಧುಗಳೇ— ಭೂಕೈಲಾಸವಾದ ಶ್ರೀಶೈಲ ಮಹಾಕ್ಷೇತ್ರದಲ್ಲಿ ಶ್ರೀ. ಷ. ಬ್ರ. ರೇವಣಶಿದ್ಧ ಶಿವಾಚಾರ್ಯ ಪಟ್ಟದಸ್ವಾಮಿಗಳು ಬೃಹನ್ಮಠ ಚಿಕ್ಕಮಣ್ಣೂರ ಜಿಲ್ಹಾ ಧಾರವಾಡ ಇವರ ಅಧ್ಯಕ್ಷತೆಯಲ್ಲಿ ತಾ. ೧೮-೩-೫೪ನೇ ಶನಿವಾರ ಸಾಯಂಕಾಲ ೪ ಘಂಟೆ ಸಮಯದಲ್ಲಿ ಶ್ರೀಮಲ್ಲಿಕಾರ್ಜುನ ಸ್ವಾಮಿ ಮುಖೋದ್ಮಂಟಪದಲ್ಲಿ ಅಧ್ಯಕ್ಷರನ್ನು ಆರಿಸಲಾಯ್ತು. ಇದಕ್ಕೆ ಅನುಮೋದಕರು ರೋಣ ತಾಲೂಕ ಪೈಕಿ ಸೂಡಿ ಗ್ರಾಮದ ಷ. ಬ್ರ. ಶ್ರೀ. ಉಮಾಪತಿ ಶಿವಾಚಾರ್ಯ ಪಟ್ಟದಸ್ವಾಮಿಗಳವರು ಜತ್ತಿ ಹೀರೇಮಠ ಇವರು ಅಧ್ಯಕ್ಷರಾಗಲು ಅನುಮೋದನ ಕೊಟ್ಟರು. ಅಧ್ಯಕ್ಷರು ಸರ್ವಮತೀಯರು ಒಪ್ಪುವಂತೆ ಅನೇಕ ಸಪ್ರಮಾಣೀಭೂತವಾದ ವಿಷಯಗಳನ್ನು ತೆಗೆದುಕೊಂಡು ಅನ್ನದಾನ ಹಾಗೂ ವಿದ್ಯಾದಾನ ಈ ವಿಷಯಗಳನ್ನೇ ಹೆಡ್ಡಿಂಗಾಗಿಟ್ಟುಕೊಂಡು ಅನ್ನದಾನ ಮಾದಾನಂ|

ಯಾವಜ್ಜೀವಂಚ ಏದ್ಯಯಾ | ಈ ವಿಷಯಗಳನ್ನೇ ತೆಗೆದುಕೊಂಡು ಶ್ರೀಶೈಲ ಯಾತ್ರಾಕ್ಕೆ ಬಂದಿದ್ದ ಮಹಾಜನರು ತಲೆದೂಗುವಂತೆ ವ್ಯಾಖ್ಯಾನ ಮಾಡಿದಬಳಿಕ ಈ ಕೆಳಗೆ ಕಂಡಂತೆ ಠರಾವು ನಿರ್ಣಯವಾಯಿತು.

೧. ಶ್ರೀಶೈಲಯಾತ್ರಾಕ್ಕೆ ಬರುವ ವೀರಶೈವರು ಹಾಗೂ ಸಾಧುಸತ್ಪುರುಷ ರಿಗೂ (ಅನ್ನ) ದಾಸೋಹ ಮಾಡಬೇಕಾಗಿಯೂ,

೨. ಶ್ರೀಶೈಲ ಮಹಾಮಲ್ಲಿಕಾರ್ಜುನ ಮೂರ್ತಿಗೆ ವೈದಿಕ ಸಿದ್ಧಾಂತರೀತ್ಯ ವೇದಾಧ್ಯಯನ ಹಾಗೂ ಶ್ರೀರುದ್ರಾಭಿಷೇಕ ಕ್ರಮಪ್ರಕಾರ ಮಾಡಲಿಕ್ಕೆ ಆತ್ಮಕೂರರಲ್ಲಿ ಒಂದು ವೈದಿಕ ಪಾಠಶಾಲೆಯನ್ನು ಸ್ಥಾಪಿಸಬೇಕು.

ಈ ಕಾರ್ಯಕಲಾಪಗಳ ಬಗ್ಗೆ

೧. ಪ್ರೆಸಿಡೆಂಟ ಶ್ರೀ. ವೇ. ಬಸವಯ್ಯಸ್ವಾಮಿ ಶ್ರೀಶೈಲ ಕ್ಷೇತ್ರ ಇವರನ್ನು ಠರಾಯಿಸಿರುತ್ತೆ.

೨. ಶ್ರೀ. ವೇ. ಚನ್ನಂಜಯ್ಯನವರು ವೀರಭಿಕ್ಷಾವರ್ತಿಮಠ ಇವರನ್ನು ಸರ್ವಾಧಿಕಾರಿಗಳನ್ನಾಗಿ ಮಾಡಿರುತ್ತೆ.

ಈ ಕಾರ್ಯದ ಬಗ್ಗೆ ಆತ್ಮಕೂರಲ್ಲಿ ಹೆಡ್ಡಾಫೀಸ ಮಾಡಬೇಕೆಂದು ನಿರ್ಣಯವಾಯಿತು.

ಕೆಲದಿನಗಳು ಕಳೆದ ನಂತರ ಇನ್ನೊಂದು ಯೋಗ್ಯ ಆಲೋಚನಾ ಕಮೀಟಿಯನ್ನು ತೆಗೆದು ಮೆಂಬರರನ್ನೂ ಹಾಗೂ ಪೋಷಕರನ್ನೂ ಸೆಕ್ರೆಟರಿಯವರನ್ನೂ ಠರಾಯಿಸಿ ಮುಂದಿನ ಯೋಜತ್ವವನ್ನು ಕೈಕೊಳ್ಳುವುದಾಗುತ್ತೆಂದು ತಿಳಿಸುವ,

ಸರ್ವಾಧಿಕಾರಿ: ಚನ್ನಂಜಪ್ಪಯ್ಯ ವೀರಭಿಕ್ಷಾವರ್ತಿಮಠ ಶ್ರೀಶೈಲಕ್ಷೇತ್ರ

---

# "ಶ್ರೀವಾಗೀಶ ಶಿವಾಚಾರ್ಯರ ವಕ್ತವ್ಯ" * *

ಈ ಸಾರೆ ನಡೆದ ವೀರಶೈವ ಮಹಾಸಭೆಯ ೧೩ನೆಯ ಅಧಿವೇಶನದಲ್ಲಿ ಎಲ್ಲರಂತೆ ನಾನೂ ಭಾಗವಹಿಸಿದ್ದೆನು. ನನ್ನ ವ್ಯಕ್ತಿತ್ವವನ್ನು ಪೂರ್ಣವಾಗಿ ಅರಿಯದ ಯಾರೋ ಒಬ್ಬ ಪ್ರತಿನಿಧಿಗಳು ನನಗೆ "ಪಂಚಾಚಾರ್ಯ ಪಕ್ಷದ ಅಧ್ವರ್ಯುಗಳಾದ ಮುದೇನೂರು ಮಠದವರು" ಎಂಬ ಮಹೋನ್ನತವಾದ ಪ್ರಶಸ್ತಿಯನ್ನು ದಯಪಾಲಿಸಿದ್ದಾರೆ. ಇಷ್ಟೊಂದು ಶ್ರಮಪಟ್ಟು ಈ ಟೈಟಲನ್ನು ದಯಪಾಲಿಸಿದ್ದಕ್ಕಾಗಿ ಸದರಿಯವರ ಆಭಾರವನ್ನು ಮನ್ನಿಸುವುದು ನನ್ನ ಪ್ರಧಾನಕಾರ್ಯವಾಗಿದೆ.

ಕೇವಲ ವೀರಶೈವ ಮಹಾಸಭೆಯಲ್ಲಿ ನನ್ನನ್ನು ಕಂಡ ಮಾತ್ರಕ್ಕೇನೇ ಇಂತಹ ಘನವಾದ ಪ್ರಶಸ್ತಿಯನ್ನು ಇವರು ದಯಪಾಲಿಸಿರುವರೆಂದ ಮೇಲೆ ಇವರ ಹೃದಯವು ಎಷ್ಟು ಉದಾರವಾಗಿದೆ ಎಂಬುದು ಒಡೆದು ತೋರುವುದು. ಇಂತಹ ಉದಾರ ಭಾವದ ಮಹನೀಯರು ಇತ್ತಲಾಗಿ ಸಮಾಜದಲ್ಲಿ ಹೆಚ್ಚಾಗುತ್ತ ನಡೆದಿರುವುದು ಸಮಾಜದ ಸೌಭಾಗ್ಯವೆಂದು ಬೇರೆ ಹೇಳಬೇಕಾಗಿಲ್ಲ. ಜಗದೀಶ್ವರನು ಸದರಿಯವರಿಗೆ ಉತ್ತರೋತ್ತರ ಮಂಗಲಗಳನ್ನಿತ್ತು ಕಾಪಾಡಲೆಂದು ಹಾರೈಸುವೆನು !

— ವರಕವಿ ಶ್ರೀವಾಗೀಶ

ಸುಜ್ಞಾನ

ವರಕವಿ ಶ್ರೀವಾಗೀಶ

---

ಬಾ! ಬೀರು, ಕರ್ಮಾನುಸಾರಿ ನೀ ಸುಜ್ಞಾನ!
ನಾ ಭೀರು, ಎಂಬುದರ ಚಿಂತೆಯೇಕೆ ?
ಆ ಭಾರಿ ಕರಿಮೋಡ, ಸುರಿವಾಗ ಹಿರಿಕಿರಿಯ,
ಭೂಭಾರಗಳ ಗಣನೆ ಮಾಡುತಿಹುದೆ? ॥ ೧ ॥

ಮರೆಯೊಳೋ, ತೆರೆಯೊಳೋ, ಗಿರಿಯೊಳೋ ಅಡಗಿರ್ದ
ಪರಿಯನಾರವಿಯುರಿದು ಮೂಡುತಿಹನೆ ?
ಹರಿದೋಡುತಿಹುದೆಂತು ? ಕಗ್ಗತ್ತಲೆಯು ಜವದೆ
ಅರಿದು ನೀನಿದನು ಸುರುವರೊಳಗುದಿಸು ! ॥ ೨ ॥

ನಿನ್ನ ರೂಪವ ಕಾಣಬಯಸಿಯಾ ಕಾಣದವ
ರುನ್ನತೋನ್ನತನೆಂದು ಪೊಗಳಿರುವರೆ ?
ಸುಣ್ಣ ಮನೆಕೊಳೆಯ ಕಳೆವುದು, ಕಳೆಯ ತರುವುದೆನೆ
ಬಣ್ಣವಿದು ನಿನಗೆ ಸರಿ, ಎಂದಿರುವರೆ ? ॥ ೩ ॥

ಮನವೆ ಮಂದಿರವಾಗಲೆನಿತು ನೀನದರೊಳಿಹೆ ?
ಘನದೋಷಭಿತ್ತಿಗಳು ಸುತ್ತಿರುವವು,
ಅನುದಿನದಿ ತೊಳೆತೊಳೆದು ಸಿಂಗರಿಸಿ ಬೇಸತ್ತೆ,
ಮಿನುಗು ನೀನೊಮ್ಮೆ ಎಂತಹುದೊ ಕಾಂಬೆ ॥ ೪ ॥

ಗಾಳಿಯನೆ ಕೂಳನಾಗಿಸಿಕೊಂಡು ತಪಿಸಿದರು,
ಬಾಳಲೋಚನನ ಭಜಿಸಿದರು ಬಿಡದೆ,
ಹೇಳಿವರು ಕೇಳಿದರು ಶಾಸ್ತ್ರದೊಳಗಣ ಕೀಲ,
ಮೇಳಿಲ್ಲ ನೀನೋರ್ವನಿಲ್ಲದಿರಲು ॥ ೫ ॥

ಇವರು ಸಂಸಾರಿಗಳು ಇವರು ಯೋಗಿಗಳೆಂಬ
ಕುವಿಚಾರ ನಿನಗಿಲ್ಲ ಪರಿಭಾವಿಸೆ,
ಅವರವರ ಕರ್ಮಪಾಕವನರಿದು ನೀನುದಿಸು
ಪವಧಿಯನು ವಾಗೀಶಗಾಗಿ ಸವೆಸು ! ॥ ೬ ॥

# ಗ್ರಂಥವಿಮರ್ಶೆ

"ಕರ್ನಾಟಕ ರಘುವಂಶ" ಬೆಲೆ ೧-೪-೦ ಕವಿಗಳು ಆಸ್ಥಾನ ವಿದ್ವಾನ್ ಪಂ|| ವೈ. ನಾಗೇಶ ಶಾಸ್ತ್ರಿಗಳವರು ಸರ್ವದರ್ಶನತೀರ್ಥ, ಬಳ್ಳಾರಿ.

ಈ ಕಾವ್ಯವು ಸರ್ವೋತ್ಕೃಷ್ಟವಾಗಿ ರಚಿತವಾಗಿದೆ ಎಂಬುದು ಗ್ರಂಥಾಂತರ್ಗತವಾದ ದೊಡ್ಡ ದೊಡ್ಡ ವಿದ್ವಾಂಸರ ಸದಭಿಪ್ರಾಯಗಳಿಂದಲೂ ಕರ್ನಾಟಕ ಸಿಂಹಾಸನಾಧೀಶ್ವರರಾದ ಮೈಸೂರು ಶ್ರೀಮನ್ಮಹಾರಾಜರವರು ಈ ಗ್ರಂಥವನ್ನು ಅತ್ಯಾನಂದದಿಂದ ಸ್ವೀಕರಿಸಿರುವುದರಿಂದಲೂ ಸುವ್ಯಕ್ತವಾಗಿಯೇ ಇದೆ. ಅದರೂ ಈ ಗ್ರಂಥದ ಯೋಗ್ಯತೆಯನ್ನು ಕುರಿತು ನೋಡಿದವರಾರೂ ಬಣ್ಣಿಸದೆ ಬಿಡಲಾರರು. ಕಾವ್ಯದ ಸರಣಿಯು ಸುಲಭವೆಂದು ಕಂಡರೂ ಉದ್ದಾಮ ಕವಿಗಳ ಕೃತಿಯಲ್ಲಿಯೇ ಸೇರ್ಪಡೆಯಾಗುವುದು. ಕಾಲಿದಾಸ ಮಹಾಕವಿಗಳ ಪ್ರಾಸಾದಿಕ ಗುಣವು ಈ ಕನ್ನಡ ರಘುವಂಶದಲ್ಲಿಯೂ ಪೂರ್ಣವಾಗಿ ಬಂದಿದೆ. ಲಕ್ಷ್ಮೀಶ ಕವಿಯ ಜೈಮಿನಿ ಭಾರತವನ್ನೋದಿದವರು ಆ ರಚನೆಯೊಡನೆ ಇದನ್ನೂ ಸರಿಯಾಗಿ ತೂಗಬಹುದು. ನೂತನವಾಗಿ ಕವಿಗಳಾಗಬೇಕೆನ್ನುವವರೆಲ್ಲರೂ ಇಂತಹ ಪ್ರಾಮಾಣಿಕ ಕೃತಿಗಳನ್ನೋದಿ ತಮ್ಮ ಕವಿತಾ ಮಾರ್ಗವನ್ನು ಸರಿಪಡಿಸಿಕೊಳ್ಳುವುದು ಉತ್ತಮ ಮಾರ್ಗ.

"ಕರ್ನಾಟಕ ಕುಮಾರ ಸಂಭವ" ಬೆಲೆ ೧-೩-೦ ಕವಿಗಳು ಮೇಲಿನವರೇ. ರಚನೆಯು ರಘುವಂಶಕ್ಕಿಂತಲೂ ಪ್ರೌಢವಾಗಿರುವುದರಿಂದ ಭಾವಗ್ರಹಣಕ್ಕೆ ಪಾಂಡಿತ್ಯ ಬೇಕಾಗುವುದು. ಕವಿಗಳು ರಚಿಸಿರುವ ಉದ್ದೇಶವೂ ಹಾಗೆಯೇ ಇದ್ದಂತೆ ತೋರುವುದು. ಶಾಲಾಪಠ್ಯ ಗ್ರಂಥವಾಗಬೇಕೆಂದು ಮನದಂದು ಬರೆದಿರುವಾಗ ಈ ವಿಧವಾದ ಪ್ರೌಢ ಸರಿಣಿಯೇ ಈ ಗ್ರಂಥಕ್ಕೆ ಸಲ್ಲತಕ್ಕುದು ಭಾಷೆಯು ಮುದ್ದಾಗಿದೆ. ನಡಿಗೆ ಮನೋಹರವಾಗಿದೆ; ಕವಿಗಳ ಕವಿತಾ ಪ್ರೌಢಿಮೆಯು ವರ್ಣನೀಯವಾಗಿದೆ. ರಘುವಂಶ-ಕುಮಾರ ಸಂಭವಗಳಂತಹ ಉಚ್ಚ ವರ್ಗದ ಸಂಸ್ಕೃತ ಕಾವ್ಯಗಳನ್ನು ಅನುವಾದಿಸುವ ಕಾರ್ಯವು ಯಾವ ಕವಿಗಳಿಗೂ ಕಷ್ಟವೇ ಆದರೂ ಆ ವಿಚಾರದಲ್ಲಿ ಸದರಿಯವರು ಘುಯಶವನ್ನು ಸಂಪಾದಿಸಿರುವರು. ಇನ್ನಿವರು ಸ್ವತಂತ್ರವಾಗಿ ಯಾವ ವಿಷಯವನ್ನಾದರೂ ಗುರಿಯಾಗಿಟ್ಟು ಕಾವ್ಯವನ್ನು ರಚಿಸುವುದಾದರೆ ಈ ರಘುವಂಶ-ಕುಮಾರ ಸಂಭವಗಳಲ್ಲಿ ಸಂಪಾದಿಸಿರುವುದಕ್ಕಿಂತಲೂ ಮಿಗಿಲಾದ ಕೀರ್ತಿಯನ್ನು ಸಂಪಾದಿಸಬಲ್ಲರೆಂದು ವಿಶ್ವಾಸಪೂರ್ವಕವಾಗಿ ಹೇಳಬಹುದು. ಈ ಉಭಯ ಗ್ರಂಥಗಳ ರಚನೆಯಿಂದ ಕವಿಗಳಿವರು

ಕನ್ನಡರಸರ ಪ್ರೇಮಕ್ಕೆ ಪಾತ್ರರಾದುದಲ್ಲದೆ, ಅವರ ಆಸ್ಥಾನ ವಿದ್ವಾಂಸರಾಗಿ ಗೌರವಿಸಲ್ಪಟ್ಟೂ ಇದ್ದಾರೆ. ಕನ್ನಡಮ್ಮನು ಈ ಘನವಾದ ಸಾಹಿತ್ಯ ಸೇವೆಗಾಗಿ ಸದರಿ ಕವಿಕುಲದೀಪಕರಿಗೆ ದೀರ್ಘಾಯುವನ್ನೂ ಆರೋಗ್ಯ ಭಾಗ್ಯವನ್ನೂ ದಯ ಪಾಲಿಸಲಿ. ಇವರ ಕೃತಿಗಳು ಸರ್ವಜನಾದರಣೀಯಗಳಾಗಿ ಮೆರೆಯಲಿ !

"ಕರ್ನಾಟಕ ಭಗವದ್ಗೀತೆ" ಬೆಲೆ ೧-೦-೦ ಕವಿಗಳು ಮೇಲಿನವರೇ. ಇದಕ್ಕೆ ಶ್ರೀಮಾನ್ ರಾಜಕವಿಭೂಷಣ ಲಿಂಗರಾಜ ಅರಸರವರು ಮೈಸೂರು ಇವರು ಮುನ್ನುಡಿಯನ್ನು ಬರೆದಿರುವುದಲ್ಲದೆ, ಮೈಸೂರು ಶ್ರೀ. ಮಹಾರಾಜ ಪ್ರಭು ಗಳ ಪಾರಿತೋಷಕವೂ ದೊರೆತಿದೆ, ಎಂಬ ಸಂಗತಿಗಳೇ ಈ ಗ್ರಂಥದ ಘನವಾದ ಯೋಗ್ಯತೆಯನ್ನು ಹೊರಗೆಡಹುತ್ತಿವೆ. ಯೋಗ್ಯತಾವಂತರ ಯೋಗ್ಯತೆಯನ್ನು ಯಾರು ಹೊಗಳದಿದ್ದರೂ ಅದು ತನ್ನಷ್ಟಕ್ಕೆ ತಾನೇ ಹೊರಬೀಳುತ್ತಿರುವಂತೆ ಸದರಿ ಕವಿಗಳ ವಿದ್ವತ್ಪ್ರೌಢಿಮೆಯು ದಿನೇ ದಿನೇ ಕವಿತಾಮುಖೇನ ಹೊರಬೀಳುತ್ತಲಿರು ವುದು ಸರ್ವರಿಗೂ ಸಂತೋಷದಾಯಕವಾಗಿದೆ.

ಈ ಭಗವದ್ಗೀತೆಯ ಸಲುವಾಗಿ ನಾಲ್ಕು ಮಾತುಗಳಿಂದ ಏನಾದರೂ ಹೇಳೋಣವೆಂದರೆ ಆ ಮಾತುಗಳು ಸಾಕಾಗವು. ಸಂಸ್ಕೃತ ಭಗವದ್ಗೀತೆಯು ಸರ್ವಾದರಣೀಯವಾದ ಗ್ರಂಥವಾದರೂ ತಾತ್ವಿಕಾಭ್ಯಾಸದ ಹೊರತು ಅದನ್ನು ಸರ್ವರೂ ಅರ್ಥಮಾಡಿಕೊಳ್ಳಲು ಸಾಧ್ಯವಿಲ್ಲದಾಗಿದ್ದಿತು. ಇದೀಗ ಕನ್ನಡಿಗರ ಭಾಗ್ಯೋದಯದಿಂದ ಅಚ್ಚುಮೆಚ್ಚಾದ ಸುಲಭ ಸರಣಿಯಲ್ಲಿ ಈ ತಾತ್ವಿಕ ಮರ್ಮವು ಸದರಿ ಗ್ರಂಥದಿಂದ ತಿಳಿಯುವಂತಾದುದು ಸದರಿ ಕವಿಗಳ ಘನವಾದ ಯೋಗ್ಯತೆ ಯನ್ನು ತೋರ್ಪಡಿಸುವುದು. ಮೂಲಗ್ರಂಥದೊಡನೆ ಹೋಲಿಸಿ ನೋಡಿದಲ್ಲಿ ಇವರು ಈ ಗ್ರಂಥರಚನೆಯಲ್ಲಿ ಬಹಳವಾಗಿ ಶ್ರಮಪಟ್ಟಿರುವರೆಂಬುದು ವ್ಯಕ್ತವಾಗು ವುದು; ಆದರೆ ಆ ಶ್ರಮಕ್ಕೆ ತಕ್ಕ ಕೀರ್ತಿಯು ಎಂದಿಗೂ ಈ ಕವಿಗಳಿಗೆ ಹಸ್ತಗತವೇ ಆಗಿದೆ. ಇವರೀ ಗ್ರಂಥದ ಪ್ರಚಾರವು ಬಹು ಭಾಗದ ಕನ್ನಡಿಗರಲ್ಲಿ ಆಗಬೇಕಾದರೆ ಕನ್ನಡ ಕವಿಗಳೆಂಬವರ ದೃಷ್ಟಿಕೋಣವು ಸಕ್ರಮವಾಗಿರುವ ಇಂತಹ ಗ್ರಂಥಗಳ ಮೇಲೆ ಬೀಳಬೇಕಾಗುವುದು. ಎಷ್ಟು ಸಾರೆ ಓದಿದರೂ ಮತ್ತೆ ಮತ್ತೆ ಓದಬೇ ಕೆಂದು ಆಶೆಹುಟ್ಟುತ್ತಿರುವುದು ಈ ಕಾವ್ಯ ಅಥವಾ ಈ ಕವಿಗಳಲ್ಲಿರುವ ಸ್ವಾಭಾ ವಿಕವಾದ ಪ್ರಾಸಾದಿಕ ಗುಣದಿಂದಲ್ಲದೆ ಬೇರೆಯಲ್ಲ. ಪ್ರತಿಯೊಬ್ಬ ಕನ್ನಡಿಗನೂ ಈ ಉದ್ದಾಮ ಕವಿಗಳ ಎಲ್ಲಾ ಕೃತಿಗಳನ್ನೂ ಸಂಗ್ರಹಿಸಿ ಓದಿ ನಿಜವಾದ ಯೋಗ್ಯತೆ ಯನ್ನು ಸಂಪಾದಿಸಿಕೊಳ್ಳಲೆಂಬುದೇ ಈ ಭಗವದ್ಗೀತೆಯನ್ನು ಪೂರ್ಣವಾಗಿ ಅಧ್ಯಯನ ಮಾಡಿದ್ದರಿಂದುಂಟಾದ ಮತಿ

— ಶ್ರೀ. ಶಿವ

"ಲಾವಣ್ಯವತಿ" (ಕಾದಂಬರಿ) ಬೆಲೆ ೦-೮-೦ ಬರೆದವರು:- ಶ್ರೀಮಾನ್ ಯಂ. ಕೆ. ನಾಗಪ್ಪನವರು, ಬಿ. ಎ. ಸಬ್ ರಜಿಸ್ಟ್ರಾರ್ ಪೋ. ಹೂವಿನಹಡಗಲಿ ಬಳ್ಳಾರಿ ಜಿಲ್ಲಾ. ಪಂ. ಆಸ್ಥಾನ ವಿದ್ವಾನ್ ವೈ. ನಾಗೇಶಶಾಸ್ತ್ರಿಗಳವರ ಮುನ್ನುಡಿಯಿಂದ ಕೂಡಿದ ಕಾದಂಬರಿ. ಇದು ವಿಷಾದಂತವಾಗಿ ಮುಗಿದಿದ್ದರೂ ನರಸನಾಯಕನ ಪಾರುಪತ್ಯ ಮಾಡಿರುವುದರಿಂದ ವಾಚಕರ ಮನಸ್ಸಿಗೆ ಸಮಾಧಾನವಾಗುವುದು. ಇದರಿಂದ ಪಾತಿವ್ರತ್ಯ, ಸ್ವಾಮಿಭಕ್ತಿಗಳನ್ನು ಸರ್ವರೂ ಗ್ರಹಿಸುವಂತಿದೆ. ಜಗತ್ತಿನಲ್ಲಿ ಸ್ವಕಾರ್ಯ ಸಾಧನೆಗಾಗಿ ಕುಹಕರು ಮಾಡುವ ಕೌಟಿಲ್ಯಗಳು ಎಂತಹವೆಂಬುದನ್ನು ಇದರಿಂದ ಅರಿದು ಮರೆಯುವಂತಿಲ್ಲ. ದುರ್ಜನರಿಂದ ಸಜ್ಜನರು ಹೇಗೆ ದೂರಿರಬೇಕೆಂಬುದನ್ನು ಇದರಲ್ಲಿ ಸೂಕ್ಷ್ಮವಾಗಿ ಸೂಚಿಸಿದ್ದಾರೆ. 'ಲಾವಣ್ಯವತಿ'ಯು ಕವಿಗಳ ಮೊದಲನೆಯ ಕೃತಿಯಾದರೂ ಭಾಷಾಸೇವೆಯಲ್ಲಿ ಇವರಿನ್ನೂ ಹೊಸಬರೆಂದು ಯಾವ ವಿಧವಾಗಿಯೂ ಊಹಿಸಲು ಬರುವಂತಿಲ್ಲ.

ಇದರಲ್ಲಿ ದಾರು ದಾವಕಾರ್ಯ ಮುಂತಾದ ಕೆಲ ದೇಶ್ಯ ಶಬ್ದಗಳು ಉಪಯೋಗಿಸಲ್ಪಟ್ಟಿವೆ. ಗ್ರಂಥಕರ್ತರ ಪ್ರಾಂತದಲ್ಲಿ ಸುಧಾರಿಸಿದ ಸ್ಮಾರ್ತಾದಿಗಳೂ ಈ ಶಬ್ದಗಳನ್ನು ಶುದ್ಧ ರೂಪವೆಂದು ತಿಳಿದು ಆಡುತ್ತಿರುವುದು ವಾಡಿಕೆಯಾಗಿದೆ. ಆದಷ್ಟು ಮಟ್ಟಿಗೆ ಗ್ರಂಥ ಭಾಷೆಯಲ್ಲಿ ಇಂತಹ ಶಬ್ದಗಳನ್ನು ಬಿಟ್ಟಷ್ಟೂ ಉತ್ತಮ.

ರಸಗಳು ಪರಿಪುಷ್ಟವಾಗಿದ್ದರೂ ಅವುಗಳನ್ನು ಕವಿಗಳು ಜಾಣ್ಮೆಯಿಂದ ಮೇರೆದಪ್ಪದಂತೆ ಮಾಡಿದ್ದಾರೆ. ಸರಣಿಯು ಗಂಗಾಪ್ರವಾಹದಂತೆ ಎಲ್ಲಿಯೂ ತಡೆಯಿಲ್ಲದೆ ಸಾಗಿದೆ. ಸಂಬಂಧವು ಕೊಂಚವೂ ವಿಚ್ಛಿನ್ನವಾಗಿಲ್ಲ. ಭಾಷೆ ಮನೋಹರವಾಗಿದೆ. ಕಾಳಿದಾಸ ಮಹಾಕವಿಯ "ಪುರಾಣ ಮಿತ್ಯೇವ ನ ಸಾಧುಸರ್ವಂ ನ ಚಾಪಿಕಾವ್ಯಂ ನವಮಿತ್ಯವದ್ಯಂ" ವಾಕ್ಯದಂತೆ ರಸಿಕರು ಅವಶ್ಯವಾಗಿ ಈ ಕಾದಂಬರಿಯನ್ನೋದಿಯೇ ತೀರಬೇಕು. ರಸಿಕರು ನಮ್ಮ ಉಕ್ತಿಯನ್ನು ಸತ್ಯವೆಂದು ಭಾವಿಸಿ ಪರಪ್ರತ್ಯಯ ನೇಮಬುದ್ಧಿಗಳಾದರೂ ಚಿಂತೆಯಿಲ್ಲ. ಇಂದೇ ತರಿಸಿ ಓದಬೇಕು. ಗ್ರಂಥವು ಸನ್ಮಾರ್ಗದರ್ಶಿಯಾಗಿದೆ. ಸಂದೇಹವಿಲ್ಲ.

— ಶ್ರೀ ಶಿವ

"ಸುಶೀಲೆ" (ಕಾದಂಬರಿ) ಬರೆದವರು ಮೇಲಿನವರೇ.

ವ್ಯಾಕರಣತೀರ್ಥ ಪಂ. ಚಂದ್ರಶೇಖರಶಾಸ್ತ್ರಿಗಳ ಮುನ್ನುಡಿಯಿಂದ ಕೂಡಿರುವ ಈ ಕಾದಂಬರಿಯು ಕರುಣಾರಸ ಪ್ರಧಾನವಾಗಿದೆ. ಕರುಣಾರಸ ಪ್ರಧಾನವಾದ ಕಾದಂಬರಿಯನ್ನು ರಚಿಸುವಲ್ಲಿ ಕವಿಗೆ ಬಹಳ ಶಕ್ತಿ ಬೇಕು. ಕಥೆಯು ಆನಂದಾದಿಯೂ ವಿಷಾದಮಧ್ಯವೂ ಆನಂದಾಂತ್ಯವೂ ಆಗಿದೆ. ಕವಿಗಳು ನೂತನ

ವಾತಾವರಣದಲ್ಲಿ ಬೆಳೆದವರಾದರೂ ರಚನೆಯಲ್ಲಿ ಶುದ್ಧವಾದ ಪ್ರಾಚೀನ ಪರಂಪರೆಯನ್ನು ತಿಲಮಾತ್ರವೂ ದಾಟಿಲ್ಲ. ವಿದ್ವಾಂಸರಾದಿಯಾಗಿ ಪಾಮರಾಂತ್ಯದ ವರೆಗೂ ಸ್ತ್ರೀಪುರುಷರೆಲ್ಲರೂ ಅತ್ಯವಶ್ಯವಾಗಿ ಓದಿ ಸನ್ಮಾರ್ಗಕ್ಕೆ ಬರುವಂತಿದೆ. ಮಾತೃ-ಪಿತೃಭಕ್ತಿ, ಸಹೋದರರಲ್ಲಿ ನೆಲೆಸಿರಬೇಕಾದ ವಿಶ್ವಾಸ, ಮಿತ್ರುತ್ವ ಪರಿಪಾಲನೆ, ಸ್ತ್ರೀಪುರುಷರ ಸದಾಚರಣೆ, ಆಪತ್ತಿನಲ್ಲಿ ಕಷ್ಟಸಹನೆ ಇವೆಲ್ಲವನ್ನೂ ಅಭ್ಯಾಸಮಾಡಬೇಕೆಂದರೆ ಈ ಕಾದಂಬರಿಯನ್ನೋದಬೇಕು.

ಜನರ ಹೇಳಿಕೆ ಕೇಳಿಕೆಗಳ ಮೇಲಿಂದಲೇ ಯಾವ ವಿಷಯವನ್ನು ಹೀಗೆಯೇ ಸರಿಯೆಂಬುವುದು ಶುದ್ಧ ಮೂರ್ಖತನವೆಂಬುದನ್ನೂ ಇದರಲ್ಲಿ ಪ್ರತ್ಯಕ್ಷಕಾಣಬಹುದಾಗಿದೆ! ಇದನ್ನು ರಚಿಸುವಾಗ ಕವಿಗಳು ಆಯಾ ಪಾತ್ರಗಳ ಅಭಿನಯವನ್ನು ಮನಸ್ಸಿನಮೇಲೆ ಪರಿಣಮಿಸಿಕೊಂಡು ಬರೆದಿರುವಂತೆ ತೋರುವುದು; ಅದುಕಾರಣವೇ ಓದುಗರಿಗೆ ಜಾಗ್ರುತೆಯಾಗಿ ಮನಸ್ಸಿಗಂಟುವುದು. ಗ್ರಂಥದ ಸರಣಿ ಲಲಿತವಾಗಿದೆ. ಹಾಗೆಯೇ ಸುಲಭವೂ ಆಗಿದೆ.

ಕವಿಗಳು ಸರ್ಕಾರಿ ಉದ್ಯೋಗದಲ್ಲಿದ್ದುಕೊಂಡೂ ಈ ರಚನಾಕಾರ್ಯದಲ್ಲಿ ಯಶಸ್ವಿಗಳಾಗಿರುವುದು ತುಂಬಾ ಶ್ಲಾಘನೀಯವಾದ ವಿಷಯ. ಅಲ್ಲಲ್ಲಿ ಕುದುರು, ಹಾರಾಟ ಮುಂತಾದ ಕೆಲ ದೇಶ್ಯ ಶಬ್ದಗಳು ಉಪಯೋಗಿಸಲ್ಪಟ್ಟಿರುವುದು ಸ್ವಾಭಾವಿಕ, ಇದು ಪೂರ್ವಕಾಲದಿಂದ ಸಾಗಿ ಬಂದ ಪದ್ಧತಿಯಾದುದರಿಂದ ದೋಷವಲ್ಲವಾದರೂ ಇತರ ದೇಶೀಯರಾದ ಕನ್ನಡಿಗರ ಸುಭೋದಕ್ಕಾಗಿ ಅಂತಹ ಕಡೆ ವ್ಯಾಪಕ ಶಬ್ದಗಳನ್ನು ಜೋಡಿಸುವುದೇ ಮಿಗಿಲು. ಆಯಾಭಾಗದ ಕನ್ನಡಿಗರ ರಚನೆಯಲ್ಲಿಯೂ ಇಂತಹ ಎಷ್ಟೋ ದೇಶ್ಯ ಶಬ್ದಗಳನ್ನು ಕಾಣಬಹುದು.

ಒಟ್ಟಿನ ಮೇಲೆ ಕನ್ನಡಮ್ಮನ ಕೊರಳಸರದಲ್ಲಿ ಇವರೀ ರಚನಾ ಕುಸುಮವೂ ಒಂದು ಸ್ಥಾನವನ್ನು ಪಡೆಯಲು ಅರ್ಹವಾಗಿದೆಯೆಂದು ಆನಂದದಿಂದ ಒಪ್ಪಬೇಕು.

— ಶ್ರೀ ಶಿವ

೧. "ಗೋಮಹಿಮೆ" ೨. "ಯಮುನೂರ ಸಮಾಚಾರವೇನು"

ಲೇ:– ಶ್ರೀ. ಕಲ್ಲಿನಾಥ ವೀ. ಹಿರೇಮಠ ದ್ಯಾಂಪುರ. ಬೆಲೆಯಿಲ್ಲ. ಯಾರು ಗೋಸೇವೆಯಲ್ಲಿ ನಿರತರಾಗಿರುವರೋ, ಯಾರು ಭೂತದಯಾಪರರಾಗಿರುವರೋ, ಯಾರು ಅಹಿಂಸಾ ಧರ್ಮಾನುಯಾಯಿಗಳಾಗಿರುವರೋ ಅಂಥ ಕನ್ನಡಿಗರಿಗೆ ಈ ಪುಟ ಪುಸ್ತಕಗಳು ಪರಮಾದರದಿಂದ ಉಚಿತವಾಗಿ ಅರ್ಪಿಸಲ್ಪಡುತ್ತಿವೆ.

# 'ಯುಗಾದಿ'

**ಸಂಪಾದಕೀಯ**

ಶ್ರೀಪರಮೇಶ್ವರನ ಕೃಪೆಯಿಂದ ಬಹುಧಾನ್ಯ ಸಂವತ್ಸರವನ್ನು– ಅನೇಕಾನೇಕ ಎಡರು ತೊಡರುಗಳಿಂದ ಕೂಡಿಯೂ– ಸುಖವಾಗಿ ದಾಟಿ ಇದೀಗ ಹೊಸ ವರ್ಷವಾದ ಪ್ರಮಾಥೀ ಸಂವತ್ಸರವನ್ನು ಕಂಡೆವು.

ಹೊಟ್ಟೆಬಟ್ಟೆಗಳ ಆಶೆಯನ್ನು ಬಿಡದ ಈ ಅದ್ಭುತ ಪ್ರಪಂಚವು ಚಕ್ರನೇಮಿ ಕ್ರಮದಿಂದ ಎಡೆಬಿಡದೆ ಕಾಲವನ್ನು ಸವೆಸುತ್ತಲೇ ಇದೆ.

ಬಡವರು ಬಡತನದಲ್ಲಿ ಬಳಲುತ್ತಲೇ ಇದ್ದಾರೆ. ಸಿರಿವಂತರು ಸಂಪತ್ತಿನಲ್ಲಿ ಆನಂದಿಸುತ್ತಲೇ ಇದ್ದಾರೆ. ಪಂಡಿತರು ತಮ್ಮ ಪಾಂಡಿತ್ಯವನ್ನು ತೋರಿಸುವುದರಲ್ಲಿಯೇ ಇದ್ದಾರೆ. ಕವಿಗಳು ಕವನಗಳನ್ನು ಕಟ್ಟುವುದರಲ್ಲಿಯೇ ಇದ್ದಾರೆ. ಭೋಗಿಗಳು ಲತಾಗೃಹಗಳಲ್ಲಿದ್ದುಕೊಂಡು ಹಗಲು ರಾತ್ರಿಗಳನ್ನು ಒಂದೇ ವಿಧವಾಗಿ ಕಳೆಯುತ್ತಿದ್ದಾರೆ. ಒಕ್ಕಲಿಗರು ಬಿಸಿ – ಬೇಗೆಯನ್ನದೆ ಭೂಮಾತೆಯನ್ನು ಸೇವಿಸುತ್ತ ಅಚ್ಚಳಿಯದ ಸ್ವಾತಂತ್ರ್ಯವನ್ನು ಬೇಡುತ್ತಲಿದ್ದಾರೆ. ಒಟ್ಟಿನ ಮೇಲೆ ಅವರವರು ಅವರವರ ಕಾರ್ಯಗಳಲ್ಲಿ ಮಗ್ನರಾಗಿದ್ದಾರೆ.

ಆದರೆ ಹೊಸದಿವಸವೆಂದರೆ ಅದರ ಹುರುಪೇ ಬೇರೆ. ಎಂತಹ ಬಡವನೂ ಈ ದಿನ ಹಿರಿಹಿರಿ ಹಿಗ್ಗಿ ನಲಿದಾಡುವನು. ಇದು ಪಾರಂಪರ್ಯವಿಡಿದು ಬಂದು ಹೋಗಿದೆ.

ಈ ಯುಗಾದಿ ಹಬ್ಬವು ಈಶ್ವರನು ವಿಷಪಾನ ಮಾಡಿ ದೇವತೆಗಳನ್ನು ಕಾಪಾಡಿದ ಸ್ಮಾರಕವೆಂದು ಪುರಾಣೇತಿಹಾಸವಿದರ ಅಭಿಪ್ರಾಯ.

ಈ ಹಬ್ಬದಲ್ಲಿ ಕಹಿಯೊಡನೆ ಸಿಹಿಯನ್ನು ಬೆರಿಸಿ ಸೇವಿಸುವದು ವಾಡಿಕೆಯಾಗಿದೆ. ನಾವು ಈ ಹಬ್ಬದ ನಿಜಾಂಶವನ್ನು ಗೊತ್ತುಹಚ್ಚಲು ಹೊರಟರೆ "ಮನುಷ್ಯನು ಇತರರಿಂದ ಎಂತಹ ಕಷ್ಟಕ್ಕೀಡಾಗಿದ್ದರೂ ಅದನ್ನು ಒಳ್ಳೆಯದೆಂದೇ ಭಾವಿಸಿ ನಡೆಯಬೇಕು" ಎಂಬ ವಿಚಾರವು ಹೊರಡುವುದು. ಮಹಾತ್ಮರ ನಿಜಸ್ವಭಾವವೇ ಹಾಗಿರಬೇಕು. ಇದೇ ವಿಷಯವನ್ನು ಒಬ್ಬ ಕವಿಯು "ಸಂಪತೌ ಚ ವಿಪತ್ತೌ ಚ ಮಹತಾಮೇಕರೂಪತಾ" ಎಂದು ಹಾಡಿರುವನು.

ಸಂಸಾರದಲ್ಲಿ ಸುಖ-ದುಃಖಗಳೆರಡೂ ಬರುವುದು ಸ್ವಾಭಾವಿಕವು. ಮಾನವನು ಅವೆರಡನ್ನೂ ಬೆಲ್ಲ-ಬೇವುಗಳ ಸಮ್ಮಿಶ್ರಣದಂತೆ ಅನುಭವಿಸಲೇಬೇಕಾಗುವುದೆಂಬ ಪಾಠವನ್ನು ಈ ಯುಗಾದಿಯು ಸರ್ವರಿಗೂ ಕಲಿಸುತ್ತದೆ. ಅರ್ಜುನನಂತಹ ದಿವ್ಯಜ್ಞಾನಿಗೆ ಸುಖ-ದುಃಖಗಳನ್ನೂ ಲಾಭಾಲಾಭಗಳನ್ನೂ, ಜಯಾಪಜಯಗಳನ್ನೂ ಸಮಗೊಳಿಸಿ ಸಾಗಬೇಕೆಂದು ಶ್ರೀಕೃಷ್ಣಪರಮಾತ್ಮನು ಉಪದೇಶ ಮಾಡಿರುವ ಕಾರಣವೂ ಇದೆ.

ಕಷ್ಟದ ನಂತರ ಸುಖವೂ, ಸುಖದ ನಂತರ ಕಷ್ಟವೂ ಜನನಾನಂತರ ಮರಣವೂ ಮರಣಾನಂತರ ಜನನವೂ ಸಿದ್ಧವಾಗಿರುವಂತೆ, ಪ್ರತಿಪ್ರಾಣಿಗೂ ತಪ್ಪಿದುದಲ್ಲ. ಪೂರ್ವಪುಣ್ಯ ಬಲದಿಂದಲೋ ಪೂರ್ವ ದುರ್ದೈವದಿಂದಲೋ ಒಬ್ಬ ವ್ಯಕ್ತಿಯು ಕೊನೆಯವರೆಗೆ ಸುಖಿಯಾಗಿಯೇ ಇರಬಹುದು, ದುಃಖಿಯಾಗಿಯೇ ಇರಬಹುದು. ಆದರೆ ಈ ವಿಚಾರವು ಅಪೂರ್ವ; ಅಥವಾ ಅತ್ಯಲ್ಪ ಸಂಖ್ಯೆಯಲ್ಲಿ ಇರಲೂಬಹುದು. ಇವೆರಡಕ್ಕೂ ಮಧ್ಯವರ್ತಿಗಳಾದ ಮನುಜರೇ ಲೋಕದಲ್ಲಿ ಹೆಚ್ಚು. ಆದುದರಿಂದ ನಾವು ಪರಮಾತ್ಮನನ್ನು ಬೇಡಿಕೊಳ್ಳುವುದಾದರೆ ಏನೆಂದು ಬೇಡಿಕೊಳ್ಳಬೇಕೆಂದರೆ:- "ದೇವರೇ ಮಿತಿಮೀರಿದ ಸುಖವನ್ನೂ, ಮಿತಿಮೀರಿದ ದುಃಖವನ್ನೂ ಎಂದಿಗೂ ಕೊಡದಂತೆ ಕಾಪಾಡು" ಎಂದು ಪ್ರಾರ್ಥನೆಯು ನಮ್ಮದಾದರೂ ಅದಕ್ಕೆ ಸರಿಯಾದ ಫಲಗಳನ್ನು ದಯಪಾಲಿಸುವುದು ಈಶ್ವರನ ಇಷ್ಟ. ಈ ವಿಷಯವನ್ನು ಶ್ರೀಕೃಷ್ಣ ಪರಮಾತ್ಮನು ಮತ್ತಿಷ್ಟು ಸ್ಪಷ್ಟಪಡಿಸಿದ್ದಾನೆ. "ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷುಕದಾಚನ" ಎಂಬೀ ನುಡಿಯೇ ಆ ವಿಷಯವನ್ನು ವ್ಯಕ್ತಗೊಳಿಸುವುದು.

ನಮ್ಮ ಜ್ಯೋತಿಷಿಗಳಾದರೂ ಒಂದು ವರ್ಷದ ಅಥವಾ ಒಂದು ತಿಂಗಳ ಭವಿಷ್ಯವನ್ನು ಹೇಳುವುದಾದರೆ ಯಾವದೊಂದು ರಾಶಿಗೆ ಶನಿ ಕೆಟ್ಟವನೆಂದು ಹೇಳಿದರೆ ಗುರು ಒಳ್ಳೆಯವನೆಂದೂ, ಗುರು ಕೆಟ್ಟವನಿದ್ದರೆ ಶನಿ ಒಳ್ಳೆಯವನೆಂದೂ ಹೇಳಿ ಅರ್ಧಸುಖ, ಅರ್ಧ ದುಃಖವನ್ನು ಸೂಚಿಸುತ್ತಾರೆ. ಭಗವಂತನ ಸೃಷ್ಟಿಕ್ರಮವನ್ನು ನೋಡಿದರೂ ಒಂದು ದಿನದಲ್ಲಿಯೇ ೧೨ ತಾಸು ತೇಜಃಪುಂಜದಿಂದ ರಂಜಿಸುವುದಾದರೆ, ಇನ್ನರ್ಧ ಅಂಧಕಾರಮಯವಾಗಿರುವುದು.

ಇಂತಾಗಿ ನಾವು ಇವೆರಡನ್ನೂ ಬಲವಾಗಿ ನಂಬಿಕೊಳ್ಳಬಾರದು. ತೇಜೋರಾಶಿಯಾಗ ಸೂರ್ಯೋದಯವನ್ನುಕಂಡು ಹಿಗ್ಗಿ ಯಾವಾಗಲೂ ನಮಗೆ ಹಗಲೇ ಇರುವದೆಂದು ಭಾವಿಸಿದರೆ ಎಷ್ಟು ತಪ್ಪಾಗುವದೋ, ಹಾಗೆಯೇ ನಾವು ಯಾವಾಗಲೂ ಒಂದೇ ವಿಧವಾದ ಸುಖದಲ್ಲಿಯೇ ಇರುವೆವೆಂದು ನಿಶ್ಚಯಿಸಿದರೆ ಅಷ್ಟೇ ತಪ್ಪು

ಗುವದು. ನಮ್ಮ ಕಣ್ಣುಮುಂದೆಯೇ ಬೆಳಕು ಹೋಗಿ ಕತ್ತಲು ಬರುವಂತೆಯೂ, ಕತ್ತಲುಹೋಗಿ ಬೆಳಕುಬರುವಂತೆಯೂ, ಸುಖಹೋಗಿ ದುಃಖವೂ, ದುಃಖಹೋಗಿ ಸುಖವೂ, ಬರುವದು ಈಶ್ವರನಿರ್ದಿಷ್ಟವಾಗಿದೆ. ಆದುದರಿಂದ ಈ ಪ್ರಮಾಥೀ ಸಂವತ್ಸರದಲ್ಲಿಯೂ ಉಂಟಾಗುವ ಕಷ್ಟ ಸುಖಗಳೆರಡಕ್ಕೂ ನಾವು ಭಾಗಿಗಳಾಗಲೇ ಬೇಕಾಗಿರುವುದು.

ನಮ್ಮ "ಧರ್ಮರಾಜ್ಯ"ವು ಈ ಎರಡನ್ನೂ ಸಮಾನದೃಷ್ಟಿಯಿಂದ ಸ್ವಾಗತಿಸುತ್ತ ೬ ಮಾಸಗಳನ್ನು ಕಳೆಯಿತು. ಇದಕ್ಕಿನ್ನೂ ಶೈಶವಾವಸ್ಥೆಯು ಪೂರೈಸಿಲ್ಲವಾದರೂ ತನ್ನ ತೊದಲ್ನುಡಿಗಳಿಂದ ಸರ್ವರ ಪ್ರೇಮಕ್ಕೂ ಪಾತ್ರವಾಗಿ ಸಕಲ ಮತೀಯರ ಅಂಕ (ತೊಡೆ)ದಲ್ಲಿಯೂ ನಿಶ್ಶಂಕೆಯಿಂದ ಪೋಷಿಸಲ್ಪಡುತ್ತಿರುವದು.

ಧರ್ಮ ಹಾಗೂ ಕನ್ನಡ ನುಡಿ ಇವೆರಡರ ಪ್ರಧಾನೋಪಾಸಕರಿಗೆಲ್ಲಾ ಈ "ಧರ್ಮರಾಜ್ಯ"ವು ತನ್ನ ಸೇವೆಯನ್ನು ಸಲ್ಲಿಸುತ್ತಿದೆ. ಇಷ್ಟರಲ್ಲಿಯೇ ಬಳ್ಳಾರಿ, ಹೊಸಪೇಟೆ, ಹರಪನಹಳ್ಳಿ, ಕೊಟ್ಟೂರು, ಸೊಂಡೂರು, ಕುಡತನಿ, ತೋರಣಗಲ್ಲು, ಹೂವಿನಹಡಗಲಿ, ಬೆಂಡೀಗೇರಿ, ಕಂಚಿಕೆರೆ, ಮುದೇನೂರು ಮೊದಲಾದ ಗ್ರಾಮ-ನಗರಗಳ ಪ್ರಮುಖರು ಈ "ಧರ್ಮರಾಜ್ಯದ"ದ ಸಲುವಾಗಿ ಪೋಷಕರೂ, ಸಹಾಯಕರೂ ಚಂದಾದಾರರೂ ಆಗಿ ಹೆಚ್ಚಾಗಿ ಪ್ರೋತ್ಸಾಹಗೊಳಿಸಿದ್ದಾರೆ. ಇನ್ನೂ ಅನೇಕ ಮಹನೀಯರು ತಮ್ಮ ಕಡೆಗೆ ಬರಬೇಕೆಂದು ನಮ್ಮ "ವೀರಶೈವ ಧರ್ಮಾಲಯ" ಹಾಗೂ "ಧರ್ಮರಾಜ್ಯ" ದ ಅಧ್ಯಕ್ಷರಾದ ವರಕವಿ ಶ್ರೀ ವಾಗೀಶ ಶಿವಾಚಾರ್ಯರಿಗೆ ಪತ್ರಗಳನ್ನು ಬರೆಯುತ್ತಲಿದ್ದಾರೆ. ಈಸಂಸ್ಥೆಯನ್ನು ಸ್ಥಿರಗೊಳಿಸುವುದಕ್ಕಾಗಿ ಶ್ರೀಗಳವರು ಆ ಎಲ್ಲಾ ಕಡೆಗೂ ಬರುವವರೇ ಇದ್ದಾರೆ ಧರ್ಮ-ದೇಶ-ಭಾಷಾ- ಅಭಿಮಾನಿಗಳಾದ ಸರ್ವ ಮತಿಯರೂ ಶ್ರೀಗಳವರಿಗೆ ಉದಾರವಾದ ಸಹಾಯವನ್ನೆಸಗುವುದು ಪ್ರಧಾನಕರ್ತವ್ಯವಾಗಿದೆ.

ಅನೇಕರ ಅಭಿಪ್ರಾಯದ ಮೇರೆಗೆ ಈ ಪತ್ರಿಕೆಯು ಸ್ಥಿರೀಕರಣಕ್ಕಾಗಿ ಇದೇ ಯುಗಾದಿಯಿಂದ ಆಜೀವ ಪೋಷಕ:— ರೂ. ೫೦, .( ಒಮ್ಮೆ ಮಾತ್ರ ) ವರ್ಗವೊಂದನ್ನು ಏರ್ಪಡಿಸಿದ್ದೇವೆ. ಈ ೫೦ ರೂ. ಗಳನ್ನು ಕೊಟ್ಟವರಿಗೆ ಕೊನೆವರಿಗೂ "ಧರ್ಮರಾಜ್ಯ" ಮಾಸಿಕವನ್ನು ಕೊಡುವುದಲ್ಲದೆ, ಈ ಸಂಸ್ಥೆಯು ವತಿಯಿಂದ ಹೊರಟ ಎಲ್ಲಾ ಗ್ರಂಥಗಳನ್ನೂ ಕೊಡುವಂತೆ ಮಾಡಿದೆಯಲ್ಲದೆ, ಅವರ ಫೋಟೋ ಸಂಕ್ಷೇಪ ಚರಿತ್ರಗಳನ್ನೂ ಪತ್ರಿಕೆಯಲ್ಲಿ ಅಚ್ಚು ಹಾಕಿಸುವುದಾಗುವುದು.

ಈ ೬ ಮಾಸಗಳಲ್ಲಿ ನಮ್ಮ ಸಹೋದ್ಯೋಗಿಗಳಾದ ಸಂ|| ವೀರಶೈವ (ಬೆಂಗಳೂರು) ಸಂ|| ಶರಣ ಸಂದೇಶ (ಬೆಂಗಳೂರು), ಪಂಚಾಚಾರ್ಯಪ್ರಭಾ (ಮೈ

ಸೂರ) ಸಂ|| “ ಲೋಕವಿಚಿತ್ರ ” (ಧಾರವಾಡ), ಸಂ|| ವಿಭೂತಿ (ಸಿಕಂದ್ರಾಬಾದ), ಸಂ|| ಕನ್ನಡ ಕೋಗಿಲೆ (ನರೇಗಲ್ಲು), ಸಂ|| ವೀರಶೈವ ಗರ್ಜನಾ ( ಬಾರ್ಸಿ ), ಮೊದಲಾದವರೂ ಇನ್ನಿತರ ಲೇಖಕ ಬಂಧುಗಳೂ “ ಧರ್ಮರಾಜ್ಯ ” ಕ್ಕೆ ಅಧಿಕವಾದ ಬೆಂಬಲವನ್ನು ಕೊಡುತ್ತ ಪ್ರೋತ್ಸಾಹಿಸಿದ್ದಾರೆ. ಇವರೆಲ್ಲರಿಗೂ ಅನಂತಧನ್ಯವಾದಗಳನ್ನರ್ಪಿಸುವದಕ್ಕೆ ಈ ನೂತನ ವರ್ಷವು ನಮ್ಮನ್ನು ಉತ್ತೇಜನಗೊಳಿಸಿದೆ.

ಪ್ರಾಂತ-ಪರಪ್ರಾಂತವೆನ್ನದೆ, ಮತ-ಪರಮತವೆನ್ನದೆ ಸಕಲ ಕನ್ನಡಿಗರೂ ಧನ-ಲೇಖನ-ಕವನಾದಿಗಳಿಂದ “ ಧರ್ಮರಾಜ್ಯ ” ವನ್ನು ಪಾಲಿಸಲೆಂದೂ ಕನ್ನಡಿಗರೆಲ್ಲರೂ ಒಂದೆಂಬ ದೃಷ್ಟಿಯು ಒಡಮೂಡಿ ಕರ್ನಾಟಕದ ಮಹೋನ್ನತಿಯಾಗಲೆಂದೂ, ದ್ವೇಷಾಸೂಯೆಗಳು ಅಳಿದು ಸರ್ವರೂ ತಮ್ಮ ತಮ್ಮ ಕರ್ತವ್ಯದಲ್ಲಿ ತೊಡಗಿ ಲೋಕಕಲ್ಯಾಣವನ್ನು ಮಾಡುವವರಾಗಲೆಂದೂ, ಈ ಸಾಹಸವೆಲ್ಲವೂ ಆ ದಯಾಘನನಾದ ಪರಮಾತ್ಮನಿಂದ ಶೀಘ್ರವಾಗಿ ದೊರೆಯಲೆಂದೂ, ಯಾವ ಕರ್ನಾಟಕ ಸಿಂಹಾಸನಾಧೀಶ್ವರರಾದ ಮೈಸೂರು ಶ್ರೀಕೃಷ್ಣರಾಜೇಂದ್ರ ಮಹಾಪ್ರಭುಗಳ ಸತ್ಕೀರ್ತಿ ಛತ್ರದ ನೆರಳಲ್ಲಿ ಈ ಕರ್ನಾಟಕ “ ಧರ್ಮರಾಜ್ಯ ”ವು ಬಾಳಿ ಬದುಕಿ ಮೆರೆಯಬೇಕಾಗಿದೆಯೋ ಆ ಪ್ರಭುಗಳು ದೀರ್ಘಾಯುಗಳಾಗಿ ಬಾಳಲೆಂದೂ ಪ್ರಾರ್ಥಿಸುವೆವು.

“ ಧರ್ಮರಾಜ್ಯ ” ಸಂಪಾದಕರು

---

## ಸ್ವೀಕಾರ

ಹಾಸನ ಡಿಸ್ಟ್ರಿಕ್ಟ ಮಂಜ್ರಾಬಾದ ತಾಲೂಕ ವಸಳೂರು ಹೋಬಳಿ
ಹೆಗ್ಗಡಹಳ್ಳಿಮಠದ ನೂತನ ಪಟ್ಟಾಧಿಕಾರ ಮಹೋತ್ಸವ
ಸಮಯದಲ್ಲಿ “ ಧರ್ಮರಾಜ್ಯ ” ಪೋಷಣೆಗಾಗಿ ಕಳುಹಿಸಿದ ಒಂದು ರೂಪಾಯಿ ಶ್ರೀ. ಹೆಚ್. ಸಿದ್ದಯ್ಯನವರ ದ್ವಾರಾ ಮುಟ್ಟಿರುತ್ತದೆ.
ಈ ಮಹಾಶಯರಿಗೆ ಪರಮೇಶನು ನಿತ್ಯಮಂಗಲವನ್ನೀಯಲೆಂದು ಬೇಡುತ್ತೇವೆ.

# ಪೋಷಕರು

## ೧೦ ರೂಪಾಯಿ ಕೊಟ್ಟವರು

(೧) ಶ್ರೀ ಷ. ಬ್ರ. ಹಸುಗೋಡು ಬೃಹನ್ಮಠಾಧೀಶ ಶ್ರೀ ರುದ್ರಮುನಿ ಶಿವಾಚಾರ್ಯರವರು
(೨) ,, ಬಾಲತಪಸ್ವಿ ಹೋಟಗಿ ಬೃಹನ್ಮಠಾಧೀಶ ಶ್ರಿ ಚನ್ನವೀರ ಶಿವಾಚಾರ್ಯರು
(೩) ,, ಭೀಷ್ಮ ಬ್ರಹ್ಮಚಾರಿ ಬೆಂಗಳೂರ ಮಹಾಂತಿನ ಮಠಾಧೀಶ ಶ್ರೀ ಗಂಗಾಧರ ಶಿವಾಚಾರ್ಯರು
(೪) ,, ಅಬ್ಬಿಗೇರಿ ಬೃಹನ್ಮಠಾಧೀಶ ಶ್ರೀ ವೀರಭದ್ರ ಶಿವಾಚಾರ್ಯರು
(೫) ,, ಕುಂದಗೋಳ ಬೃಹನ್ಮಠಾಧೀಶ ಗುರುಪಾದೇಶ್ವರ ಶಿವಾಚಾರ್ಯರು
(೬) ,, ಎಸಳೂರಪೇಟೆ ಬೃಹನ್ಮಠಾಧೀಶ ನೀಲಕಂಠ ಶಿವಾಚಾರ್ಯರು
(೭) ,, ಕುಡತನಿ ನಯನಸ್ವಾಮಿ ಮಠಾಧೀಶ ನಯನಸ್ವಾಮಿಗಳವರು
(೮) ,, ಹೊಳಗುಂದಿ ಶಿಲಾಮಠಾಧೀಶ ಗುರುಸಿದ್ಧ ಶಿವಾಚಾರ್ಯರು
(೯) ,, ಸತ್ತಿಗೇರಿ ಬೃಹನ್ಮಠಾಧೀಶ ಶಿವಲಿಂಗ ಶಿವಾಚಾರ್ಯರು
(೧೦) ,, ರಾಮದುರ್ಗ ಬೃಹನ್ಮಠಾಧೀಶ ಗಂಗಾಧರಸ್ವಾಮಿಗಳವರು
(೧೧) ,, ಸೂಡಿ ಬೃಹನ್ಮಠಾಧೀಶ ಉಮಾಪತಿ ಶಿವಾಚಾರ್ಯರವರು
(೧೨) ,, ಹಿರೇಹಾಳು ಬೃಹನ್ಮಠಾಧೀಶ ವಿರುಪಾಕ್ಷಸ್ವಾಮಿಗಳವರು
(೧೩) ,, ಸಿದ್ಧಲಿಂಗಸ್ವಾಮಿಗಳು ಹಿರೇಹರಕುಣಿ ಹಿರೇಮಠ
(೧೪) ,, ಚೋರನೂರ ಹೀರೇಮಠದ ಮರುಳಸಿದ್ಧ ಶಿವಾಚಾರ್ಯರವರು
(೧೫) ,, ಹೊಸಳ್ಳಿ ಪುರವರ್ಗ ಮಠಾಧ್ಯಕ್ಷ ಸಿದ್ಧಲಿಂಗ ಶಿವಾಚಾರ್ಯರವರು
(೧೬) ,, ಗುಳೇವು ಗವಿಮಠಾಧ್ಯಕ್ಷ ಗಂಗಾಧರಲಿಂಗ ಶಿವಾಚಾರ್ಯರವರು
(೧೭) ,, ಮಡಿವಾಳಸ್ವಾಮಿಗಳವರು ಹನ್ನೆರಡುಮಠ ಹುಬ್ಬಳ್ಳಿ
(೧೮) ,, ಸವದತ್ತಿ ಬೆಟಸೂರ ಹಿರೇಮಠದ ಶ್ರೀ ಪಟ್ಟದಸ್ವಾಮಿಗಳವರು
(೧೯) ,, ಪಟ್ಟದಸ್ವಾಮಿಗಳವರು ಹಿರೇಮಠ ಬ್ಯಾಹಟ್ಟಿ
(೨೦) ,, ,ಷ. ಬ್ರ. ವೀರಸಂಗಮೇಶ್ವರ ಶಿವಾಚಾರ್ಯರವರು ಕಂಬಾಳಿಮಠ, ತೆಕ್ಕಲಕೋಟೆ

## ಬಳ್ಳಾರಿ

ವೇ. ಸರಾಫ ಸಿದ್ಧಯ್ಯನವರು
ಮ. ರಾ. ಜಡೆ ಸಿದ್ಧಲಿಂಗಪ್ಪನವರು
,, ಅರಗಿನಡೋಣಿ ಬಸನಗೌಡರು
,, ಕುಪ್ಪಗಲ್ಲು ಅಯ್ಯಪ್ಪನವರು ಮೇಟಿ ದೊಡ್ಡಪ್ಪನವರು
ಮ. ರಾ. ಪಾವಾಡಶೆಟ್ಟಿ ಮಲ್ಲಿಕಾರ್ಜುನಪ್ಪನವರು
,, ಜಾನೆಕುಂಟೆ ವಿರುಪಾಕ್ಷಪ್ಪನವರು
,, ಬಳೇ ವೀರಭದ್ರಪ್ಪನವರು ಅ್ಯಂಡ ಸನ್ಸ
,, ಮುಂಡ್ಲೂರು ನರಸಿಂಹಪ್ಪನವರು

## ಹೊಸಪೇಟೆ

ವೇ. ಕುದುರೇಮೋತಿ ಕೊಟ್ರಯ್ಯನವರು
ಮ. ರಾ. ಯಜಮಾನ್ ಗುತ್ತಿ ಚನ್ನಪ್ಪನವರು
ಮ. ರಾ. ಜಾಲಿ ಬಸಪ್ಪನವರು
ಶ್ರೀಮತಿ ಜಾಲಿ ವೀರಮ್ಮನವರು

## ಸೊಂಡೂರು

ವೇ. ಗೊಗ್ಗಿ ಶಿದ್ರಾಮಯ್ಯನವರು ಅ್ಯಂಡ ಸನ್ಸ
ಮ. ರಾ. ಟಿ. ವೀರಸ್ವಾಮಿ ಒಷ್ಟರಸೀಯರ
ಮ. ರಾ. ಭೋಜ ಚನ್ನಪ್ಪನವರು ಷಣ್ಮುಖಪ್ಪನವರು
ಮ. ರಾ. ಸಣ್ಣಕ್ಕಿ ನಾಗಪ್ಪನವರು

## ಹುಬ್ಬಳ್ಳಿ

ವೇ. ಪಿ. ಆಯ್. ಹಿರೇಮಠ ವಕೀಲರು
ಮ. ರಾ. ಬಳ್ಳೊಳ್ಳಿ ತೀರ್ಥಪ್ಪನವರು
ವೇ. ಬಸವಣ್ಣಯ್ಯನವರು ಶಾಸ್ತ್ರಿಮಠ

## ಶಿರಗುಪ್ಪಿ

ಮ. ರಾ. ಮಲ್ಲಪ್ಪನವರು ಮಾರ್ತಂಡಪ್ಪನವರು ನಾಯಕರ
ಮ. ರಾ. ಸಿದ್ದಪ್ಪನವರು ಚನ್ನಬಸಪ್ಪನವರು ಮೆಣಸಿನಕಾಯಿ

## ಮುದೇನೂರ

ಮ. ರಾ. ಶಿವನಗೌಡರು ಮಹದೇವಪ್ಪಗೌಡರು ಗಂಗನಗೌಡರು
ಮ. ರಾ. ಕರೇಗೌಡ್ರು ಫಕ್ಕೀರಗೌಡ್ರು ಡೊಳ್ಳೇಶ್ವರ
ಮ. ರಾ. ರುದ್ರಗೌಡರು ಉಜ್ಜನಗೌಡರು ಕರೀಗೌಡ್ರ
ಮ. ರಾ. ಚನ್ನವೀರಗೌಡರು ಚೆನ್ನಬಸನಗೌಡರು ಗಂಗನಗೌಡರು

## ಕೋಟಿಹಾಳ

ಮ. ರಾ. ಬಸಪ್ಪನವರು ಹೊಳೆಯಪ್ಪನವರು ಮಾಗನೂರ

## ಕೆಂಚಿಕೆರೆ

ಮ. ರಾ. ಬಿದರೆ ಸಾವಕಾರ ಸಿದ್ದಪ್ಪನವರು

## ಕಾರಟಗಿ

ವೇ. ಕಟಗಿಹಳ್ಳಿ ಹಿರೇಮಠದ ಬಸವಯ್ಯನವರು

## ಕುಡತನಿ

ಶ್ರೀಮತಿ. ಸಾವುಕಾರ ವೀರಮ್ಮನವರು

## ಹೂವಿನಹಡಗಲಿ

ಶ್ರೀಮಾನ್ ಚಿನ್ನಪ್ಪನವರು ಚನ್ನಪ್ಪನವರು ಸೊಪ್ಪಿನ

# ಸಹಾಯಕರು

## ೫ ರೂಪಾಯಿ ಕೊಟ್ಟವರು

### ಬಳ್ಳಾರಿ

ವೇ ಮರಿಸ್ವಾಮಿ ಮಠದ ಮರಿಬಸವಾರಾಧ್ಯರು
,, ಕಲ್ಲುಮಠದ ಗುರುಬಸಯ್ಯನವರು
,, ಕಲ್ಲುಮಠದ ಪಂಪಯ್ಯನವರು
ಮ.ರಾ. ತೋರಣಗಲ್ಲು ಅಂಗಡಿ ದೊಡ್ಡಪ್ಪನವರು ರುದ್ರಪ್ಪನವರು
,, ಡಾಣಿ ವೀರಭದ್ರಪ್ಪನವರು ಟ್ಯಾಂಡ ಸನ್ಸ
,, ಲಕ್ಷ್ಮೀಪುರದ ಜಹಗೀರದಾರ ರಂಗನಗೌಡ್ರು
,, ಆಲಕುಂದಿ ನಾಗರಡ್ಡೆಪ್ಪನವರು
,, ತೋರಣಗಲ್ಲು ತಿಮ್ಮಪ್ಪನವರು
ಶ್ರೀಮತಿ ಹನುಮಂತಪ್ಪನವರ ಹೆಂಡತಿ ಲಕ್ಷ್ಮಮ್ಮನವರು
ವೇ. ಒಡ್ಡಿನಶೆಟ್ರ ಗುರುಲಿಂಗಯ್ಯನವರು
,, ಸುಗೂರಮಠದ ಮರಿಸ್ವಾಮಯ್ಯನವರು
ಮ.ರಾ. ವೈ. ಮಹಾಬಲೇಶ್ವರಪ್ಪನವರು
,, ಆಲಕುಂದಿ ವಿರೂಪಾಕ್ಷಪ್ಪನವರು
ಕೆರೆನಳ್ಳಿ ದೊಡ್ಡನಗೌಡ್ರು
,, ಬಿ. ಎಸ್. ಚನ್ನಪ್ಪನವರು ಮುರಿಗೆಪ್ಪನವರು
,, ಮೂಲಂಗಿ ಕರಿಬಸಪ್ಪನವರು
,, ಮೆಟ್ರಿಸಿಡಿಗೊಳದ ಸಿದ್ದಪ್ಪನವರು
,, ಮರಾಠಿ ಬಿಕ್ಕೋಜಿರಾವ ರಂಗರಾವ

### ಹೊಸಪೇಟೆ

ವೇ. ಕೆ. ಎಂ. ಶರಣಪ್ಪಯ್ಯ ಶಾಸ್ತ್ರಿಗಳು ಕನ್ನಡ ಪಂಡಿತರು
ಮ.ರಾ. ಗುಗ್ರಿ ದೊಡ್ಡಪ್ಪನವರು ಚಿತ್ರವಾಡಿಗಿ
,, ಕೆ. ವೀರಭದ್ರಪ್ಪನವರು ಕ್ಲಾರ್ಕ ತಾಲೂಕ ಆಫೀಸ
,, ಕೋರಿಸೆಟ್ರು ಸಂಗಪ್ಪನವರು
ವೇ. ವಸ್ತ್ರದ ಸಾಂಬಯ್ಯನವರು
,, ಎ. ಕರವೀರಯ್ಯನವರು ಕ್ಲಾರ್ಕ ತಾಲೂಕ ಆಫೀಸು
ಮ.ರಾ. ಡಿ. ಜಿ. ಕೋರಿ ಕ್ಲಾರ್ಕ ಕ್ಯಾನರಾಬ್ಯಾಂಕ
,, ಸಜ್ಜೇದ ಲಿಂಗಪ್ಪನವರು
ಮ. ರಾ. ಬೆಲ್ಲದ ಚನ್ನಪ್ಪನವರು ಚಿತ್ರವಾಡಿಗಿ

### ಸೊಂಡೂರು

ವೇ. ಡಿ. ಎಂ. ಈಶ್ವರಯ್ಯನವರು

### ಮುದೇನೂರ

ಮ. ರಾ. ಎಂ. ವ್ಹಿ. ಕರೇಗೌಡ್ರು
ಮ. ರಾ. ವೀರನಗೌಡ್ರು ಶಿವನಗೌಡ್ರು ಪಾಟೀಲ

### ಕಂಚಿಕೆರೆ

ವೇ. ಗುರುವಡಿಯರಮಠದ ಕರಿಬಸಯ್ಯನವರು
ಮ. ರಾ. ಶ್ಯಾನಭೋಗರ ಗುರುಸಿದ್ದಪ್ಪನವರು
ಅಂಗಡಿ ಚನ್ನಬಸಪ್ಪನವರು

ಮ. ರಾ. ಚುಚ್ಚಗಟ್ಟದ ಸಂದೆಪ್ಪನವರು
,, ಶ್ಯಾನಭೋಗರ ಕೊಟ್ರಪ್ಪನವರು
ಶ್ರೀಮತಿ ಬಸಲಿಂಗಮ್ಮನವರು

## ಮುಂಡಿಗನಾಳ

ಮ. ರಾ. ನೀಲಕಂಠಗೌಡ್ರು ಬರಮಗೌಡ್ರು ಪಾಟೀಲ
ಮ. ರಾ. ಚನ್ನಬಸನಗೌಡ್ರು ಗುರುನಗೌಡರು ಸಾಲಮನಿ

## ಗದಗ

ಮ. ರಾ. ಬಸನಗೌಡರು ದ್ಯಾಮನಗೌಡರು ಸೂರಪ್ಪಗೌಡರು

## ವಡ್ಡು

ವೇ॥ ಸುಪ್ಪಿ ಪರಯ್ಯನವರು
ವೇ. ಸುಪ್ಪಿ ಬಸಲಿಂಗಯ್ಯನವರು

## ಕುಡತನಿ

ಮ. ರಾ. ಪಲ್ಲೇದ ಲಿಂಗಪ್ಪನವರು
,, ಕಾರೆ ಸಿದ್ರಾಮಪ್ಪನವರು
ಮ. ರಾ. ಪಲ್ಲೇದ ದೊಡ್ಡಪ್ಪನವರು

## ಹೂವಿನಹಡಗಲಿ

ವೇ. ಬಿ. ಎಚ್. ಕೊಟ್ರಪ್ಪಶಾಸ್ತ್ರಿಗಳು
ಮ॥ ರಾ॥ ಎಂ. ಕೆ. ನಾಗಪ್ಪನವರು ಬಿ. ಎ. ಸಬ್ ರಜಿಸ್ಟರ
ವೇ. ಕೋಣನತಂಬಿಗಿಮಠದ ಮುರುಗಯ್ಯನವರು
ಮ॥ ರಾ॥ ಸೊಪ್ಪಿನ ಮಲ್ಲಪ್ಪನವರು ಬಸಲಿಂಗಪ್ಪನವರು

## ಸಿಂಗಟಾಲೂರು

ವೇ॥ ಮಾಗಳ ಪ್ರಸನ್ನದೇವರಮಠದ ಪಂ. ಗಂಗಾಧರಶಾಸ್ತ್ರಿಗಳು

# ಧರ್ಮರಾಜ್ಯ

ಸಂಪುಟ ೧ ❖ ಪ್ರಮಾಥಿನಾಮ ಸಂವತ್ಸರ ಜ್ಯೇಷ್ಠ ❖ ಸಂಚಿಕೆ ೮

ಕೃತದೊಳಾ ತ್ರೇತೆಯೊಳು ದ್ವಾಪರದೊಳಂ ಕ್ರಮದೆ ।
ಮತಿವಂತ "ನಲ-ರಾಮ-ಧರ್ಮ" ನೃಪರಿಂ ॥
ಅತಿಯಶವನಾಂತು ಬಾಳಿದ ತೆರದೊಳೀ "ಕೃಷ್ಣ- ।
ಕ್ಷಿತಿಪಾಲನಿಂ" ಬಾಳು "ಧರ್ಮರಾಜ್ಯ" ! ॥

[ವರಕವಿ ಶ್ರೀ:ವಾ:ಗೀ:ಶ]



ಕರ್ನಾಟಕ ಸಿಂಹಾಸನಾಧೀಶ್ವರ ಶ್ರೀಕೃಷ್ಣರಾಜೇಂದ್ರರು

# ವಿಷಯ ಸೂಚಿಕೆ:—



---

# ಧರ್ಮರಾಜ್ಯ

ಮುಡೇನೂರ " ವೀರಶೈವ ಧರ್ಮಾಲಯು " ದಿಂದ
ಹೊರಡುವ ಮಾಸಪತ್ರಿಕೆ

—***—

| ಸಂಪುಟ ೧ | ಪ್ರಮಾಥಿನಾಮ ಸಂವತ್ಸರ ಜ್ಯೇಷ್ಠ | ಸಂಚಿಕೆ ೮ |
| --- | --- | --- |

## 'ವಸಂತ'

ವರಕವಿ:— ಶ್ರೀವಾಗೀಶ

—0—

ಯ ಸಂತನೋ ? ನೀನೇ ವಸಂತನೋ ? ಚಳಿಗಾಲ
ದಂತನೋ ? ಕಾಮುಕರ ಕಾಂತ ! ಪೇಳು !!
ಸಂತೋಷವನು ನೀನು ಕೊಡುವಿಯೋ? ಭೋಗಿಗಳ
ಚಿಂತೆಯನು ಬಲಗೊಳಿಸಿ ತಿರುಗಿಸುವಿಯೋ ||೧||

ನಿನ್ನ ದಾರಿಯ ಕಾದ ಗಿಡಬಳ್ಳಿ ಹಳೆತನವ
ನನ್ಯಾಯವಾಗಿ ಕಳಕೊಂಡಿರುವುದೇ?
ಚನ್ನಾಯಿತಯ್ಯ ! ನಿನ್ನಾಶ್ರಯವ ಪೊಂದಿದವ
ರನ್ನ ರೂಪವ ತಾಳಬೇಕಾಯಿತೇ ? ||೨||

ಹಳೆತನವ ಕಳೆಯುವುದು ನಿನ್ನ ಕೈಯ್ಯೊಳಗುಂಟೆ ?
ಬಳಿಕೊಮ್ಮೆ ಹೊಸದು ಹಳೆಯದೆ ಆಗದೇ ?
ಹಳೆಯದೇ ಹೊಸದಾಗಿ ಹೊಸದು ಹಳೆಯಾಗುವುದು
ಇಳೆಯೊಳಿದನರಿದರಿದು ಬಡಿವಾಟವೆ ? ||೩||

ಚಿಗುರೆಲೆಯು ನಗುತಿರಲು ಹಣ್ಣೆಲೆಯು ಉಧುರುವುದು,
ಚಿಗುರೆಲೆಗೆ ಹಣ್ಣೆಲೆಯೆ ಮೂಲವಲ್ತೇ ?
ಜಗದ ಹೊಸತನಕೆಲ್ಲ ಹಳೆತನವೆ ಮೂಲವೈ !
ನಗುವರೇಕಯ್ಯ ! ಹಳೆತನಕೆ ಜನರು ? ||೪||

ತಂದೆಯಿಲ್ಲವೆ ಕಂದನುದಯ ಕಾದಿಯು ಪೇಳು ?
ಕಂದನು ಮುಂದೊಮ್ಮೆ ತಂದೆಯಹನ್ನೈ !
ಹಿಂದಿನದೆ ಹೊಸದಾಗಿ ಇಂದಿನದೆ ಹಳೆಯಾಗಿ
ಮುಂದರಿಯೆ ಮಧುಮಾಸ! ನಿನ್ನುದಯವೋ ? || ೫ ||

ಕೋಗಿಲೆಯ ಕಂಠ ನಿನ್ನಾಗಮದೆ ಬಂದಿಹುದೆ ?
ರಾಗಿಯನುರಾಗವೂ ಮಿಗೆ ಬೆಳೆವುದೇ ?
ಭೋಗಿ ಭೂಷಣನು ಬೈರಾಗಿಯಾಗಿಹನೇಕೆ ?
ಬೇಗನೇ ವಾಗೀಶ ಗುರುಹು ನೀನೇ || ೬ ||

---

## ಸೊಂಡೂರು ಶ್ರೀಬಸವ ಜಯಂತಿ ಕಮಿಟಿಯಲ್ಲಿ

## ಶ್ರೀವಾಗೀಶ ಶಿವಾಚಾರ್ಯರ

## ಭಾ ಷ ಣ

—:o:—

ಸಭಿಕ ಮಹೋದಯರೆ! ಈ ದಿನ ಸಭೆಗೆ ಅಧ್ಯಕ್ಷನೂ ನಾನೇ ಆಗಿ ವ್ಯಾಖ್ಯಾನಕಾರನೂ ಆಗಿರುವುದು ನಿಮ್ಮೆಲ್ಲರ ಆಗ್ರಹಮೂಲಕ. ಈ ಮುಂಚೆ ಶ್ರೀಮಾನ್ ಪ್ರಭಣ್ಣನವರೂ, ಎ. ರುದ್ರಪ್ಪನವರೂ, ಎನ್. ರಾಮಚಂದ್ರಶಾಸ್ತ್ರಿಗಳೂ, ಮಿ॥ ಕೆ. ಫಕುರುದ್ದೀನ ಸಾಹೇಬರೂ, ವೇ. ಹೆಚ್. ಬಸವಯ್ಯನವರೂ ಸುಮನೋಹರವಾದ ವ್ಯಾಖ್ಯಾನಗಳಿಂದ ನಿಮಗೆಲ್ಲಾ ಆನಂದವನ್ನುಂಟುಮಾಡಿಯೇ ಇದ್ದಾರೆ. ಹರಪನಹಳ್ಳಿಗೆ ಮುದ್ದಾಂ ತಾರುಕೊಟ್ಟು ನನ್ನನ್ನು ಬರಮಾಡಿಕೊಂಡಿದ್ದಕ್ಕಾಗಿ ನಿಮಗೇನಾದರೂ ನನ್ನ ವ್ಯಾಖ್ಯಾನದಿಂದ ಲಾಭವಾಗಬೇಕು ತಾನೆ. ಈ ಸಭೆಯಲ್ಲಿ ಸಕಲ ಮತೀಯರೂ ಭ್ರಾತೃಭಾವನೆಯಿಂದ ಬಂದು ಕುಳಿತಿರುವುದರ ಕಾರಣವನ್ನೂ ನಾನು ಚನ್ನಾಗಿ ತಿಳಿದುಕೊಳ್ಳಬೇಕಾಗಿದೆ. ವಾಗೀಶ ಶಿವಾಚಾರ್ಯರು ವಿದ್ವಾಂಸರಾದ ಕಾರಣ ನಮ್ಮೆಲ್ಲರಿಗೂ ಯುಕ್ತವಾಗುವ ರೀತಿಯಲ್ಲಿ ಬೋಧಿಸುವರೆಂಬ ನಂಬಿಗೆ ನಿಮ್ಮೆಲ್ಲರಿಗೂ ಬಲವಾಗಿದೆ. ಈ ವಿಷಯದಲ್ಲಿ ಈ ಮೊದಲೇ ಒಂದುಸಾರೆ ನೀವು ಕೆಲವರಾದರೂ ನನ್ನನ್ನು ಪರೀಕ್ಷಿಸಿದ್ದೀರಿ. ನಾವು ನೀವೆಲ್ಲರೂ ಒಂದೆಂಬ ವಿಚಾರವು ತತ್ವಾಧ್ಯಯನದಿಂದುಂಟಾಗುವುದು ಯಾರೊಬ್ಬ ಮತಾಚಾರ್ಯರ ಹಾಗೂ ಶರಣರ ಜಯಂತಿ ಹಾಗೂ ಪುಣ್ಯದಿನಗಳಲ್ಲಿ ನಾವು ನಮ್ಮ ಮತವಿಚಾರವನ್ನು ಮರೆತು ಸೇರಿಕೊಂಡು ಬರುತ್ತಿರುವುದಾದರೂ ಕೇವಲ ತತ್ತ್ವಗ್ರಹಣಕ್ಕಾಗಿಯೇ ಹೊರತು ಬೇರೆಯದಕ್ಕಲ್ಲ. ಹಿಂದಿನ ಸಕಲ ಮತದ ಆಚಾರ್ಯರಾಗಲಿ, ಶರಣರಾಗಲಿ ಎಲ್ಲರೂ ನಮ್ಮವರೇ. ಜಗತ್ತಿನಲ್ಲಿ ಅನ್ಯರಾರೂ ಇಲ್ಲ, ದೇವನೊಬ್ಬ ಜೀವನೊಬ್ಬ ಎಂದು ಉಪದೇಶ ಮಾಡಿದುದಾದರೂ ಈ ತತ್ತ್ವದ

ಆಧಾರದ ಮೇಲೆಯೇ ಹೊರತು ಅದಕ್ಕೆ ಮತ್ತಾವುದೂ ಸಮರ್ಥವಾದ ದಾರಿಯಿಲ್ಲ. ಈ ತತ್ತ್ವಾಭ್ಯಾಸದ ಭರದಲ್ಲಿ ಕರ್ಮಯುಗವನ್ನೇ ಮರೆತ ದಿಗಂಬರ ಶುಕಾದಿ ಮುನಿಗಳು ಲೋಕಕ್ಕೆಲ್ಲಾ ಆದರ್ಶಪ್ರಾಯರಾಗಿದ್ದಾರೆ. ನಮಗೆ ಇಂದು ಅಂತಹ ತತ್ತ್ವಜ್ಞಾನಿಗಳಿಬ್ಬರ ಜಯಂತಿ-ಜನ್ಮದಿನಗಳು ಪ್ರಾಪ್ತವಾಗಿವೆ. ಆ ವಿಧವಾದ ಅವರ ತತ್ತ್ವಜ್ಞಾನವೇ ನನ್ನನ್ನು ಮಾತನಾಡುವಂತೆಯೂ, ನಿಮ್ಮನ್ನು ಕೇಳುವಂತೆಯೂ ಪ್ರೇರಿಸಿದೆ.

ಹಿಂದಿನ ಯಾವ ಮತದ ಆಚಾರ್ಯರ ಹಾಗೂ ಶರಣರ ಅಥವಾ ದಾಸರ ವಿಷಯವನ್ನು ವಿವೇಚಿಸಿ ನೋಡಿದರೂ ಪ್ರತಿಯೊಬ್ಬರ ಮಾರ್ಗಗಳೂ, ವಿಚಾರಸರಣಿಯೂ ತೀರ ಭಿನ್ನವಾಗಿವೆ ಎಂಬುದು ಸ್ಪಷ್ಟವಾಗಿಯೇ ಇದೆ. ನಾವು ಅವರ ವಿಷಯಗಳನ್ನು ತಿಳಿಯುವದಕ್ಕೆ ಎತ್ತಿಸುವುದಾದರೆ ಪ್ರಧಾನವಾಗಿ ತಾತ್ತ್ವಿಕ ದೃಷ್ಟಿಯನ್ನನುಸರಿಸುವುದೇ ಮಿಗಿಲಾಗಿದೆ. ಈ ದೃಷ್ಟಿಯಲ್ಲಿ ಯಾವ ಬಗೆಯ ಲೋಪಗಳೂ ಬರಲವಕಾಶವಿಲ್ಲ. ಅಂತಹ ತತ್ತ್ವ ಪೂರ್ಣವಾದ ಅವರ ವಿಚಾರಗಳನ್ನು ಕರ್ಮರಂಗಕ್ಕೆ ತರಬಹುದಾದರೂ ಅಲ್ಲಿಯೂ ಪ್ರಧಾನವಾಗಿ ತಾತ್ತ್ವಿಕ ದೃಷ್ಟಿಯೇ ಬೇಕು. ಈ ದೃಷ್ಟಿಯಿಲ್ಲದೆ ನಾವು ಅವುಗಳಲ್ಲಿ ಕೈಹಾಕಿದೆವೆಂದರೆ ಭಿನ್ನಾಭಿಪ್ರಾಯಗಳು ಬಂದೊದಗಿ ಮನಸ್ಸಿಗೆ ಖೇದವೆನಿಸುವುದು.

ತಾತ್ತ್ವಿಕದಲ್ಲಿ ಕಲಹವಿಲ್ಲ, ಭೇದವಿಲ್ಲ, ಬ್ರಾಹ್ಮಣ್ಯವಿಲ್ಲ, ಹೊಲೆ ನೊದಲಿಲ್ಲ. ಈ ಸರಣಿಯೇ ತತ್ತ್ವಾರೂಢರಾದ ಆಚಾರ್ಯರ-ಶರಣರ-ದಾಸರ ನುಡಿ ಮತ್ತು ನಡೆ. ಇಂದಿನ ಅನುಭವ ಮಂಟಪವಾಗಲಿ ಹಿಂದಿನ ಶಿವಾನುಭವ ಮಂಟಪವಾಗಲಿ ಈ ತತ್ತ್ವಾನುಸಂಧಾನಕ್ಕಾಗಿ ಉಂಟಾದವುಗಳು. ಯಾರೇ ಆಗಲಿ ಈ ಅನುಸಂಧಾನಕ್ಕಿಳಿಯಬೇಕಾದರೆ ಮನಸ್ಸಿನ ಮೇಲೆ ಯಾವುದೋ ಒಂದು ವಿಲಕ್ಷಣವಾದ ಪರಿಣಾಮವುಂಟಾಗಬೇಕಾಗುವುದು. ನಮ್ಮ ಅನೇಕ ಶರಣ ತತ್ತ್ವಾಚರಣೆಯು ಕೇವಲಾದ್ವೈತವನ್ನೇ ಹೋಲುತ್ತಿದ್ದರೂ

ಜ್ಞಾನೇ ಸಿದ್ಧೇಽಪಿ ವಿದುಷಾಂ
ಕರ್ಮಾಪಿ ವಿನಿಯುಜ್ಯತೇ ।
ಅಂಧಪಂಗುವದನ್ಯೋಽನ್ಯಂ
ಸಾಪೇಕ್ಷೇ ಜ್ಞಾನ ಕರ್ಮಣೀ ॥

ಎಂಬಂತೆ ಮತದ ಮೂಲ ಚಿಹ್ನವಾದ ಶಿವಲಿಂಗವನ್ನೂ ಅವರು ಬಿಟ್ಟಿರಲಿಲ್ಲವಾಗಿ ಇದುವೇ ಇವರಿಗೆ ಕರ್ಮವಾಗಿದ್ದಿತೆಂದು ತಿಳಿಯುವುದು. ಪರಮತೀಯ ಹಾಗೂ ಸ್ವಮತೀಯ ಶರಣರಲ್ಲಿ ಇದೇ ಇಷ್ಟು ಪ್ರಧಾನವಾದ ಭೇದವು. ಆದರೆ ಪರಮತೀಯರ ಸನ್ಯಾಸಸ್ಥಲವೂ ನಮ್ಮ ಶರಣರ ಶರಣಸ್ಥಲವೂ ಒಂದೇ ಶ್ರೇಣಿಯವುಗಳೆಂದು ತಿಳಿದುಬರುವದು. ಪರಮತೀಯರಲ್ಲಿ ಯಾರಾದರೂ ಸನ್ಯಾಸಿಗಳಾಗಲು ಬರುವಂತೆ ನಮ್ಮಲ್ಲಿ ಯಾವ ಮತಿಕರಾದರೂ (ಲಿಂಗಧಾರಕರು ಮಾತ್ರ) ಶರಣರಾಗಲು ಬರುವುದೆಂಬುದು ಮೊದಲಿನಿಂದಲೂ ಸಾಗಿ ಬಂದ ದಾರಿಯಾಗಿದೆ. ಆದರೆ ಇಲ್ಲಿ ವಿವೇಕವಿಷ್ಟೇ:— ಪರಮತೀಯ ಸನ್ಯಾಸಿಗಳಿಗೆ ಕರ್ಮದ ಮೇಲೆ ಅಧಿಕಾರವಿಲ್ಲದಿರುವಂತೆ ನಮ್ಮ ಶರಣರಿಗೂ ಇದ್ದಿಲ್ಲ. ಆದುದರಿಂದ ನಮ್ಮ ಹಿಂದಿನ ಕಾಲದ ಶರಣರು ಸನ್ಯಾಸಿಗಳಂತೆ ಕೇವಲ ಜ್ಞಾನಮಾರ್ಗ ಬೋಧಕವಾದ ಹಾಡುಗಳನ್ನೂ ಕಟ್ಟಿ ಅವನ್ನೂ ಪ್ರಚಾರಗೊಳಿಸಿ ಜ್ಞಾನಿಯ ಲಕ್ಷಣಗಳನ್ನು ಸ್ಥಿರಪಡಿಸಿದರು.

ಪುರಂದರದಾಸ, ಕನಕದಾಸ, ರಾಮದಾಸ, ಕಬೀರದಾಸ ಮೊದಲಾದವರೂ ಶರಣರೇ. ಅವರ ನುಡಿಗಳೂ ಸಹ ಶರಣರ ವಚನಗಳಂತೆ ಜ್ಞಾನಮಾರ್ಗವನ್ನೂ ಬೋಧಿಸಿ ಮನುಷ್ಯನನ್ನು ಸಂಸಾರ ಪಾಶದಿಂದ ಬಿಡಿಸಲು ಸಮರ್ಥವಾಗಿವೆ. ಬಸವಣ್ಣನವರು ಸ್ವತಃ ಹುಟ್ಟು ಬ್ರಾಹ್ಮಣರು. ಯದ್ಯಪಿ ಅವರಿಗೆ ವೀರಶೈವರ ತತ್ತ್ವಶಾಸ್ತ್ರವು ಮನಾನಂದಕರವಾಗಿ ಪರಿಣಮಿಸಿದರೂ ಜ್ಞಾನಮಾರ್ಗದಲ್ಲಿ ಸ್ಮಾರ್ತರ ಸ್ಮೃತಿಪಥವನ್ನೇ ಕೊನೆಯುವರೆಗೂ ಪ್ರಚಾರಿಸುತ್ತ ಬಂದರು. ಇದೇನೇ ಸ್ಮೃತಿಗಳಲ್ಲಿಯ ಸನ್ಯಾಸ ಮಾರ್ಗವು ಇವರಿಗೆ ಬಾಲ್ಯದಲ್ಲಿಯೇ ತತ್ತ್ವೋಪದೇಶಕರಾದ ಜಾತವೇದಿ ಮುನಿಗಳ ಸಾಮರ್ಥ್ಯವು ಘನವಾಗಿರಲೇಬೇಕು, ಇಲ್ಲದಿದ್ದರೆ ವೇದಾಧ್ಯಯನ ಸಂಪನ್ನನಾದ ಬ್ರಾಹ್ಮಣಪಟು ವನ್ನು ಸ್ವಜಾತೀಯವಾದ ಮುಂಜಿ ಕರ್ಮದಿಂದ ತ್ಯಾಗಗೊಳಿಸಿ ಶಿವದೀಕ್ಷಾಬದ್ಧನನ್ನಾಗಿ ಮಾಡು ವದಕ್ಕೆ ಸಾಧ್ಯವೇ. ಇಂತಾಗಿ ಬಸವಣ್ಣನವರಿಗೆ ಬಾಲ್ಯದಿಂದಲೂ ಜ್ಞಾನಮಾರ್ಗವೇ ಆನಂದ ಕರವಾಗಿ ಪರಿಣಮಿಸಿ ತತ್ತ್ವದಲ್ಲಿ ತಲ್ಲೀನರನ್ನಾಗಿ ಮಾಡಿ ವಚನರಚನಾಕಾರ್ಯದಲ್ಲಿ ಪ್ರವೃತ್ತರನ್ನಾಗಿ ಮಾಡಿತು. ಮುಂದೆ ಇವರ ಈ ಜ್ಞಾನೋಪದೇಶವು ಸರ್ವಮತಿಕರನ್ನೂ ಸೆಳೆದುತರಹತ್ತಿತು. ಅದೇ ಇವರಿಗೆ ದೊಡ್ಡ ಸಂಸಾರವಾಗಿ ಇವರ ಪೋಷಣೆಯ ಭಾರವೂ ಬಸವಣ್ಣನವರ ಮೇಲೆ ಬಿದ್ದಿತು. ಬಸವಣ್ಣನವರು ಬಿಜ್ಜಳನಲ್ಲಿ ಮಂತ್ರಿತ್ವವನ್ನು ಸ್ವೀಕರಿಸಿದ ಉದ್ದೇಶದಲ್ಲಿ ಅನೇಕರು ಭಿನ್ನಾಭಿಪ್ರಾಯಪಡುವರು. ಗುರು-ಜಂಗಮ ದಾಸೋಹಕ್ಕಾಗಿಯೆಂದು ಕೆಲವರೂ, ತಮ್ಮ ಮಾವನಾದ ಬಲದೇವ ಮಂತ್ರಿಗಳ ಪ್ರೋತ್ಸಾಹದಿಂದ ಎಂದು ಕೆಲವರೂ, ಇನ್ನೂ ಕೆಲವರು ಇನ್ನನೇಕರೀತಿಯಾಗಿ ಹೇಳುವರು. ಹೀಗಾಗಿ ನಾವು ಯಾವುದು ಸತ್ಯವೋ? ಯಾವುದು ಅಸತ್ಯವೋ? ಸಾಮಾನ್ಯಜನರು ತಿಳಿಯಲು ಅಸಾಧ್ಯವಾಗಿದೆ. ಬಸವಣ್ಣನವರ ವಿಚಾರವೇ ಆಗಲಿ ಆಚಾರ್ಯರ ವಿಚಾರವೇ ಆಗಲಿ ಹಿಂದಿನ ಪುರಾಣಾದಿಗಳನ್ನು ಅವಲೋಕಿಸುವದರಿಂದ ಒಂದಕ್ಕೊಂದು ಅಸಮಂಜಸವಾಗಿರುವದು ಪ್ರತ್ಯಕ್ಷವಾಗಿದೆ. ನಾವೀಗ ಅವುಗಳನ್ನೇ ಆಧಾರವಾಗಿಟ್ಟು ನಡೆಯಬೇಕೆಂದರೆ ಕಾಲವು ಒಪ್ಪುವುದಿಲ್ಲ. ಮನವೂ ಒಪ್ಪುವುದಿಲ್ಲ. ನಾವು ಮುಖ್ಯವಾಗಿ ಅವರವರ ತತ್ತ್ವಗಳನ್ನಷ್ಟು ಗ್ರಹಿಸಿ ನಡೆದರೆ ಸಾಕಾಗಿದೆ. ಬಸವಣ್ಣನವರು ಜಾತಿಸಂಕರವನ್ನು ಮಾಡಿದರೆಂದ ವಿರೋಧದಿಂದ ಒಂದು ವರ್ಗದವರು ಹೇಳಿದರೆ ಇನ್ನೊಂದು ವರ್ಗದವರು ಈ ವಿಚಾರವನ್ನು ಪ್ರೇಮದಿಂದ ಸತ್ಯವೆಂದು ಒಪ್ಪಿಕೊಳ್ಳುವರು. ನನ್ನ ದೃಷ್ಟಿಯಲ್ಲಿ ಈ ಎರಡು ಉಪಾಯಗಳೂ ತಪ್ಪು. ತತ್ತ್ವವೇ ಪ್ರಧಾನವೆಂದು ಸಾಗಿಹೋದ ಶರಣರಲ್ಲಿ ಈ ವಿಧವಾದ ಆರೋಪವು ಎಂದಿಗೂ ಸಲ್ಲದು. ನಿಮ್ಮ ವರ್ಗದವರ ಸಂಬಂಧವನ್ನು ಸ್ವತಃ ಮಾಡಿಸಿದರೆಂದು ಹಿಂದಿನ ಪುರಾಣಗಳಿಂದ ಸಿದ್ಧಮಾಡಲು ಹೊರಟವರ ಪ್ರಯತ್ನವು ಅದೇ ಸಿಂಗಿರಾಜ ಪುರಾಣ-ಬಸವರಾಜ ರಗಳೆ ಮುಂತಾದವುಗಳಿಂದ ಪೂರ್ಣ ವಿಫಲವಾಗುವುದು. ವೀರಶೈವರ ವಿಧವಾವಿವಾಹವನ್ನು ಬಸವಣ್ಣನವರು ಎಂದೋ ಜಾರಿಗೆ ತಂದರೆಂದೂ ಅದರಂತೆ ಸಮಾಜವು ಆಚರಿಸಬೇಕೆಂದೂ ಕೆಲ ಸುಧಾರಣಾವಾದಿಗಳು ಹೇಳುವರು, ಇದು ಶುದ್ಧ ಅವಿವೇಕವು. ವೀರಶೈವ ಸಿದ್ಧಾಂತವು ವಿಧವಾವಿವಾಹವನ್ನೊಪ್ಪಿಲ್ಲ, ಅದರಂತೆ ಬಸವಣ್ಣನವರೂ ಆ ವಿಚಾರದಲ್ಲಿ ಒಪ್ಪಿಲ್ಲ. ಈ ವಿಷಯವು ಬಸವ ಚರಿತ್ರೆಯನ್ನೋದಿದವರಿಗೆ ಗೊತ್ತಾಗಬಹುದು. ಇದರಂತೆ ಬಸವಣ್ಣನವರು ಕಂಡಕಂಡ ಜಾತಿಯವರಿಗೆಲ್ಲಾ ಲಿಂಗವನ್ನು ಕಟ್ಟಿಸಿದರೆಂದು ಒಂದು ಅಪವಾದವು ಜಗತ್ತಿನಲಿ ಬಹು ಜನರ ಮಾತಾಗಿದೆ. ಆದರೆ ಇದಕ್ಕೆ ವಿರೋಧವಾಗಿ " ಶಕ್ತಿಪಾತಂ ಸಮಾಲೋಕ್ಯ ಯೋಜಯೇದ್ದೀಕ್ಷಯಾ ಗುರುಃ " ಎಂಬ ಪ್ರಮಾಣವನ್ನು ಸ್ವಲ್ಪವೂ ಮೀರದಂತೆ ಬಸವಣ್ಣನವರು ಆಚರಿಸಿ ಸಿಕ್ಕವರಿಗೆಲ್ಲಾ ಲಿಂಗ ಕೊಡುವುದು ಪೂರ್ಣತಪ್ಪೆಂದು ಹಾಡಿರುವ ವಚನಗಳೂ

ಹೇರಳವಾಗಿರುವವು. "ಕುಂಬಳಕಾಯಿಗೆ ಕಬ್ಬುನದ ಕಟ್ಟ ಕೊಟ್ಟರೆ ಕೊಳೆಯವೆ ಇದ್ದೀತೆ? ..........." "ಶಗಣಿಯು ಬೆನಕಂಗೆ ಸಂಪಿಗೆಯ ಹೂವಿನಿಂದ......" ಮುಂತಾದ ಈ ವಚನಗಳಿಂದ ಮೇಲಿನ ಅರ್ಥವೇ ಹೊರಡುವುದು.

ಹರಳಯ್ಯ-ಮಧುವಯ್ಯಗಳ ಶರೀರಸಂಬಂಧಕ್ಕೆ ಅದಾವುದೋ ಒಂದು ವಿಧವಾದ ಲೌಕಿಕದ ವ್ಯಭಿಚಾರ ಪೂರ್ಣವಾದ ಪ್ರೇಮವು ಕಾರಣವಾಗಿ ಅನಂತರ ಜನಗಳ ತೋರಿಕೆಗೆ ವರ್ಣಗಳಲ್ಲಿ ವ್ಯತ್ಯಾಸವೇನೂ ಇಲ್ಲವೆಂದು ಹೇಳಿದಂತೆ ಮಾಡಿ ಕೂಡಿಕೊಂಡಿರಬೇಕೇ ಹೊರತು ಇವಕ್ಕೆ [ ಈ ವರ್ಣಸಾಂಕರ್ಯಕ್ಕೆ] ಯಾವ ವಿಧಿಯೂ ಇಲ್ಲ. ನಮ್ಮ ಬಸವಣ್ಣನವರು ಹರಳಯ್ಯ ಮಧುವಯ್ಯಗಳ ಶರೀರಸಂಬಂಧ ಬೆಳೆಸಿ ಲೋಕಕ್ಕೇ ಮಾರ್ಗದರ್ಶಕರಾದರೆಂದು ಅನೇಕರು ಅಟ್ಟಹಾಸದಿಂದ ಸಾರುವರು. ಶರಣಲೀಲಾಮೃತ ಮೊದಲಾದ ಇತ್ತೀಚಿನ ಕೆಲ ಅಸಂಬದ್ಧ ಕಾವ್ಯಗಳ ಆಧಾರಕ್ಕೂ ಪೂರ್ವದ ಶಿಂಗಿರಾಜ ಪುರಾಣಾಧಾರಕ್ಕೂ ಎಷ್ಟೋ ವ್ಯತ್ಯಾಸವಿವೆ. ಇದಕ್ಕೆ ಹಿಂದೆ ಹೋದರೆ ಆ ಗ್ರಂಥಗಳಲ್ಲಂತೂ ತೀರಾ ವ್ಯತ್ಯಾಸವು ಕಂಡುಬರುವುದು ಆದುದರಿಂದ ಈ ದುರಪವಾದವನ್ನು ಬಸವಣ್ಣನವರ ಮೇಲೆ ಹೊರಿಸುವುದಕ್ಕಿಂತಲೂ ಆ ಕಾರ್ಯದಲ್ಲಿ ಪ್ರವೃತ್ತರಾದ ಆಕಾಲದ ಪುಂಡ-ಮಿಂಡರೆಂಬ ಪಲ್ಯಾಣ್ಣಿನ ಮೇಲೆ ಹೊರಿಸುವುದೇ ಯೋಗ್ಯವಾಗಿದೆ.

ಇಲ್ಲಿಯ ವರೆಗೆ ಹೇಳಿದ ವಿಷಯು ಶರಣರದು. ಇನ್ನು ಈ ದಿನದ ಈ ಮಹೋತ್ಸವಕ್ಕೆ ಕಾರಣರಾದ ಮಹಾಚಾರ್ಯ ಶ್ರೀ ಏಕೋರಾಮರ ವಿಷಯವನ್ನು ಸ್ವಲ್ಪ ಹೇಳಬೇಕಾದರೆ ಈ ಮಹಾಗುರುಗಳು ದ್ವಾಪರಯುಗದ ಕೊನೆಯಲ್ಲಿದ್ದವರು. ಇವರು ವೇದಾಗಮ ಮಾರ್ಗವಿಡಿದು "ಅಧಿಕರಣ ಭಾಷ್ಯ"ವನ್ನು ರಚಿಸಿ ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತವನ್ನು ಅಖಂಡ ಭೂಮಂಡಲದಲ್ಲೆಲ್ಲಾ ಹರಡಿದರು. ಇವರು ಮಹಾ ಜ್ಞಾನಿಗಳೂ ಈಶ್ವರ ಸ್ವರೂಪಿಗಳೂ ಆಗಿದ್ದರಲ್ಲದೆ ಪಂಚಾಚಾರ್ಯ ಪೀಠಗಳಲ್ಲೊಂದಾದ ಕೇದಾರಪೀಠದ ಅಧಿಪತಿಗಳಾಗಿ ಉತ್ತರ ಭಾರತದಲ್ಲಿಯೂ ವೀರಶೈವ ಸಂಸ್ಕೃತಿಯನ್ನು ಭದ್ರಗೊಳಿಸಿದರು. ಕಾಶ್ಮೀರ, ನೇಪಾಳ ಮುಂತಾದ ಕಡೆ ಶಿವ ಸಿದ್ಧಾಂತವು ವ್ಯಾಪಿಸಿ ಸರ್ವರೂ ಶಿವಲಿಂಗಧಾರಿಗಳಾದುದು ಈ ಮಹಿಮರ ಹಾಗೂ ಶ್ರೀಕಾಶೀ ವಿಶ್ವಾರಾಧ್ಯಪೀಠದ ಮಹಾಗುರು ಶ್ರೀವಿಶ್ವಾರಾಧ್ಯರ ಪ್ರಭಾವ ವಿಶೇಷದಿಂದಲ್ಲದೆ ಬೇರೆಯಲ್ಲ. ಏಕೋರಾಮ ಶಿವಾಚಾರ್ಯರು ವೀರಶೈವ ಮತವನ್ನು ಎಲ್ಲೆಲ್ಲಿಯೂ ಪ್ರಸಾರ ಮಾಡಿದ್ದರಾಗಿ ಬಸವಪುರಾಣದ ನಾರದೋಕ್ತಿಯಿಂದ ವೇದ್ಯವಾಗುವುದು. ಅಥವಾ ಈ ಪುರಾಣ ರಚನಾಕಾರನ ಅಭಿಪ್ರಾಯವಾದರೂ ಆಗಬಹುದು. ಈ ಏಕೋರಾಮ ಶಿವಾಚಾರ್ಯರನ್ನು ಕೆಲವರು ಏಕೋರಾಮಿ ತಂದೆಗಳೆಂದು ಭಾವಿಸಿರುವುದು ಪೂರಾ ತಪ್ಪು. ಅಷ್ಟಾವರಣದಲ್ಲಿ ಜಂಗಮ ಸ್ಥಲವು ಮಿಗಿಲಾಗಿರುವಂತೆ ಷಟ್ ಸ್ಥಳಗಳಲ್ಲಿ ಶರಣ ಸ್ಥಳವು ಮಿಗಿಲಾಗಿದೆ. ನಮಗೆ ಆಚಾರ್ಯರೂ ಶರಣರೂ ಉಭಯರೂ ಬೇಕು.

ಇತ್ತೀಚಿನ ಸುಧಾರಕರನೇಕರು ಅನೇಕ ನೂತನ ಮತಗಳನ್ನು ಸೃಷ್ಟಿಮಾಡುತ್ತ ಜಗತ್ತಿಗೆಲ್ಲಾ ಅಶಾಂತಿಯನ್ನೊಡ್ಡಿದ್ದಾರೆ. ನಾವು ಯಾರ ಮಾತಿನಂತಾದರೂ ನಡೆಯುವುದಕ್ಕೆ ಮುನ್ನ ಆ ಮಾತಿನ ತಾರತಮ್ಯ ಜ್ಞಾನವನ್ನು ಪೂರ್ಣವಾಗಿ ಪಡೆದವರಾಗಿದ್ದರೆ ಒಳ್ಳೆಯದು. ಒಟ್ಟಿನ ಮೇಲೆ ತತ್ತ್ವಶಾಸ್ತ್ರದಲ್ಲಿ ಗುಣಕ್ಕೆ ಮನ್ನಣೆಯಿದೆ.

"ಗುಣಾಃ ಪೂಜಾಸ್ಥಾನಂ
ಗುಣಿಷು ನಚಲಿಂಗಂ ನಚವಯಃ" ||

ನಾವೀ ಸಭೆಯಲ್ಲಿ ಸೇರಿದವರೆಲ್ಲರೂ ಗುಣಗ್ರಾಹಿಗಳಾಗುವುದು ಮುಖ್ಯವಲ್ಲವೆ? ಯಾರು ಯಾವ ಮತವನ್ನು ಅಲ್ಲಗಳೆಯುವುದಾಗಲಿ ಅಥವಾ ಪ್ರಶಂಸೆ ಮಾಡುವುದಾಗಲಿ ಎರಡೂ ಅನ್ಯಾಯ ಮಾರ್ಗಗಳು. ಒಟ್ಟಿನಮೇಲೆ ಎಲ್ಲಾ ಮತಗಳಲ್ಲಿಯ ತತ್ತ್ವಗಳಿಗೆ ಸಾಮರಸ್ಯವನ್ನುಂಟುಮಾಡುವುದು ಮಾತ್ರ ಗುಣಗ್ರಾಹಿಯ ಕಾರ್ಯವಾಗಿದೆ. ನಮ್ಮ ಅನೇಕ ಬಂಧುಗಳು ಇನ್ನೂ ಸಂಕುಚಿತ ದೃಷ್ಟಿಯಲ್ಲಿಯೇ ಸಾಗಿದ್ದಾರೆ ನಾವು ಅವರನ್ನು ಎಚ್ಚರಗೊಳಿಸುವ ಮೊದಲು ಆ ಎಚ್ಚರಿಕೆಯನ್ನು ಸ್ವತಃ ಹೊಂದುವುದೇ ಮೇಲು.

ಮಹೋದಯರೆ! ನೀವು ಕೈಕೊಂಡಿರುವ ಉದ್ದೇಶದೊಡನೆ ಸ್ವಲ್ಪ ದೃಷ್ಟಿಯನ್ನು ವ್ಯಾಪಕಗೊಳಿಸಿರಿ. ಬಸವಜಯಂತಿ ಕಮಿಟಿ ಎಂಬ ಹೆಸರಿಗೆ ಬದಲಾಗಿ ಜಯಂತಿ ಕಮಿಟಿ, ಜಯಂತೀ ಫಂಡು ಎಂಬ ಹೆಸರಿಟ್ಟು ಎಲ್ಲಾ ಆಚಾರ್ಯರ ಜಯಂತಿಗಳನ್ನೂ ಶ್ರೀಬಸವಣ್ಣನವರ ಜಯಂತಿಯನ್ನೂ ಸಮಾನತೆಯಿಂದ ಸಾಗಿಸಿರಿ. ಇನ್ನೂ ಹೇಳಬೇಕಾದುದು ಬಹಳವಿದೆ. ಸಮಯವೂ ಗತಿಸಿದೆ. ಒಟ್ಟಿನ ಮೇಲೆ ಮುಂದಿನ ವರ್ಷದಲ್ಲಿಯೇ ನನ್ನ ಹೇಳಿಕೆಯು ಫಲರೂಪದಲ್ಲಿ ಬರುವಂತೆ ಯತ್ನಿಸುವ ಸಾಹಸವನ್ನು ಕೈಕೊಳ್ಳುವ ಶಕ್ತಿಯನ್ನು ಶಕ್ತಿಪತಿಯೇ ಅನುಗ್ರಹಿಸಲಿ. ಇತ್ಯಾದಿ

(ಪ್ರೇಕ್ಷಕ ಶ್ರೋತೃ)

---

# ಸ್ತ್ರೀ ಶಿಕ್ಷಣ

ಬರಹಗಾರರು: ಶ್ರೀಮತಿ ಪಾರ್ವತಿದೇವಿ ಕೇಸರಿಯವರು

ವಿದ್ಯೆ ಎಂಬುವ ಮಂಗಳಕರವಾದ ಶಬ್ದವು ಪುನಃ ಪುನಃ ನಮ್ಮ ಹಿಂದೂ ಗ್ರಂಥಗಳಲ್ಲಿ ಉಪಯೋಗಿಸಲ್ಪಟ್ಟಿದೆ. ಮತ್ತು ಅನೇಕ ದೊಡ್ಡ ಕವಿಗಳು ಆ ಶಬ್ದದ ವಿಷಯವಾಗಿ ದೊಡ್ಡ ವ್ಯಾಖ್ಯಾನಗಳನ್ನು ಮಾಡಿ ಜನರ ಹಿತವನ್ನು ಕೋರಿದ್ದಾರೆ. ಆದರೂ ಇನ್ನೂ ನಮ್ಮ ಜನಾಂಗವು ಅಷ್ಟು ವಿದ್ಯೆಯ ವಿಷಯಕ್ಕೆ ಉಚ್ಚ

ಭಾವನೆಯನ್ನು ಕಂಡಿಲ್ಲ. ಅದರಲ್ಲೂ ಸ್ತ್ರೀಶಿಕ್ಷಣವೆಂದರಂತೂ ಹೆದರೇ ಬಿಡುತ್ತಾರೆ.

ಲೋಕದಲ್ಲಿ ಸ್ಥೂಲದೇಹವನ್ನು ಬೆಳೆಸುವುದಕ್ಕೆ ಆಹಾರವು ಹೇಗೆ ಅವಶ್ಯಕವೊ ಹಾಗೆಯೇ ಜ್ಞಾನವೆಂಬ ದೇಹವನ್ನು ಬೆಳೆಸುವುದಕ್ಕೆ ವಿದ್ಯೆ ಎಂಬ ಆಹಾರವು ಅವಶ್ಯಕ. ವಿದ್ಯೆಯಿಂದ ವಿನಯವಿವೇಕಾದಿ ಸಮಸ್ತ ಸದ್ಗುಣಗಳೂ ಬರುತ್ತವೆ. ವಿದ್ಯಾವಂತರು ತಮ್ಮ ವಿದ್ಯೆಗೆ ತಕ್ಕಂತೆ ಸದ್ವರ್ತನೆಯನ್ನು ಹೊಂದಿ ಗೌರವದಿಂದ ಜೀವನ ಮಾಡುತ್ತಿರುವದೇ ಉದಾಹರಣೆಯಾಗಿವೆ. ಜ್ಞಾನಾಭಿವೃದ್ಧಿಗೆ ವಿದ್ಯೆಯೇ ಮುಖ್ಯವಾದ ಸಾಧನವಾದುದರಿಂದ ನಮ್ಮ ಹಿರಿಯರು "ವಿದ್ಯಾವಿಹೀನಃ ಪಶುಃ" ಎಂದು ವಿದ್ಯಾವಿಹೀನರನ್ನು ಪಶುಗಳಿಗೆ ಹೋಲಿಸಿರುವುದೇನು ಅನ್ಯಾಯವಲ್ಲ. ಆದುದರಿಂದ ಜ್ಞಾನಾಭಿವೃದ್ಧಿಗೆ ಕಾರಣವಾದ ವಿದ್ಯೆಯು ಪುರುಷರಿಗೆ ಹೇಗೋ ಸ್ತ್ರೀಯರಿಗೂ ಹಾಗೆಯೇ ಪರಮ ಪ್ರಯೋಜನಕಾರಿ ಎನ್ನುವುದರಲ್ಲಿ ಸಂದೇಹವಿಲ್ಲ. ವಿದ್ಯಾವಂತರ ಮನಸ್ಸು ಯಾವಾಗಲೂ ಶಾಂತವಾಗಿರುವದರಿಂದ ಅವರು ಸರ್ವದಾ ಸುಖಿಗಳಾಗಿರುತ್ತಾರೆ. ಜ್ಞಾನವಿದ್ದವರಿಗೂ ಕೂಡ ದುಃಖಗಳು ಬಿಟ್ಟಿಲ್ಲವಾದುದರಿಂದ ಸುಮ್ಮನೆ ಸುಖಪಡುವ ಕಾಲದಲ್ಲಿ ವಿದ್ಯಾಭ್ಯಾಸದಲ್ಲಿ ವ್ಯರ್ಥವಾಗಿ ಕಾಲಹರಣ ಮಾಡುವುದರಲ್ಲಿ ಫಲವೇನು ಎಂದು ಅನೇಕರು ಹೇಳುವರು. ಆದರೆ ವಿದ್ಯಾವಂತರು ಮೂಢರಂತೆ ಸಂಕಟ ಬಂದ ವೇಳೆಯಲ್ಲಿ ಚಿಂತೆಯಲ್ಲಿ ಮಗ್ನರಾಗದೆ ತಕ್ಕ ಉಪಾಯಗಳನ್ನು ಹುಡುಕಿಕೊಂಡು ಸಂತೋಷಚಿತ್ತದಿಂದ ಇರುವರು.

ವಿದ್ಯಾವಂತರಿಗೆ ಎಂತಹ ದುಃಖವು ಘಟಿಸಿದರೂ ಅದು ಗೊತ್ತುಕೂಡ ಆಗಲಾರದು. ಜ್ಞಾನಹೀನರಾದವರಿಗೆ ಈ ಸುಖದ ಸ್ವರೂಪವೇ ಗೊತ್ತಿಲ್ಲವಾದುದರಿಂದ ಈ ಲೋಕದ ಕ್ಷಣಿಕ ಸುಖದ ಆಶೆಯಿಂದ ಹಗಲೂ ಇರುಳೂ ಕಷ್ಟಪಡುವರು. ಆ ಸುಖವು ತಪ್ಪಿದ ಕೂಡಲೆ ಮೃತ್ಯುಪ್ರಾಯರಾಗುತ್ತಾರೆ. ಮನುಷ್ಯ ಧರ್ಮವನ್ನು ಬಿಟ್ಟು ಪಶುವೃತ್ತಿಯಲ್ಲಿರಬೇಕೆನ್ನುವವನು ಮಾತ್ರ ವಿದ್ಯೆಯು ಅನಾವಶ್ಯಕವೆನ್ನುವನು.

ಹೊರಗೆ ಬೇರೆಬೇರೆಯಾಗಿ ಕಾಣುತ್ತಿದ್ದರೂ ಭಾರ್ಯಾಭರ್ತ್ರರಿಬ್ಬರ ಶರೀರವು ಒಂದೇ ಅಂದಮೇಲೆ ಲೋಕದಲ್ಲಿ ಸ್ತ್ರೀಪುರುಷರಿಬ್ಬರೂ ವಿದ್ಯಾವಂತರಾಗಲಿಕ್ಕೇಬೇಕು. ಹಾಗಿಲ್ಲದೆ ಗಂಡಸರು ಮಾತ್ರ ವಿದ್ಯಾವಂತರಾಗಿ ಸ್ತ್ರೀಯರು ಅವಿದ್ಯಾವಂತರಾದರೆ ಸಂಸಾರದಲ್ಲಿ ಒಡಕು ಹುಟ್ಟಿ ಇಬ್ಬರಲ್ಲಿಯೂ ಕತ್ತಲೆಗೂ ಬೆಳಕಿಗೂ ಇರುವಷ್ಟು ಅಂತರವುಂಟಾಗುವುದಲ್ಲದೆ "ಎತ್ತು ಎರಿಗೆಳೆದರೆ ಕೋಣ

ನೀರಿಗೆಳೆಯುತೆಂಬ" ಗಾದೆಯಂತೆ ಸಂಸಾರ ಚಕ್ರವು ಸರಿಯಾಗಿ ನಡೆಯುವುದಿಲ್ಲ.

ಈಗಲಾದರೂ ಅನೇಕ ವಿದ್ಯಾವಂತ ಪುರುಷರು ತಮಗೆ ಸ್ತ್ರೀಶಿಕ್ಷಣದಲ್ಲಿ ಆಶೆ ಇಲ್ಲವೆಂದು ಇದರಿಂದ ಸಂಸಾರದಲ್ಲಿ ಒಡಕು ಹುಟ್ಟಿ ತಮಗೆ ತೊಂದರೆಯಾಗುವುದೆಂದೂ ತಮಗೆ ಎರಡು ಮೂರು ಇಯತ್ತೆ ಕಲಿತ ಹುಡುಗಿಯಾದರೆ ಸಾಕೆಂದು ಹೇಳುವ ಗಂಡಸರ ಸಂಖ್ಯೆಯೇ ಹೆಚ್ಚಿರುತ್ತದೆ. ಇದರಿಂದ ಪುರುಷರಿಗೆ ಸ್ತ್ರೀಯರ ಮೇಲೆ ಎಷ್ಟು ಕೀಳು ಅಭಿಪ್ರಾಯವಿದೆಯನ್ನುವುದು ಪ್ರಕಟವಾಗುವುದು. ಮತ್ತೆ ಕೆಲವರಂತೂ ಸ್ತ್ರೀಯರು ವಿದ್ಯಾವಂತರಾದ ದುರ್ಮಾರ್ಗ ಪ್ರವರ್ತಕರೂ ಖರ್ಚಿಕರೂ ಆಗುವರೆಂಬ ಮೂಢ ಭಾವನೆಯುಳ್ಳವರೇ ಆಗಿರುವರು.

ಇದು ಶುದ್ಧ ತಪ್ಪಾಗಿರುವುದು. ಸನ್ಮಾರ್ಗ ಪ್ರವರ್ತನೆಗೆ ಮೂಲ ಕಾರಣವಾದ ವಿದ್ಯೆಯು ಎಂದಿಗೂ ದುರ್ಮಾರ್ಗ ಪ್ರವರ್ತನೆಗೆ ಸಹಕಾರಿಯಾಗಲಾರದು ಲೋಕದಲ್ಲಿ ವಿದ್ಯಾವಿಹೀನರೂ ಸ್ತ್ರೀಯರೂ ಪುರುಷರೂ ದುರ್ಮಾರ್ಗಿಗಳಾಗಿರುವರು. ಆದರೆ ಅದನ್ನು ಯಾರೂ ಲೆಖ್ಖಕ್ಕೆ ತೆಗೆದುಕೊಳ್ಳದೆ ಬರಿ ವಿದ್ಯಾವಂತರಾದ ಸ್ತ್ರೀಯರು ಒಬ್ಬಿಬ್ಬರು ದುರ್ಮಾರ್ಗಿಗಳಾದ ಉದಾಹರಣೆಗಳನ್ನು ತೆಗೆದುಕೊಂಡು ಸ್ತ್ರೀಸಮುದಾಯವನ್ನೇ ಹಾಳು ಮಾಡಬೇಕೆನ್ನುವ ಪುರುಷರ ಅಭಿಪ್ರಾಯವು ಸ್ವಲ್ಪವೂ ಸಮಂಜಸವಾಗಿ ಕಾಣಲಾರದು. ಮಕ್ಕಳಿಗೆ ಕಲಿಸುವ ವಿದ್ಯೆಯು ದುಷ್ಕಾರ್ಯಗಳಿಗೆ ಉಪಯೋಗವಾಗದಂತೆ ಅವರನ್ನು ಜಾಗ್ರುತೆಯಾಗಿ ನೋಡಿಕೊಂಡು ಯುಕ್ತಕಾಲಗಳಲ್ಲಿ ಶಿಕ್ಷೆಯನ್ನು ಕೊಟ್ಟು ಅದರ ಫಲವನ್ನು ಅನುಭವಿಸುವುದಕ್ಕೆ ಪ್ರಯತ್ನಮಾಡಬೇಕು. "ಗಿಡವಾಗಿ ಬಗ್ಗದು ಮರವಾಗಿ ಬಗ್ಗೀತೆ" ಎಂಬಂತೆ ದುರ್ಮಾರ್ಗದಲ್ಲಿರುವ ಮನಸ್ಸನ್ನು ಸನ್ಮಾರ್ಗಕ್ಕೆ ತಿರುಗಿಸಬೇಕಾದರೆ ಬಾಲ್ಯದೆಶೆಯೇ ಉತ್ತಮವೆಂದರಿತು ಪ್ರಯತ್ನಿಸಬೇಕು. ಬಾಲ್ಯದಲ್ಲಿ ಕಲಿತ ದುರ್ಗಣವೇ ಆಗಲಿ ಸುಗುಣವೇ ಆಗಲಿ ಬದಲಾಯಿಸಲಾರದು. ಇದಕ್ಕೆ ತಾಯಿಯೇ ಕಾರಣವಾದ್ದರಿಂದ ಸ್ತ್ರೀವಿದ್ಯೆಗೆ ಪ್ರಾಮುಖ್ಯತೆ ಕೊಡಬೇಕಾಯಿತು. ಸ್ತ್ರೀವಿದ್ಯಾಭಿವೃದ್ಧಿಯೇ ರಾಜ್ಯದ ಅಭಿವೃದ್ಧಿಗೆ ಕಾರಣವೆಂಬುವುದಾಗಿ ಅನೇಕ ದೊಡ್ಡ ಮನುಷ್ಯರು ಹೇಳುತ್ತಿರುವರು. ಇದೇ ಮಾತನ್ನು ಮಹಾತ್ಮಾ ಗಾಂಧಿಯವರು ಎಂದಿಗೆ ನಮ್ಮ ದೇಶದ ಹೆಣ್ಣುಮಕ್ಕಳು ಒಟ್ಟಾಗಿ ಬಂದು ಮುಂದೆ ನಿಲ್ಲುವರೋ ಅಂದು ಸ್ವರಾಜ್ಯ ಸಿಗುವುದೆಂದು ಸಾರಿ ಸಾರಿ ಹೇಳಿರುವರು.

ದೇವರು ಪ್ರಪಂಚದಲ್ಲಿ ಸ್ತ್ರೀಪುರುಷರಿಬ್ಬರನ್ನೂ ಸೃಷ್ಟಿಸಿ ಇಬ್ಬರಿಗೂ ತಿಳಿವಳಿಕೆಯ ಶಕ್ತಿಯನ್ನು ಸಮವಾಗಿ ಪಾಲಿಸಿರುವನು. ಈ ಉತ್ಕೃಷ್ಟವಾದ ವರ

ವನ್ನು ಉದ್ದೇಶವಿಲ್ಲದೆ ಮಾನವರಿಗೆ ಕೊಟ್ಟಿಲ್ಲ. ಸ್ತ್ರೀಯು ವಿವೇಕರಹಿತಳಾಗಿ ಬಿದ್ದಿದ್ದು ಪುರುಷನಿಗೆ ಆಭರಣದಂತಿರಬೇಕೆಂದು ಸೃಷ್ಟಿಸಿಲ್ಲ. ಈಕೆಯು ತನಗೂ ಇತರರಿಗೂ ಸೌಖ್ಯವನ್ನುಂಟುಮಾಡಿ ತನ್ನ ಜೀವಿತ ಕಾಲದಲ್ಲಿ ಅನೇಕ ಶ್ರೇಯಸ್ಕರವಾದ ಕಾರ್ಯಗಳನ್ನು ಮಾಡಿ ಕೀರ್ತಿ ಪಡೆಯಲು ಸೃಷ್ಟಿಸಲ್ಪಟ್ಟಿದ್ದಾಳೆ. ಇದರಂತೆ ದೇವರಾಗಿ, ದಯಪಾಲಿಸಿರುವ ಬುದ್ಧಿ ಶಕ್ತಿಗೆ ವಿದ್ಯೆಯು ಕೂಡಿವರೆ ವಜ್ರವನ್ನು ಕುಂದಣದಿಂದ ಬಿಗಿದಂತಾಗಿ ಅವರ ಕಾಂತಿಯು ಹೆಚ್ಚುತ್ತದೆ

ಎಷ್ಟೋ ಜನರು ಸ್ತ್ರೀಯರು ಮನೆಯಲ್ಲಿ ಅಡಿಗೆ ಮಾಡಿಕೊಂಡು ಬಿದ್ದಿದ್ದರೆ ಸಾಕು. ಎಷ್ಟು ಕಲಿತರೂ ಅವರಿಗೆ ಮುಸುರೆ ತಿಕ್ಕುವುದು ತಪ್ಪಿದ್ದಲ್ಲ. ಅವಳಿಗೇಕೆ? ವಿದ್ಯೆ ಎಂದು ಹೇಳುವರು.

ಈಚೀಚೆಗೆ ಭಗವಂತನ ದಯದಿಂದ ಸ್ತ್ರೀ ವಿದ್ಯಾಭ್ಯಾಸವು ಬಹಳ ಮಟ್ಟಿಗೆ ಹರಡುತ್ತಿದ್ದರೂ ನಾಗರೀಕವಿಲ್ಲದ ಕೆಲವು ಕಡೆಗಳಲ್ಲಿ ಜನಗಳ ಮೌಢ್ಯವು ಇನ್ನೂ ಹೋಗದೆ, ಜನರಿಗೆ ಬಹಳ ತೊಂದರೆಯಾಗಿದೆ.

ವಿದ್ಯಾಭ್ಯಾಸವು ನಿನ್ನೆ ಮೊನ್ನೆ ಬಂದ ಸಂಪ್ರದಾಯವಲ್ಲ. ಇದು ಪುರಾತನ ಕಾಲದಿಂದಲೂ ಬಂದು, ಮಧ್ಯೆ ಮುಸಲ್ಮಾನರ ಕಾಲದಲ್ಲಿ ಕಡೆಗಟ್ಟಿತ್ತು. ಇದಕ್ಕೆ ಅನೇಕ ಆಧಾರಗಳಿವೆ. ಹಿಂದೆ ಸಾವಿತ್ರಿ, ಸೀತೆ, ಅಕ್ಕಮಹಾದೇವಿ, ಮುಂತಾದ ಸ್ತ್ರೀಯರು ವಿದ್ಯಾವಂತರಾಗಿ ಇನ್ನೂ ಪ್ರತಿಯೊಬ್ಬರ ಬಾಯಲ್ಲೂ ಮೆರೆಯುತ್ತಿರುವರು. ಸ್ತ್ರೀಯು ವಿದ್ಯಾವಂತಳಾದರೆ ತನ್ನ ವಂಶವನ್ನೇ ವಿದ್ಯಾವಂತರನ್ನಾಗಿ ಮಾಡಿ ಅಭಿವೃದ್ಧಿಗೆ ತರುವಳು. ಮತ್ತು ಸಂಸಾರದಲ್ಲಿ ಬೇರೆ ಬೇರೆ ಕೆಲಸಗಳಲ್ಲಿ ಹೆಂಗಸಿನ ಸಹಾಯವು ಗಂಡಸಿಗೆ ಅವಶ್ಯವಾಗಿದೆ. ಹೆಂಗಸರು ವಿದ್ಯಾವಂತರಾಗಿಯೂ ತಿಳಿವಳಿಕೆಯುಳ್ಳವರಾಗಿಯೂ ಇದ್ದರೆ ಮಾಡಬಹುದಾದ ಅನೇಕ ಕೆಲಸಗಳುಂಟು. ಹೀಗಿಲ್ಲದೆ ಇರುವುದರಿಂದ ಇನ್ನೂ ದೇಶವು ಉನ್ನತಿಗೆ ಬಂದಿಲ್ಲ. ಇದರಿಂದ ಇಬ್ಬರೂ ಕೂಡಿ ಮಾಡುವ ಕೆಲಸವನ್ನು ಪುರುಷರೊಬ್ಬರೇ ಮಾಡುವುದರಿಂದ ವೃಥಾ ಕಾಲಹರಣವಾಗುವುದು.

ಪ್ರಪಂಚದಲ್ಲಿ ಎಲ್ಲಾ ಗುಣಗಳು ಎಲ್ಲಾ ವಸ್ತುವಿನಲ್ಲಿಯೂ ಒಂದೇಸ್ಥಳದಲ್ಲಿ ಇರುವುದಿಲ್ಲ. ಆದುದರಿಂದಲೇ ಸರ್ವಾಂಶದಲ್ಲಿಯೂ ಉತ್ತಮವಾದುದು ಯಾವುದೂ ಕಾಣಬರುವುದಿಲ್ಲ. ಪ್ರಪಂಚದಲ್ಲಿ ಒಬ್ಬರಿಗೊಬ್ಬರ ಸಹಾಯವಿಲ್ಲದೆ ನಡೆಯುವುದೇ ಇಲ್ಲ. ಅಂದಮೇಲೆ ಹೆಂಗಸರ ಸಹಾಯವಿಲ್ಲದೆ ಗಂಡಸರಿಗೂ, ಗಂಡಸರ ಸಹಾಯವಿಲ್ಲದೆ ಹೆಂಗಸರಿಗೂ ನಡೆಯುವ ಬಗೆಯೆಂತು? ಹಾಗೆ ಒಬ್ಬರಿಗೊಬ್ಬರು

ಸಹಾಯ ಮಾಡುವುದಕ್ಕೆ ಬದಲಾಗಿ ನಮ್ಮ ದೇಶದಲ್ಲಿ ಗಂಡಸನ್ನೇ ಅವಲಂಬಿಸಿ ಕೊಂಡು ಕೂಡಬೇಕಾಗಿದೆ. ಆದ್ದರಿಂದಲೇ ಗಂಡಸರು ದಿನಬೆಳಗಾದರೆ "ನಿಮ್ಮ ಗಂಟು ಏನು ಹೋಗುತ್ತೆ ನಿಮಗೇನು ಚಿಂತೆ" ನಾವು ಬೆಳಿಗಿನಿಂದ ಸಾಯಂಕಾ ಲದ ವರೆಗೂ ಕಷ್ಟಪಟ್ಟು ದುಡಿದು ತಂದು ಹಾಕಿದ್ದನ್ನು ಉಂಡು ಸ್ವಸ್ಥವಾಗಿ ಹರಟೇ ಹೊಡೆಯುತ್ತಾ ಕಾಲ ಹಾಕುತ್ತೀರಿ ಎಂದು ಎಷ್ಟು ಅಂದರೂ ನಾಚಿಗೆ ಇಲ್ಲದೆ ಇಂತಹ ಸಾವಿರಾರು ಮಾತುಗಳನ್ನಾದರೂ ಕೇಳಿಕೊಂಡು ಇದು ಒಂದು ತಮಾಷೆ ಎಂದು ಕೈಲಾಗದ್ದಕ್ಕೆ ಸುಮ್ಮನೆ ಕಾಲ ಹಾಕುತ್ತೇವೆ.

ಇಡೆಲ್ಲಾ ಸಂಪಾದಿಸುವನೊಬ್ಬ, ತಿನ್ನುವವರು ನೂರುಜನರು ಹೀಗಾಗಿ ಸಂ ಪಾದಿಸುವವನಿಗೂ ತೊಂದರೆಯಾಗಿ ಬಹಳ ಕಷ್ಟವಾಗುವುದು. ಒಂದು ಪೈ ಬೇಕಾದರೂ ಗಂಡಸರನ್ನೇ ಅವಲಂಬಿಸಬೇಕಾಗುವುದು. ಅದಕ್ಕೆ ಇಂಗ್ಲಂಡ ಮುಂತಾದ ಪಾಶ್ಚಿಮಾತ್ಯ ದೇಶಗಳಲ್ಲಿ ಪ್ರತಿ ಒಬ್ಬರು ಸ್ವತಂತ್ರರಾಗಿ ದುಡಿದು ಸಂಸಾರ ಮಾಡುವರಂತೆ. ಇದರಿಂದ ಹೊಸ ಹೊಸ ಉದ್ಯೋಗಗಳನ್ನು ಹುಡು ಕಬೇಕೆಂಬ ಲವಲವಿಕೆಯುಂಟಾಗಿ ಅನೇಕ ಕೈಗಾರಿಕೆಯ ಕಂಪನಿಗಳು ಉಂಟಾಗು ವವು. ಈಗ ಅನೇಕ ತರದ ಸಾಮಾನುಗಳು ನಮ್ಮ ದೇಶದಲ್ಲಿ ಸಿಗದೆ ಪರದೇಶ ದಿಂದ ತರಿಸುತ್ತೇವೆ. ಪ್ರತಿಯೊಂದು ಕಂಪನಿಯಲ್ಲೂ ಹೆಂಗಸರು ಇದ್ದೇ ಇರುತ್ತಾರೆ.

ಮನೆಯಲ್ಲಿ ಹತ್ತು ಜನರಿದ್ದರೆ ಹತ್ತು ಜನವು ದುಡಿದರೆ ಎಷ್ಟು ಸುಖದಿಂದ ಜೀವನ ಮಾಡಿಕೊಂಡು ನಿಶ್ಚಿಂತೆಯಿಂದ ಇರಬಹುದು?

ಈ ನಮ್ಮ ದೌರ್ಭಾಗ್ಯಕ್ಕೆ ನಮ್ಮ ಜನರ ಸೋಲುವಾರಿಕೆ ಉದ್ಯೋಗ ಹೀನತೆ ಇವೇ ಮುಖ್ಯ ಕಾರಣಗಳಾಗಿವೆ. ಆದ್ದರಿಂದ ನಮ್ಮ ಸ್ತ್ರೀಯರು ವಿದ್ಯಾವಂತ ರಾಗಿ ಪುರುಷರಿಗೆ ಸಹಾಯಕರಾಗಿ ಮುಂದಿನ ಪೀಳಿಗೆಯ(ವಂಶ)ನ್ನು ವಿದ್ಯಾವಂತ ರನ್ನಾಗಿ ಮಾಡಬೇಕು. ದೇಶದ ಉನ್ನತಿ ಎಂದರೂ ದೇಶದ ಜನರ ಉನ್ನತಿ ಎಂ ದರೂ ಒಂದೇ ಆಗಿದೆ. ಈ ಪ್ರಕಾರದಲ್ಲಿ ಪ್ರತಿ ಒಬ್ಬ ಸ್ತ್ರೀಯೂ ಕೆಲಸ ಮಾಡುತ್ತಾ ಹೋದರೆ ಅಸ್ತವಾಗಿರುವ ಈ ದೇಶದ ಸೌಭಾಗ್ಯವು ಪುನಃ ಉದಯಿಸಿಯೇ ಉದ ಯಿಸುತ್ತದೆ.

ಸ್ತ್ರೀಶಿಕ್ಷಣವೆಂದರೆ ಬರಿ ವರಡಕ್ಷರ ಬಂದರೆ ಸಾಕೆಂದು ತಿಳಿಯದೆ ಅವರನ್ನು ಚೆನ್ನಾಗಿ ವಿದ್ಯಾವಂತರನ್ನಾಗಿ ಮಾಡಿಸಿ ದೇಶೋದ್ಧಾರಕರನ್ನಾಗಿ ಮಾಡಿಸಬೇ ಕೆಂದು ಬೇಡಿಕೊಳ್ಳುವೆನು.

---

# ಪ್ರಾರ್ಥನೆ

—:o:—

ಓ ಅವಿತಿರುವ ಬದುಕೆ !
ಪ್ರತಿಯೊಂದು ಕಣವಲ್ಲಿ ಕ್ಷಣದಲ್ಲಿ ನೀನಿರುವೆ !
ಓ ಅವಿತಿರುವ ಒಲುವೆ!
ಸಮತೆ ಭಾವದೆಣಿಕೆಯಲಿ ಎಲ್ಲರನು ನೀನೊಲಿವೆ !
ಓ ಅವಿತಿರುವ ಬೆಳಕೆ !
ಪ್ರತಿಯೊಂದು ಜನದಲ್ಲಿ ಮನದಲ್ಲಿ ನೀನಿರುವೆ !
ಒಳಿತಾಗಿ ತಿಳಿದಿರಲಿ —
ಪ್ರತಿಯೊಂದು ಜನಕೆಲ್ಲ ಮನಕೆಲ್ಲ ನಿನ್ನೊಡನೆ |
ತಾನಿರುತಿಹನೆಂದು ತನ್ನೊಡನೆ ನೀನಿರುತಿಹೆಯೆಂದು !

"ಎಮ್. ಡಿ." ಯವರು

---

# ಪ್ರೇಮದೇವತೆಗೆ



ನೆನಪುಂಟು ನೆನಪುಂಟು ಆ ಎಳೆಯ ದಿನಗಳ |
ಇನಿಗಂಪು ಬಹುಮುದ್ದು ಆ ಪ್ರೇಮ ಬಳಗಗಳ |
ಮನೆಯಂಥಹದಿದ್ದರೇನಿರಲು ಆ ಮನವೊಂದೆ ಸಾಕು ।
ಬಣ್ಣ 'ಬಣ್ಣದ ಮಾತಿನಿಂ ಆ ಮೌನವೇ ಹಿರಿದು ಸೊಬಗುಣ್ಣಿಸಲ್ಕೆ ||
ಅಂದಿನ ಆ ಸೊಬಗು ಆ ಪ್ರೇಮದ ಬೆಡಗು ಬೆಳೆಯುತಿರಲು |
ಇದೊಂದೆ ಜೀವನವು ! ಕೊನೆಯುಂಟು ಇದಕೆಂದು ಸಂತಸವ |
ಳಿದಂದು ಬಹು ಮುಗ್ಧೆ ಮುದ್ದು ನೋಟವನಿರಿಸಿ ಕರ |
ವಿಡಿದು " ಇದಕನ್ವದೇನೆ "ಂದು ಬಹು ವಿನಯದಿಂ ನೀಕೇಳ್ದೆ ||
ಸೊಗಸಹುದು ಕೂಡುವದು ಕೂಡುವೆವದೆಂತೆಯೋ !
ಅಗಲುವಿಕೆಯು ಅಗಲು ಅರಿಯದಂತೆಯೆ ಅನರ್ಥವಂ ತರಲಿಹುದು |

ರಾಗದೊಳೊ, ರೋಗದೊಳೊ, ತ್ಯಾಗದೊಳೊ ಬರಬಹುದು |
ಆಗಲುವಿಕೆಯಂ ದೂರಿ ಅಂತರಂಗದ ಶಕ್ತಿ ಅನವರತ ಮಂಗಲವ ಬೇಡುವದು ||

ಜಗವನಾಳುವ ಶಕ್ತಿ ಅಂತರಾತ್ಮನೊಳ್ಬೆರಿಸಿ ಕೇಳದ ಮಾತಿನೊಳು |
ಬಗೆಬಗೆಯ ಸವಿಗನಸುಗಳ ಕಟ್ಟಿ ಗಾಳಿಗೋಪುರ ಕಟ್ಟಿ |
ಬುಗಿಲೆಂದು ಭೀಕರವ ಬರಿದೆ ಹೆಚ್ಚಿಸಿ ತೆರೆಗಳಂ ಹುಟ್ಟಿಸುತ |
" ತ್ಯಾಗಿಗಳ ಜೀವನಕೆ ಸುಖವಿಹುದೇ? " ಇಂತು ಕೇಳುವೊಡೆ
ಬಿಡಿಸುವವರಾರಿದನ? ||

ಎಂತಿರ್ದೊಡೇನು? ಪ್ರೇಮಮಯ ಜೀವನಕೆ ಸರಿಯಾದುದಿಲ್ಲ |
ಚಿಂತೆ ಬಂದರು ಕಷ್ಟ ನಲ್ಮೆಯಿಂ ಅದುವೆ ಸುಖವಾಗಿ ಪರಿಣಮಿಸಿ |
ಸಂತಸವ ಬೀರುವದು ಬಾಳನ್ನು ಬೆಳಗಿಸಲು ಸಂದೇಶ ತರುತಿಹುದು |
" ಕುತ್ತಿಲ್ಲ ಪ್ರೇಮರಾಜ್ಯದೊಳೆ "ಂದು ನಲ್ಮೆಯ ನಾಡಿನೊಳು
ನಲಿದಾಡಿರೆಂದು ||

**M. V. M.**

" Awake! arise, stop not,
till the goal is reached "
" ಏಳು! ಎದ್ದೇಳು, ನೀನಿಲ್ಲಬೇಡ
ಗೊತ್ತು ಮಾಡಿದ ಗುರಿಯನ್ನು ತಲುಪದಲೆ "

—ಸ್ವಾಮಿ ವಿವೇಕಾನಂದ

## ನಡೆಯುವವನು ಮುಗ್ಗರಿಸುವದರಲ್ಲಿ ತಪ್ಪಿಲ್ಲ

"To err is human, and to forgive is divine"

ಮೇಲೆ ಹೇಳಿದ ಆಂಗ್ಲೋಕ್ತಿಯಂತೆ ನಡೆಯುವವನು ಒಂದಿಲ್ಲೊಂದು ದಿನ ಈ ಎಡೆಯಲ್ಲಿ ಇಲ್ಲವೆ ಇನ್ನೊಂದೆಡೆಯಲ್ಲಿ ಮುಗ್ಗರಿಸಲೇಬೇಕು, ಇದು ವಿಶ್ವ ತತ್ವವು. ಇದೇ ತತ್ವವು ಕಾರ್ಯದಲ್ಲಿಯೂ ತನ್ನ ನಿಜತ್ವವನ್ನು ತೋರಿಸಿದೆ. ನಮ್ಮಿಂದ ತಪ್ಪುಗಳು ಘಟಿಸುವವೆಂದು ಅಂಜಿ ಅಳುಕಿ ಮನೆಯಲ್ಲಿ ಕೈಕಟ್ಟಿಕೊಂಡು ಕುಳಿತರೆ ತಪ್ಪುಗಳಾಗಲಾರವೇನೋ ನಿಜ. ಆದರೆ ಕರ್ತವ್ಯದಿಂದ ಹಿಂದೆಗೆದ ಅಪರಾಧವು ನಮ್ಮನ್ನು ಮಾರಿಯಂತೆ ಅಣಕಿಸುವದು. ಇಂಥ ಪ್ಯೈಗಳ್ಳನಿಗೆ ಕ್ಷಮೆಯಿಲ್ಲ. ಬಂದುದನ್ನು ಬಂಟನಾಗಿ ಅನುಭೋಗಿಸಲು ಮುಂದೆನುಗ್ಗಬೇಕು; ಅಂಥವರಿಗಾಗಿ ಈ ಜಗತ್ತು ಅದೆ.

ಮನುಷ್ಯರು ಮುಗ್ಗರಿಸುವದು ನಾನಾವಿಧವಾಗಿ. ಅವರ ಮರವಿನಲ್ಲಿ ತಪ್ಪುಗಳು ಸಂಭವಿಸಬಹುದು. ವಿಷವೆಂದು ತಿಳಿದೂತಿಳಿದೂ ಅದಾರು ಅದನ್ನು ಆದರದಿಂದ ಕುಡಿಯುತ್ತಾರೆ. ಆದ ತಪ್ಪು ಮತ್ತೊಮ್ಮೆ ಆಗದಂತೆ ನೋಡಿಕೊಳ್ಳುವದು ವಿವೇಕಿಗಳ ಕಠಿಣವಾದ ದಾರಿ, ಅದೇ ದಾರಿಯನ್ನು ತುಳಿಯುವದು ಅವಿವೇಕಿಗಳ ಸುಲಭಮಾರ್ಗ. ಮಾಡಬೇಕಾದ ಕೆಲಸಗಳಲ್ಲಿ ಕ್ರಮತಪ್ಪಿ ಅಪರಾಧಗಳು ಆಗಬಹುದು. ಇನ್ನೊಂದು ವೇಳೆ ಮನುಷ್ಯನ ವಿಚಾರಸರಣಿಯು ಸಡಿಲಾಗಿ ಆತನು ತಪ್ಪುದಾರಿಯನ್ನು ತುಳಿಯಬಹುದು. ಮಗದೊಂದು ಬಾರೆ ಹಸದೋಷದಿಂದಲೂ ದಿಗ್ಭ್ರಮೆಯಲ್ಲಿ ಮುಂಗಾಣದಿರುವಿಕೆಯಿಂದ ಮೋಸಹೋಗಬಹುದು.

ತಪ್ಪು ಮಾಡಿದವನು ಅದನ್ನು ಒಪ್ಪಿಕೊಳ್ಳಲೇಬೇಕು. ಹುಚ್ಚು ಹಂಬಲ ದಿಂದ ಕೆಟ್ಟ ಹಟದಿಂದ ತಾನು ಮಾಡಿದ್ದು, ನೋಡಿದ್ದು, ಮುಟ್ಟಿದ್ದು, ಮೂಸಿದ್ದು ಸರಿಯೇಯೆಂದು ಹೇಳುವವನಿಗೆ ಮುಂದೆ ಅದನ್ನು ತಿದ್ದುಕೊಳ್ಳಲು ಅವಕಾಶ ವಿಲ್ಲ. ಮತ್ತೆ ಮತ್ತೆ ಮಾಡಿದ ತಪ್ಪನ್ನೇ ಮಾಡುವನು. ಎಡವಿದ ಕಲ್ಲನ್ನೇ ಹಾಯ್ದು ಮುಗ್ಗರಿಸುವನು. ಇದಕ್ಕೆ ತೀರಾ ವಿರುದ್ಧವಾಗಿ ತಪ್ಪನ್ನೊಪ್ಪಿಕೊಂಡ ವನು ಮತ್ತೊಮ್ಮೆ ಆ ಸಂದರ್ಭವು ಒದಗಿದಾಗ ಹಿಂದಿನದನ್ನು ನೆನೆದು ಇಂದಿನ ದನ್ನು ವಿಚಾರದಿಂದ ವಿಮರ್ಶಿಸಿ ಅದರಿಂದ ದೂರಹಾಯುವನು. ಸರಿಯಾದ ಸುಗಮವಾದ ದಾರಿಯಲ್ಲಿ ಮುಂದೋಡುವನು.

ಜನತೆಯಾದರೂ ಹೀಗೆ ತಪ್ಪನ್ನೊಪ್ಪಿಕೊಂಡವರನ್ನು ಹಿಡಿದೆತ್ತಬೇಕು. ರಾಮನು ಅಹಲ್ಯೆಯನ್ನು ಮನ್ನಿಸಲಿಲ್ಲವೇ ? ಗಾಯದ ಮೇಲೆ ಉಪ್ಪಿನ ನೀರನ್ನೆ ರಚಿದಂತೆ ಮಾಡಬಾರದು. ಕ್ಷಮಿಸುವದು ದೈವೀಭಾವ, ತಪ್ಪನ್ನು ಸುಧಾರಿಸಿ ಕೊಳ್ಳಲು ಸುಸಂಧಿಯನ್ನು ಒದಗಿಸಿಕೊಡುವದು ಜನತೆಯ ಅಭಿವೃದ್ಧಿಗೆ ಕಾರಣವು.

ಇಂದಿನ ಇತಿಹಾಸದಲ್ಲಿಯ ಮಹಾಪುರುಷರ ಜೀವನ್ನು ತೆಗೆದುಕೊಂಡರೆ ಇದರ ಸತ್ಯತೆಯು ಬಯಲಿಗೆ ಬರುತ್ತದೆ. ಜಗದ್ವಂದ್ಯರಾದ ಪರಮಪೂಜ್ಯ ಮಹಾ ತ್ಮಾಜಿಯವರು ಚಿಕ್ಕಂದಿನಲ್ಲಿ ಅದೆಷ್ಟೋ ತಪ್ಪುಗಳನ್ನು ಮಾಡಿ, ಅವುಗಳನ್ನೊಪ್ಪಿ ಕೊಂಡು ನಡೆದುದರಿಂದಲೇ ಇಂದು ಎಲ್ಲರ ಮನ್ನಣೆಗೆ ಪಾತ್ರರಾಗಿದ್ದಾರೆ. ಹೆಜ್ಜೆ ಹೆಜ್ಜೆಗೆ ತಪ್ಪುಗಳನ್ನು ಮಾಡುತಿದ್ದ ಡೆಮ್ಹಿಡ್‌ಸನ್ನರು ದೊಡ್ಡ ಭಾಷಣಕಾರನಾಗಿ ಮೆರೆದನು. ಇದರಂತೆಯೇ ಡಿಝುರಾಲೆಯವರ ಚರಿತ್ರೆಯು ಅವರ ಮೊದಲಿನ ಭಾಷಣವನ್ನು ಕೇಳಿದಾಗ ಅದರಲ್ಲಿರುವ ಹುಳುಕಿಗಾಗಿ ನೆರೆದವರು ಗೃಹದ ಮೇಲ್ಛಾ ವಣಿಯು ಹಾರಿಹೋಗುವಂತೆ ನಕ್ಕರು. ಆತನು ಆಗ " A day will come when you hear me " ಎಂದು ಎದೆತಟ್ಟಿ ಹೇಳಿದನು. ಅದರಂತೆಯೇ ಕೊನೆಗೆ ಎಲ್ಲ ಕೊರತೆಗಳನ್ನು ಹೊಡೆದೋಡಿಸಿ ಇಂಗ್ಲಂಡದ ಮುಖ್ಯಮಂತ್ರಿ ಯಾದನು.

ಒಟ್ಟಿನ ಮೇಲೆ ಓಡುವವನು ಎಡವುತ್ತಾನೆ, ಮುಗ್ಗರಿಸುತ್ತಾನೆ. ಆದರ ವಿಚಾರದಿಂದ ಮುಂದೋಡಿದರೆ, ಕೊರತೆಯನ್ನು ತುಂಬಿಕೊಂಡರೆ ಆಗ್ಗೆ ಕಾಣು ವದು ಭೂಲೋಕದ ಸ್ವರ್ಗ, ನಂದನವನದ ಮಾರ್ಗ.

—ಸರ್ವಮಂಗಲಾ

# " ದ್ರೋಹ "

ಲೇ:— ಹುನಗುಂದ ತಿಪ್ಪಣ್ಣ, ಹೊಸಪೇಟೆ

ದ್ರೋಹವೆಂಬುದಸಾರ ಪಾಪವು |
ದ್ರೋಹವೆಂಬುದು ಸ್ವಜನನಾಶವು |
ದ್ರೋಹದಿಂದೀ ಭಾರತವು ಪರತಂತ್ರವಾಗಿಹುದು ||
ದ್ರೋಹಿಪುತ್ರರ ಪಡೆದು ಭಾರತಿ |
ದ್ರೋಹಿಗಳ ಬಂಧನದಿ ಸಿಕ್ಕಳು |
ದ್ರೋಹವನು ವರ್ಜಿಸದೆ ಸ್ವಾತಂತ್ರ್ಯವು ಸಿಗದು ನಮಗೆ || ೧ ||

ದ್ರೋಹಿಯಾಗದಿರಯ್ಯ ಧರ್ಮಕೆ |
ದ್ರೋಹಿಯಾಗದಿರಯ್ಯ ರಾಷ್ಟ್ರಕೆ |
ದ್ರೋಹಿಯಾಗದಿರಯ್ಯ ಕನ್ನಡ ನುಡಿಗೆ ನೀನೆಂದೂ |
ದ್ರೋಹಿಯಾದರೆ ನೀನೆ ಕೆಡುತಿಹೆ |
ದ್ರೋಹಿಯಾದರೆ ಜಗವ ಕೆಡಿಸುವೆ |
ದ್ರೋಹಿಯಾದರೆ ಸರ್ವವೂ ಹಾಳಾಗುವುದು ಸಹಜ || ೨ ||

---

## ಗ್ರಂಥಸ್ವೀಕಾರ-ವಿಮರ್ಶೆ

" ಸ್ತ್ರೀ ನೀತಿ " ಲೇಖಿಕೆಯರು:— ಮಾ ಶ್ರೀ. ಭಾಗೀರಥಿಬಾಯಿಯವರು ಕಟಾಪ. ಸೊಲ್ಲಾಪುರ. ಗ್ರಂಥದಬೆಲೆ ೦–೨–೦ ಡೆಮ್ಮಿ ಸೈಜು. ಪುಟಸಂಖ್ಯೆ ೨೬.

ವೀರಶೈವ ಪತ್ರಿಕೆಯ ಸಂಪಾದಕರು ಪೀಠಿಕೆಯನ್ನೂ ಬರೆದಿದ್ದಾರೆ. ಸೊಲ್ಲಾಪುರ ನಂದೀಮಠದ ಸೌ. ಬಸಮ್ಮನವರು ಶ್ರೀ. ಭಾಗೀರಥೀಬಾಯಿಯವರ ಸಂಕ್ಷೇಪ ಚರಿತ್ರೆಯನ್ನು ಬರೆದಿದ್ದಾರೆ.

ಶ್ರೀಮತಿಯವರು ಈ ಗ್ರಂಥವನ್ನು (೧) ವಿದ್ಯೆಯ ಅವಶ್ಯಕತೆ. (೨) ಮಕ್ಕಳ ಶಿಕ್ಷಣ, (೩) ಬಾಲಕರಿಗೆ ಉಪದೇಶ, (೪) ಬಾಲಿಕೆಯರಿಗೆ ಉಪದೇಶ, (೫) ಗೃಹಿಣಿಯ ಕರ್ತವ್ಯ, (೬) ಭಗಿನಿಯ ಕರ್ತವ್ಯ, (೭) ನಾಗರಿಕತ್ವವೆಂದು ಏಳೆಂಟು ವಿಧವಾಗಿ ವಿಂಗಡಿಸಿ ಸಕಲ ಸ್ತ್ರೀಯರೂ ಸನ್ಮಾರ್ಗಕ್ಕೆ ಬರುವಂತೆ ಸುಲಭವಾದ ಬಿಡಿನುಡಿಗಳಿಂದ ಬರೆದಿದ್ದಾರೆ. ಲೇಖಿಕೆಯರು ಕನ್ನಡದಲ್ಲಿ ಪ್ರಾಥಮಿಕ ಶಿಕ್ಷಣವನ್ನು ಪಡೆದು ಯೋಗ್ಯತಾವಂತೆಯರಾಗಿರುವುದೇನೋ ನಿಜವಾದರೂ ದೇಶೀಯ ಶೈಲಿಯು ಅಲ್ಲಲ್ಲಿಯೇ ಇವರು ಅಚ್ಚಗನ್ನಡಿಗರಲ್ಲವೆಂದು ತೋರಿಸಿಕೊಡುತ್ತದೆ. ಇದು ಯಾವ ಪಂಡಿತರನ್ನೂ ಆಕ್ರಮಿಸದೆಬಿಡದು. ನಾವು ಕನ್ನಡಿಗರೆಂದು ಹೆಮ್ಮೆ ಪಡುವುದಕ್ಕೆ ಮೊದಲು ಸೊಲ್ಲಾಪುರ ಪ್ರಾಂತವು ತಳಹದಿಯಾಗಿದ್ದಿತು ಪೇಶವಾಯಿ ಅಮಲಿನಲ್ಲಿ ಈಗ ಆ ಹೆಮ್ಮೆಯು ಮರಾಟ ಶೈಲಿಯನ್ನು ಮೋಹಿಸಿ ಹದಗೆಡಹತ್ತಿದೆ. ಇಂತಹ ದುರ್ಧರ ಪ್ರಸಂಗದಲ್ಲಿಯೂ ಸದರಿ ಶ್ರೀ. ಭಾಗೀರಥಿ ಬಾಯಿಯವರಂಥ ಹೆಂಗಳೆಯರು ತಮ್ಮ ಪ್ರಾಚೀನ ಸಂಸ್ಕೃತಿಯಾದ ಕನ್ನಡದ ಸೇವೆಗೆ ನಡುಕಟ್ಟಿ ನಿಂತಿರುವುದು ಸರ್ವಥಾ ಪ್ರಶಂಸನೀಯವಾದ ವಿಷಯವು.

ಸದರಿ ಗ್ರಂಥದ ಲೇಖಿಕೆಯರು ಬರೀ ಗ್ರಂಥರಚನೆಯೊಂದೇ ತಮ್ಮ ಪ್ರಧಾನ ಕಾರ್ಯವಾಗಿದ್ದರೆ ಈ ಗ್ರಂಥವನ್ನು ಇನ್ನೂ ರಮ್ಯವಾಗಿ ರಚಿಸಬಹುದಾಗಿದ್ದಿತು. ಆದರೂ ಇವರ ಪ್ರಯತ್ನವು ಸಫಲವೆಂತಲೇ ಭಾವಿಸಬೇಕು. ದೇಶೀಯ ಶೈಲಿಯ ಆಧಿಕ್ಯದಿಂದ ಈ ಗ್ರಂಥದಲ್ಲಿ ಸ್ವಂತವರ್ತನ, ವಿದ್ಯಾಕಲಿತ, ಮಹಾರಾಷ್ಟ್ರ ಊರು, ಹುಟಗಿ ಸ್ವಗೋತ್ರ ಜಗದ್ಗುರು, ಹೊರ್ತು, ಜವಾಬದಾರಿ, ದರ ದಿವಸ, ಗುರುತು, ಮಾತಾಭಗಿನಿ, ಚಮಕಮಿಂಚು, ಕಾಳಜಿ ಮುಂತಾದ ಕೆಲಶಬ್ದ

ಗಳು ಸಮಾವೇಶವಾಗಿವೆ. ಅಲ್ಲಲ್ಲಿಯೇ ಪ್ರಿಂಟಿನ ದೋಷ ಮತ್ತು ವ್ಯಾಕರಣ ದೋಷಗಳೂ ಕಾಣುವವು. ಈ ಮೇಲಿನ ದೋಷವಾವುದನ್ನೂ ಗಣನೆಮಾಡದಿದ್ದರೆ ಅಥವಾ ಆ ದೋಷಗಳನ್ನೂ ತಿದ್ದಿದರೆ ಈ ಗ್ರಂಥವು ನಿಜವಾಗಿಯೂ ನೀತಿಪ್ರದವಾದುದೇ ನಿಜ. ಶೈಲಿಯು ಸುಲಭವಾಗಿದೆ, ಕೆಲಕಡೆ ಸಂದರ್ಭವು ಹೊಂದಿಕೆಯಾಗಿಲ್ಲ. ಅಂತು ಮಹಾರಾಷ್ಟ್ರದ ಸಮೀಪ ಪ್ರಾಂತದ ಕನ್ನಡವೆಂದು ಈ ಗ್ರಂಥವನ್ನು ಶಿರಸಾವಮಾನ್ಯ ಮಾಡಬೇಕಾಗಿದೆ. ಶ್ರೀ. ಭಾಗೀರಥೀಬಾಯಿಯವರು ಇನ್ನೂ ಹೆಚ್ಚು ಶ್ರಮಪಟ್ಟು ಇದಕ್ಕೂ ಸುಲಭ ಸರಣಿಯ ಗ್ರಂಥಗಳನ್ನು ರಚಿಸುವಲ್ಲಿ ಸಮರ್ಥರಿರುವರೆಂದು ಅವರಲ್ಲಿರುವ ವಿದ್ವತ್ತಿನಿಂದ ಒಪ್ಪಿಕೊಳ್ಳಬೇಕಾಗಿದೆ. ಇಂತಹ ಅನಂತ ಕೃತಿಗಳು ಇವರಿಂದ ಹೊರಬೀಳಲೆಂದು ಆಶೆ.

ಒಟ್ಟಿನಮೇಲೆ ಸಾರವನ್ನು ಗ್ರಹಣಮಾಡಿದರೆ ಸಕಲ ಸ್ತ್ರೀಯರಿಗೂ ಈ ಗ್ರಂಥವು ಸನ್ಮಾರ್ಗದರ್ಶಿಯಾಗಿದೆ ಎಂದು ಬರೆಯುವಲ್ಲಿ ಅಭ್ಯಂತರವಿಲ್ಲ. ಪ್ರಚಾರ ದೃಷ್ಟಿಯಿಂದ ಬೆಲೆಯನ್ನೂ ಕಡಿಮೆ ಇಟ್ಟಿದ್ದಾರೆ. ಸರ್ವಗೃಹಸ್ಥರೂ ತಮ್ಮತಮ್ಮ ಗೃಹಿಣಿ ಬಾಲ-ಬಾಲಿಕೆಯರಿಗೆ ತರಿಸಿಕೊಡುವುದಾಗಿ ಪ್ರೋತ್ಸಾಹಿಸುವೆ. ಲೇಖಿಕೆಯರಿಗೆ ಜಗದೀಶ್ವರನು ದೀರ್ಘಾಯುವನ್ನೀಯಲಿ!

( ಶ್ರೀ ಶಿವ )

"ಸೆಟ್ಟಿಶರ್ಮರ ಸಂವಾದ" ಲೇಖಕರು:— ಮುಳ್ಳೂರು ಶ್ರೀ ಗುರುಪಾದ ಶಿವಾಚಾರ್ಯರು. ಬೆಲೆ ಹಾಕಿಲ್ಲ. ೨ ಆಣೆ ಇಡಬಹುದು. ಡೆಮ್ಮಿಸೈಜು ಪುಟ ಸಂಖ್ಯೆ ೨೧. ಪ್ರಕಾಶಕರು ಪಂಡಿತ, ಸಿ. ಸಂಗಯ್ಯನವರು ಸಂಪಾದಕರು "ವೀರಶೈವ" ೨೯/೨ ಪುರಾಣಶೇಷಾಚಾರ್ಯ ಬೀದಿ, ಬೆಂಗಳೂರು.

ಈ ಗ್ರಂಥದಲ್ಲಿ ಲೇಖಕರು (೧) ವೇದವನ್ನು ಮನ್ನಿಸಬೇಕು, (೨) ಶಿಖೆಯನ್ನು ಧರಿಸಬೇಕು, (೩) ಗುರುವನ್ನು ಪೂಜಿಸಬೇಕು, (೪) ಆಚಾರ್ಯರ ಜಯಂತಿಗಳನ್ನು ಮಾಡಬೇಕು, (೫) ಜಾತಿಸಾಂಕರ್ಯವನ್ನು ಮಾಡಕೂಡದು. ಮುಂತಾದ ವಿಷಯಗಳನ್ನು ಪ್ರಶ್ನೋತ್ತರ ರೂಪವಾಗಿ ಹೆಣೆದಿದ್ದಾರೆ. ವಿಷಯಗಳು ಆವವೂ ಹೊಸವಲ್ಲ. ಅಲ್ಲಲ್ಲಿಯೇ ವ್ಯಾಕರಣ ದೋಷಗಳೂ ಅಚ್ಚುದೋಷಗಳೂ ಉಂಟಾಗಿವೆ. ಶೈಲಿಯು ಮನೋಹರವಾಗಿದೆ ಕೆಲವು ಕಡೆ ಬರೆವಣಿಗೆಯು ಮೇರೆದಪ್ಪಿದೆ ಉದಾಹರಣೆಗಾಗಿ ಪುಟ ೯, ಸಾಲು ೩೨ ರಲ್ಲಿ...."ಧರ್ಮಗ್ರಂಥಗಳು ಒಂದೂ ಉಳಿಯದ ಮೂಲಕ" ಎಂದಿದೆ. ಹಾಗೆ ಒಂದೂ ಉಳಿಯದಿದ್ದರೆ ಪುಟ ೧೬, ಸಾಲು ೧೯ರಲ್ಲಿ ಶರ್ಮರು ಆಧಾರಕ್ಕಾಗಿ ತೆಗೆದುಕೊಂಡ ಧರ್ಮ

ಗ್ರಂಥಗಳು ಎಲ್ಲಿಂದ ಬಂದವು? ಎಂಬ ಪ್ರಶ್ನೆ ತಾನಾಗಿ ಗ್ರಂಥವನ್ನೋದಿದವರಿಗೆಲ್ಲಾ ಉದ್ಭವಿಸುವುದು.

ಮೇಲ್ಕಂಡ ವಿಷಯಗಳನ್ನೇ ಸ್ವತಂತ್ರವಾಗಿ ಯಾವ ಭಿನ್ನಾಭಿಪ್ರಾಯವೂ ಇಲ್ಲದಂತೆ ಬರೆಯಬಹುದಾಗಿದ್ದಿತು. ಈಗ ಸ್ವ-ಪರ ಪಕ್ಷ ವಿಚಾರವನ್ನೇ ಮನಸ್ಸಿನಲ್ಲಿಟ್ಟುಕೊಂಡು ರಚಿಸುವ ಕೃತಿಗೆ ಯಾವ ಸಾಹಿತ್ಯವೂ ಬೆಲೆಯನ್ನು ಕೊಡಲಾರದು. ಒಂದು ವೇಳೆ ಕೊಟ್ಟರೂ ಪಾಕ್ಷಿಕ- ಸಾಹಿತ್ಯವು ಮಾತ್ರ.

ಯಾರು ಯಾವ ಗ್ರಂಥಗಳನ್ನು ಬರೆದರೂ ಧ್ಯೇಯವು ಕೇವಲ ಸಮಾಜ ಸುಧಾರಣೆಯನ್ನು ಹೊಂದಿಕೊಂಡಿರುತ್ತದೆ. ಇದಕ್ಕೆ ತರವಾದ ಫಲವು ಇಲ್ಲವೇ ಇಲ್ಲ. ಈ ಹೇತುವನ್ನನುಸರಿಸುವುದೇ ಯಾವ ಕಾಲಕ್ಕೂ ಶ್ರೇಯಸ್ಕರವು. ಪಕ್ಷ ಪ್ರತಿಪಕ್ಷಗಳ ವಿರೋಧದಿಂದ ಬರೆದ ಗ್ರಂಥಗಳಿಗೆ ವಿಶ್ರಾಂತಿಯು ಯಾವ ಕಾಲಕ್ಕೂ ಇಲ್ಲವೇ ಇಲ್ಲ. ಆದುದರಿಂದ ಪಕ್ಷವನ್ನೇ ಹಿಡಿದು ಎಂದಿಗೂ ಉತ್ತಮ ಸಾಹಿತ್ಯವನ್ನು ಬಲ್ಲವರು ಕೆಡಿಸಿಕೊಳ್ಳಬಾರದು.

ಈ ಗ್ರಂಥದಲ್ಲಿ ಬರೆದಿರುವ ಎಲ್ಲಾ ವಿಷಯಗಳನ್ನು ಎಲ್ಲರೂ ಒಪ್ಪಿಕೊಳ್ಳುವರು. ಇದು ಹೊಸಮಾತಲ್ಲ. ಆದರೆ ರಚನೆಯು ಕೆಲವರನ್ನೂ ಉದ್ವೇಗಗೊಳಿಸುವಂತಿದೆ. ಏಕಪಕ್ಷಕ್ಕೆ ಜನರನ್ನು ಎಳೆಯುತ್ತಿದೆ.

ಲೇಖಕರು ವಿಶೇಷವಾಗಿ ಶ್ರಮಪಟ್ಟಿದ್ದಾರೆ. ಯೋಗ್ಯತೆಯುಳ್ಳವರಾಗಿದ್ದಾರೆ. ಜನಮನೋಹರಗಳಾದ ಕೃತಿಗಳನ್ನು ರಚಿಸುವಲ್ಲಿ ಸಮರ್ಥರೂ ಆಗಿದ್ದಾರೆ. ಆದರೆ ಇಲ್ಲಿ ಹೇಳಬೇಕಾದುದು ಇಷ್ಟು:—ಯಾವ ವಿಷಯಗಳನ್ನು ಬರೆದರೂ ಪಕ್ಷವನ್ನು ಅಂಟಿಸಿಕೊಂಡಿರಬಾರದು.

ಸದರೀ ಲೇಖಕರು ಇನ್ನು ಮುಂದೆ ಪಕ್ಷವಿಲ್ಲದೆ ಇದಕ್ಕೂ ಸುಲಭವಾದ ಮತ ಸಿದ್ಧಾಂತಗಳನ್ನು ಇದೇ ಬಗೆಯಾದ ಸುಲಭ ಸರಣಿಯಲ್ಲಿ ಬರೆದು ಸಮಾಜಕ್ಕೆ ಕಲ್ಯಾಣವನ್ನುಂಟುಮಾಲಲೆಂದು ನೀರೀಕ್ಷಿಸುವ,

( ಶ್ರೀ ಶಿವ )

**" ಗೋರಕ್ಷ ಗರ್ವಹರಣ "** ಮರಾಠೀ ಏಕಾಂಕ ನಾಟಕ, ಲೇಖಕರು:— ವೇ. ವೀರಭದ್ರಯ್ಯ ಮುರಿಗಯ್ಯ ನಾಗಣಸೂರಕರ, ಇವರು. ಬೆಲೆ ಒಂದಾಣೆ ಪುಟಸಂಖ್ಯೆ ೨೧.

ಶ್ರೀ ಜಗದ್ಗುರು ರೇಣುಕಾಚಾರ್ಯರು ಗೋರಕ್ಷ ಸಿದ್ಧನನ್ನು ತಕ್ಕೊಷ್ಟೀಪ ದೇಶದಿಂದ ಉದ್ಧರಿಸಿದ ಲೀಲೆಯು ರಮ್ಯವಾಗಿ ಈ ನಾಟಕದಲ್ಲಿ ಕೆತ್ತಲ್ಪಟ್ಟಿದೆ. ಸದ್ಯಃ ಇಂತಹ ಏಕಾಂಕ ನಾಟಕಗಳ ಆವಶ್ಯಕತೆಯು ಬಹಳವಾಗಿದೆ. ಕಾದಂಬರಿ-ನಾಟಕಗಳಿಂದ ಜನರನ್ನು ಸನ್ಮಾರ್ಗಕ್ಕೆ ತರುವುದು ಸುಲಭಮಾರ್ಗ. ಈ ವಿಧವಾದ ದಾರಿಯನ್ನು ಮರಾಠಿ ಸಾಹಿತ್ಯದವರು ತುಳಿಯಹತ್ತಿ ಬಹಳ ದಿನಗಳಾದವು. ಆದರೆ ಆ ಸಾಹಿತ್ಯದ ವೀರಶೈವರಲ್ಲಿ ಈ ವಿಧವಾದ ರಚನಾಮಾರ್ಗವು ಇನ್ನೂ ಹೊಸದೆಂತಲೇ ಹೇಳಬಹುದು. ಶೈಲಿಯು ಸರಳವಾಗಿಯೂ ಬೋಧಕವಾಗಿಯೂ ಇದೆ. ಪದ್ಯಗಳು ಅಷ್ಟೊಂದು ವಿಷಯಪೂರ್ಣಗಳಾಗಿಲ್ಲ. ಪದ್ಯಕಾರರು ತಾಳ ರಾಗ, ಪ್ರಾಸುಗಳಿಗಿಂತ ವಿಷಯಸಂಗ್ರಹಕ್ಕಾಗಿ ಯತ್ನಿಸುವುದು ಮೇಲು. ಸದರಿಯವರಿಂದ ಇನ್ನೂ ಇಂತಹ ಅನೇಕ ಕೃತಿಗಳು ಹೊರಬೀಳಲೋಸುಗ ಸಾಹಿತಿಗಳು ಸಹಾಯಕರಾಗಬೇಕು.

---

(ಶ್ರೀ ಶಿವ)

## "ವಿವಾಹ ಸಮಾರಂಭ"

ಬಳ್ಳಾರಿ ಜಿಲ್ಲಾ ಹರಪನಹಳ್ಳಿ ತಾಲೂಕು ಬಾಗಳಿ ಗ್ರಾಮದ ಶ್ರೀಮಾನ್ ನಂದಿಬೇವೂರು ಗುರುಬಸಪ್ಪನವರ ಸುಪುತ್ರ ಕೊಟ್ರಪ್ಪನವರಿಗೂ ಮುನುವನಕಲ್ಲಿಹಳ್ಳಿ ಗ್ರಾಮದ ಪಾಟೀಲ್ ಚನ್ನಬಸವನಗೌಡ್ರ ಸುಪುತ್ರಿ ಶ್ರೀಮತಿ ನೀಲಮ್ಮನವರಿಗೂ ಇದೇ ಪ್ರಮಾಥಿನಾಮ ಸಂವತ್ಸರದ ವೈಶಾಖ ಶು. ೧೧ರಲ್ಲಿ ಪಾಣಿಗ್ರಹಣ ಮಹೋತ್ಸವವು ನೆರವೇರಿತು. ಈ ಮಹೋತ್ಸವದಲ್ಲಿ ಸಾವಿರಾರು ಜನರು ಭಾಗವಹಿಸಿದ್ದರು. ವಿದ್ಯುದ್ದೀಪಗಳಿಂದಲೂ ನಾನಾಬಗೆಯಾದ ಚಿತ್ರಗಳಿಂದಲೂ ಶೃಂಗರಿಸಲ್ಪಟ್ಟ ಮಂಟಪದಲ್ಲಿ ಶ್ರೀ. ಬಿ. ಯಂ. ಬಸವಾರ್ಯರೂ ಶ್ರೀ. ಕೊಟ್ಟೂರ ಕೆಂಭಾವಿ ಮಠದ ವೆ|| ಚನ್ನಬಸವ ಶಾಸ್ತ್ರಿಗಳೂ ಸಂಗೀತ ಕಛೇರಿಯನ್ನು ನಡೆಯಿಸಿದರು. ವೈಶಾಖ ಶು|| ೧೨ ಮಂಗಳವಾರ ಸಂಜೆ ೫ ಘಂಟೆಗೆ ಸದರಿ ಮಂಟಪದಲ್ಲಿ ಶ್ರೀ ಚನ್ನಬಸವ ಶಾಸ್ತ್ರಿಗಳವರು "ವೀರಶೈವ ಧರ್ಮ"ದ ವಿಷಯವಾಗಿಯೂ ಶ್ರೀ. ಬಿ. ಯಂ. ಬಸವಾರ್ಯರು "ಪಾತೀವ್ರತ್ಯ"ದ ವಿಷಯವಾಗಿಯೂ ಮನೋಹರವಾದ ವ್ಯಾಖ್ಯಾನಗಳನ್ನು ಮಾಡಿದರು. ಆ ಪ್ರಾಂತದಲ್ಲಿ ಪ್ರಸಿದ್ಧರಾದ ಜ್ಯೋತಿಷ್ಯ ಪಂಡಿತ ಅಂಬಳಿ, ಹಿರೇಮಠದ ಶ್ರೀ. ಬಸವಯ್ಯನವರು ನಂದೀಹಳ್ಳಿ, ಪಾಟಿಲ್ ವೀರಭದ್ರಗೌಡ್ರು ಉತ್ತಂಗಿ, ನಂದೀಹಳ್ಳಿ, ಮಹಾದೇವಪ್ಪನವರು, ಶ್ಯಾ|| ಮುದುಕಪ್ಪನವರು ಮುನುವನಕಲ್ಲಿಹಳ್ಳಿ ಶ್ಯಾ|| ಪತ್ರೆಪ್ಪನವರು ಮುಂತಾದ ಪುರ ಪ್ರಮುಖರು ಸೇರಿ ೨೦೦೦ ದವರೆಗೂ ಜನಸಂದಣಿಯು ಈ ಮಹೋತ್ಸವಕ್ಕಾಗಿ ಒಂದು ಕಡೆ ಕೂಡಿದ್ದಿತು. ವಧೂವರರಿಗೆ ಜಗದ್ಗುರು ಪಂಚಾಚಾರ್ಯರು ಸನ್ಮಂಗಲವನ್ನೀಯಲೆಂದು ಪ್ರಾರ್ಥಿಸೋಣವಾಯಿತು.

ಶ್ಯಾನಭೋಗರ ಪತ್ರೆಪ್ಪನವರು

# ಸಿಟ್ಟು ?

(ಭಾಮಿನಿ ಷಟ್ಪದಿಗಳು)

ಸಿಟ್ಟು ಎಂಬುದು ನರಕದೂರಿನ
ಒಟ್ಟಿ ಎಂಬುದನರಿತು ಮಾನವ,
ಸಿಟ್ಟನ ಕೈಯೊಳಗೆ ಬುದ್ಧಿಯ ಕೊಟ್ಟು ಕೆಡಬೇಡ;
ಸಿಟ್ಟು ದುರ್ಗುಣಗಳಲ್ಲಿ ಶ್ರೇಷ್ಟವು,
ಸಿಟ್ಟು ಕೆಟ್ಟತನೊಟ್ಟು ತೋರ್ಪುದು,
ಸಿಟ್ಟನಿಂ ಸುಖವಿಲ್ಲ ಮನುಜನ ಸುಟ್ಟುಬಿಡುತಿಹುದು !!

ಸಿಟ್ಟು ವೈರವ ಬೆಳಿಸುತಿಪ್ಪುದು,
ಸಿಟ್ಟು ಪ್ರೇಮವ ಕಡಿಸುತಿರುವದು,
ಸಿಟ್ಟು ನಿಶ್ಚಯವನ್ನು ತೊಲಗಿಸಿ ಬಾಳಗೊಡುತಿಹುದು;
ಸಿಟ್ಟು ಕಷ್ಟಕೆ ಮೂಲಕಾರಣ,
ಸಿಟ್ಟು ಶಾಂತಿಗೆ ಕ್ರಾಂತಿಕಾರಕ,
ಸಿಟ್ಟು ಮನುಜನ ಭ್ರಷ್ಟತೆಯ ಕುರುಹೆಂದು ತಿಳಿಯುವದೂ!!

ಸಿಟ್ಟು ಬಂದಿರೆ ಇಟ್ಟು ಭಕುತಿಯ,
ಸೃಷ್ಟಿಗೊಡೆಯನ ಶ್ರೇಷ್ಟ ಚರಿತೆಯ,
ಗುಟ್ಟನಿಂದಲಿ ನೋಡು ನಿನ್ನಾ ಸಿಟ್ಟು ಪೋಗುವದೂ;
ಸಿಟ್ಟು ಮಾಡಲು ಬೇಡ ಗೆಳೆಯಾ,
ಶ್ರೇಷ್ಟ ಜೀವನ ವ್ಯರ್ಥಗೊಳಿಸದೆ,
ಸಿಟ್ಟು ತಡೆಯೈ ಸಿಟ್ಟನನುಭವದಿಂದೆ ಪೇಳಿಡಿಸೂ !!

—ಸುಭದ್ರಾತನಯ

ಸಾಂಸಾರಿಕ ತೊಂದರೆಗಳಿಂದ ಸಮಯವು ದೊರೆಯದೆ ನಿಂತುಹೋಗುವವು. ಆದುದರಿಂದ ಸರ್ವ ಸಾಮಾನ್ಯವಾಗಿ ಎಲ್ಲರೂ ನಮ್ಮ ದೇಶದ ವ್ಯಾಯಾಮ ಗಳನ್ನು ಸಾಧನೆ ಮಾಡಿ ಸ್ಕೂಲು ಕಾಲೇಜು ವಿದ್ಯಾರ್ಥಿಗಳಲ್ಲಿ ಇವುಗಳನ್ನು ವಿಶೇಷವಾಗಿ ಪ್ರಚಾರಮಾಡಬೇಕು. ನಮ್ಮ ದೇಶದ ಜನಗಳ ಮೇಲೆ ಕ್ರಮ ವಾಗಿ ದೃಷ್ಟಿಯಿಡುತ್ತ ಹೋದರೆ ಬಹಳ ಮಾಡಿ ಧನಿಕರೂ, ಅವರ ಮಕ್ಕಳೂ ರೋಗಿಗಳಾಗಿ ಬಳಲುತ್ತಿರುವುದು ಕಂಡು ಬರುವುದು. ಹೀಗಾಗುವುದಕ್ಕೆ ತಾವು ವ್ಯಾಯಾಮ ಮಾಡದಿರುವುದೂ ಮಕ್ಕಳಿಗೆ ಮಾಡಿಸದಿರುವುದೂ ಬಲವಾದ ಕಾರಣಗಳಾಗಿವೆ.

ಪ್ರತಿನಿತ್ಯದಲ್ಲಿ ಸಾಧಿಸುವ ವ್ಯಾಯಾಮದಿಂದ ಮನವು ಯಾವಾಗಲೂ ಶಾಂತವಾಗಿಯೂ ಹರ್ಷವಾಗಿಯೂ ಇರುವುದು, ಎಂತಹ ಕಷ್ಟಗಳಾದ ಕಾರ್ಯ ಗಳೂ ಸುಲಭವಾಗಿ ತೊರುವವು, ಇಂದ್ರಿಯಗಳನ್ನು ಸ್ವಾಧೀನಪಡಿಸಿಕೊಳ್ಳುವ ಶಕ್ತಿ ದೊರೆಯುವುದು, ವಿಷಯಭೋಗಾಶೆಯು ಕಡಿಮೆಯಾಗುವುದು, ನಾನಾ ಪ್ರಕಾರಗಳಾದ ಶಾರೀರಿಕ ಮಾನಸಿಕ ದುಃಖಗಳು ದೂರಾಗುವವು.

ಯಾವನು ತನ್ನ ಮಲಮೂತ್ರಾದಿಗಳನ್ನು ತಡೆಯುವದಿಲ್ಲವೋ, ಯಾವನು ಅತಿಶ್ರಮದಿಂದ ಕಾರ್ಯವನ್ನು ಮಾಡುವದಿಲ್ಲವೋ, ಯಾವನು ಆಲೋಚನೆ ಮಾಡದೆ ಆಲೋಚನೆ ಮಾಡಿದ್ದನ್ನು ತಿಳಿದುಕೊಳ್ಳದೆ ಮಾತನಾಡುವದಿಲ್ಲವೊ, ಯಾವನು ಲೋಭ, ಮೋಹ, ಭಯ, ಕ್ರೋಧ, ದುರಭಿಮಾನ, ದುರ್ವಚನ, ನಿರ್ಲಜ್ಜತೆ, ಈರ್ಷ್ಯೆ, ಕಳ್ಳತನ ಮುಂತಾಗಿ ನಡೆಯಬಹುದಾದ ಮನೋವಿಕಾರ ಗಳನ್ನು ಸ್ವೀಕರಿಸುವನೋ, ಯಾವನು ಯೋಗ್ಯಗಳಾದ ಆಹಾರಗಳನ್ನು ಮಾಡು ವನೊ, ಯಾವನು ಗೊತ್ತುಪಡಿಸಿಕೊಂಡ ಹೊತ್ತಿಗೆ ಸರಿಯಾಗಿ ಮಲಗುವುದನ್ನೂ ಏಳುವುದನ್ನೂ ಮಾಡುವನೊ, ಯಾವನು ನಿಯಮ ಪೂರ್ವಕವಾಗಿ ವ್ಯಾಯಾಮ ಮಾಡುವನೊ ಅವನೇ ರೋಗರಹಿತನಾಗಿ ಬಾಳುವನು. ಒಂದು ನಿಶ್ಚಿತವಾದ ನಿಯಮವನ್ನು ಮಾಡಿಕೊಂಡು ಅದರಂತೆ ಕೆಲಸ ಮಾಡುವಾಗ ಕೆಲಸವನ್ನೂ, ವಿಹಾರ ಮಾಡುವಾಗ ವಿಹಾರವನ್ನೂ, ಮಾಡಬೇಕಲ್ಲದೆ ಕೆಲಸದ ವೇಳೆಯಲ್ಲಿ ವಿಹಾರವನ್ನೂ, ವಿಹಾರದ ವೇಳೆಯಲ್ಲಿ ಕೆಲಸವನ್ನೂ ಮಾಡಬಾರದು; ಇಷ್ಟಲ್ಲದೆ ಕೆಲಸದ ನೆಪದಿಂದ ಯಾವಾಗಲೂ ದುಡಿದು. ದುಡಿದು ಹಣ್ಣಾಗಿ ಸಾಯುವು ದಾಗಲೀ, ವಿಹಾರದ ನೆಪದಿಂದ ಮನಬಂದಂತೆ ತಿರುಗಿ ತಿರುಗಿ ಇದ್ದ ಹಣವನ್ನೆಲ್ಲ ಕಳೆದು ಕಪಿಯಾಗುವುದಾಗಲೀ ಒಳ್ಳೆಯದಲ್ಲ. ಯಾರು ಬಹಳ ಹೊತ್ತಿನವರೆಗೆ ದುಡಿಯುವರೋ ಅವರು ಅವಶ್ಯವಾಗಿ ಸ್ವಲ್ಪ ವೇಳೆಯನ್ನು ಆಟಓಟಗಳಿಗಾಗಿ

ಕೊಟ್ಟು ಆನಂದಪಟ್ಟು ಮನಸ್ಸಿಗೆ ವಿಶ್ರಾಂತಿಯನ್ನೀಯುವುದೊಳ್ಳೆಯದು.

ಯೋಗಶಾಸ್ತ್ರದಲ್ಲಿ ಆಸನವನ್ನೂ ಆ ಶಾಸ್ತ್ರದ ಒಂದು ಅಂಗವನ್ನಾಗಿ ಹೇಳಿದ್ದಾರೆ. ಈ ಆಸನಕ್ಕೆ ಒಂದು ಬಗೆಯಾದ ವ್ಯಾಯಾಮವೆಂತಲೂ ಹೇಳಬಹುದು. ಇದು ಶರೀರಕ್ಕೆ ಅತ್ಯಂತ ಉಪಕಾರಿಯಾಗಿದೆ. ಅಲ್ಲದೆ ಇದರಿಂದ ಮಾನಸಿಕ ಲಾಭವೂ ವಿಶೇಷವಾಗುವುದು. ಎಲ್ಲಿಯವರೆಗೆ ಆಸನದ ಸಿದ್ಧಿಯಾಗುವುದಿಲ್ಲವೋ ಅಲ್ಲಿಯವರೆಗೆ ಮನಸ್ಸಿನ ಚಂಚಲತನವು ಹೋಗುವುದಲ್ಲ. ಆದುದರಿಂದಲೇ ಮನಸ್ಸಿನಲ್ಲಿ ವಿಷಯವಾಸನೆಗಳು ಹಬ್ಬಿಕೊಂಡಿರುತ್ತವೆ. ಈ ಆಸನಗಳಲ್ಲಿ ವೀರ್ಯವನ್ನು ಕಾಪಾಡಿ ಇಂದ್ರಿಯಗಳನ್ನು ಶಾಂತವಾಗಿಡಲು ಸಮರ್ಥವಾದುವುಗಳೂ ಕೆಲವಿವೆ. ಅದಕ್ಕಾಗಿಯೇ ಯೋಗಿಗಳು ಆಸನಗಳನ್ನು ಪ್ರಾಯಃ ಅಭ್ಯಾಸಮಾಡಿರುತ್ತಾರೆ.

ನೆಟ್ಟಗೆ ಕೂಡ್ರುವುದು, ನೆಟ್ಟಗೆ ನಡೆಯುವುದು ಮುಂತಾದವುಗಳೂ ಆಸನಗಳ ಅಂಗಗಳಾಗಿವೆ. ಬಹಳಮಾಡಿ ಜನರು ಇತ್ತಕಡೆಗೆ ಚಿತ್ತವನ್ನೇ ಕೊಡುವುದಿಲ್ಲ. ಅಂತೆಯೇ ಶರೀರವನ್ನು ರೋಗರಹಿತವಾಗಿಟ್ಟುಕೊಳ್ಳುವುದಕ್ಕೆ ಅತ್ಯಾವಶ್ಯಕವಾದ ಅವರ ಶ್ವಾಸೋಚ್ಛ್ವಾಸ ಕ್ರಿಯೆಯೂ ಸಹ ಯೋಗ್ಯರೀತಿಯಿಂದ ನಡೆಯುವುದಿಲ್ಲ; ಅಂದಮೇಲೆ ರೋಗವು ಕುಗ್ಗುವುದಾದರೂ ಹೇಗೆ? ಜೀವನಶಕ್ತಿಯು ಹಿಗ್ಗುವುದಾದರೂ ಹೇಗೆ?

ಆಸನಗಳಲ್ಲಿ ಸಿದ್ಧಾಸನವು ಸರ್ವಸಾಮಾನ್ಯವಾಗಿ ಅತ್ಯಂತ ಉಪಕಾರಿಯಾಗಿದೆ. ಇದರಿಂದ ಯಾರಿಗೂ ಯಾವ ಬಗೆಯಾದ ಹಾನಿಯೂ ಇಲ್ಲ. ಅಲ್ಲದೆ ಇದು ಸರಳವಾಗಿಯೂ ಇದೆ. ಇದಕ್ಕೆ ಹೊರತಾದ ಆಸನಗಳು ಕಷ್ಟಸಾಧ್ಯಗಳಾಗಿವೆ. ಹಾಗೂ ದೇಶ, ಕಾಲ, ಬಲ ಮುಂತಾದವುಗಳನ್ನು ವಿಚಾರಮಾಡಿಕೊಂಡು ಪ್ರಾರಂಭಿಸತಕ್ಕವುಗಳೂ ಆಗಿವೆ; ಅವುಗಳನ್ನಾಚರಿಸುವಾಗ ಅಲ್ಪ ಸ್ವಲ್ಪ ವ್ಯತ್ಯಾಸವುಂಟಾದರೆ ಶಾರೀರಿಕ ಮಾನಸಿಕ ಹಾನಿಗಳೊದಗುವ ಸಂಭವವೂ ಉಂಟು. ಪುಸ್ತಕದಲ್ಲೋದಿಕೊಂಡು ಇವುಗಳನ್ನು ವಿಚಾರದಲ್ಲಿ ಎಂದೂ ಉದ್ಯುಕ್ತರಾಗಬಾರದು. ಬಲ್ಲವರಿಂದ ಮೊದಲು ಕಲಿತುಕೊಳ್ಳಬೇಕು; ಪುಸ್ತಕಗಳಲ್ಲಿ ಎಲ್ಲಾ ವಿಷಯವೂ ಬರೆಯಲ್ಪಟ್ಟಿರುತ್ತದೆ. ಆದರೆ ವ್ಯಾವಹಾರಿಕ ಜ್ಞಾನವು ಗುರುವಿಲ್ಲದೆ ಎಂದೂ ಫಲಿಸುವುದಿಲ್ಲ.

ಆಸನಗಳನ್ನು ಸಮವಾದ ಭೂಮಿಯಮೇಲೆ ಸಾಧಿಸಬೇಕು. ಮೊದಲು ಶೌಚವಿಧಿ, ದಂತಧಾವನವಿಧಿ, ಸ್ನಾನವಿಧಿಗಳನ್ನು ಮುಗಿಸಿಕೊಂಡಿದ್ದ ಮೇಲೆ ಆಸನ

ಗಳಿಂದುಂಟಾದ ಫಲವು ಪೂರ್ಣವಾಗಿ ದೊರೆಯುವುದು. ಎಲ್ಲಾ ಆಸನಗಳ ಸಾಧನೆಗೂ ಪ್ರಾತಃಕಾಲವೇ ಉತ್ತಮವಾದುದು. ಸಿದ್ಧಾಸನವನ್ನು ಹಾಕಿಕೊಂಡು ೧ ಘಂಟೆಯವರೆಗೂ ಕುಳಿತುಕೊಳ್ಳಬಹುದು. ಹೀಗೆ ಮಾಡುವುದರಿಂದ ಯಾವ ಹಾನಿಯೂ ಇಲ್ಲ. 'ಯೋಗಸೋಪಾನ' ದಲ್ಲಿ ಈ ಸಿದ್ಧಾಸನದ ವಿಧಿಯನ್ನು ಈ ಪ್ರಕಾರವಾಗಿ ಬರೆದಿದ್ದಾನೆ.

ಗುದದು ಮೇಣಂಡಗಳಮಧ್ಯದೊ|
ಳೊದವಿದುದ್ಧಸ ನರದೆ ಹಿಮ್ಮಡ|
ವದುಮಿ ಮೇಣ್‌ಗುಹ್ಯೋರ್ಧ್ವದೇಶದೆ ಬೇರೆ ಹಿಮ್ಮಡವ||
ಅದುಮಿ ಎದೆಮೇಲ್ಗಡೆಯೆ ಗದ್ದವ|
ನದುಮಿ ದೇಹವ ನೆಟ್ಟಗಿರಿಸುತ|
ಮುನದಿ ಭ್ರೂಮಧ್ಯವನು ನೋಳ್ಪಾಸರವೆ "ಸಿದ್ಧಾಹ್ವಂ"||

ಈ ಆಸನದಿಂದ ಮನಸ್ಸು ಬಹುಶಾಂತವಾಗಿರುವುದೆಂದೂ ಆರೋಗ್ಯವು ಹೆಚ್ಚುವುದೆಂದೂ, ನಾಡಿಗಳು ಶುದ್ಧವಾಗುವವೆಂದೂ, ಗೃಹಸ್ಥರಿಗಿಂತ ನೈಷ್ಠಿಕಬ್ರಹ್ಮಚಾರಿಗಳಿಗೆ ಅಧಿಕ ಲಾಭವಾಗುವುದೆಂದೂ 'ಯೋಗಸೋಪಾನ' ದಲ್ಲಿಯೇ ಬರೆದಿದ್ದಾರೆ.

ನಮ್ಮ ಭಾರತ ದೇಶದ ಪ್ರಾಚೀನ ಪದ್ಧತಿಯಂತೆ ಸ್ತ್ರೀಯರೂ ಶಕ್ತಿಮತಿಯರಾಗಿರಬೇಕು. ಆದರೆ ಆ ಶಕ್ತಿಯು ಪಾತಿವ್ರತ್ಯದಿಂದ ಬಂದುದಾಗಿರಬೇಕು; ಪಾಪದೃಷ್ಟಿಯಿಂದ ನೋಡಿದ ಕಣ್ಣು ಕುರುಡಾಗಬೇಕು ಪಾಪವಿಚಾರದಿಂದಾಡುವ ನಾಲಿಗೆ ಹೋಳಾಗಬೇಕು. ಪಾಪಬುದ್ಧಿಯಿಂದ ಕೇಳಿದ ಕಿವಿ ಕಿವುಡಾಗಬೇಕು. ಇಂಥವರಲ್ಲವೇ ನಮ್ಮ ಪೂರ್ವದ ಪತಿವ್ರತೆಯರು? ಈಗಿನವರೂ ಪೂರ್ವಕಾಲದ ಪತಿವ್ರತೆಯರಾಗಬೇಕು. ಅವರಂತೆ ಪತಿಸೇವೆಯನ್ನು ಮಾಡಬೇಕು. ಪವಿತ್ರವಾದ ಈ ಸತಿಸೇವೆಯೇ ಇವರಿಗೆ ಮಹಾಶಕ್ತಿಯನ್ನುಂಟುಮಾಡುವ ವ್ಯಾಯಾಮವು ಪತಿಸೇವೆಯೆಂದರೆ ಪತಿಯು ಸ್ನಾನಮಾಡಿಸಿ ಊಟಕ್ಕಿಡುವುದಿಷ್ಟೇ ಎಂದು ಎಷ್ಟೋ ಪತಿವ್ರತೆಯರು ತಿಳಿದುಕೊಂಡಿರಬಹುದು. ಅದು ಹಾಗಲ್ಲ. ಪತಿಗೆ ಸಂಬಂಧಪಟ್ಟ ಸಮಸ್ತ ಗೃಹಕೃತ್ಯವನ್ನು ಸಾಗಿಸಿಕೊಂಡು ಹೋಗುವುದೂ ಪತಿಸೇವೆಯಲ್ಲಿ ಒಂದು ಅಂಗವಾಗಿದೆ, ಅಡಿಗೆಮಾಡುವುದು, ನೀರು ತರುವುದು, ಕಸಮುಸುರೆಗಳನ್ನು ತೆಗೆಯುವುದು, ಬೀಸುವುದು ಇವೇ ಮುಂತಾದ ಎಷ್ಟೋ ಕೆಲಸಗಳೂ ಪತಿಸೇವೆಯಲ್ಲಿಯೇ ಸೇರುವುದು. ಮಹಿಳೆಯರಿಗೆ ಇವೇನು ಸಾಮಾನ್ಯ ವ್ಯಾಯಾಮಗಳಲ್ಲ. ಪುರುಷನು ತನ್ನ ಶಕ್ತಿವೃದ್ಧಿಗಾಗಿ ಮಾಡಬೇಕಾದ ವ್ಯಾಯಾಮಗಳು ಅನಂತವಿಧವಾಗಿರುವವಾದರೂ ಎಲ್ಲವನ್ನೂ ಮಾಡಲು ಹೇಗೆ ಸಮರ್ಥನಾಗುವುದಿಲ್ಲವೋ

ಹಾಗೆಯೇ ಮಹಿಳೆಯರೂ ಮನೆಯಲ್ಲಿಯ ಎಲ್ಲಾ ಕೆಲಸಗಳನ್ನು ಮಾಡಲಾಗದೆ ತಮ್ಮ ಪತಿಯನ್ನೂ ಸಹಾಯಕ್ಕಾಗಿ ಕರೆಯುವುದು ಉಚಿತವಹುದಾದರೂ ಗೃಹಕೃತ್ಯಗಳು ಸಾಮಾನ್ಯವಾಗಿ ಮಹಿಳೆಯರ ವ್ಯಾಯಾಮಗಳೆಂತಲೇ ಹೇಳಬೇಕಾಗುವುದು. ಈ ಗೃಹಕೃತ್ಯದಲ್ಲಿ ತೊಡಗಿರುವ ಮಹಿಳೆಯರಿಗೆ ಪ್ರತ್ಯೇಕ ವ್ಯಾಯಾಮಗಳೇ ಬೇಕಾಗಿಲ್ಲ. ಇನ್ನು ಪತಿಯು ಕ್ಷತ್ರಿಯ ವೀರನಾಗಿದ್ದು ಆತನ ಸಂಸರ್ಗದಿಂದ ಸತಿಯಲ್ಲಿಯೂ ಕ್ಷಾತ್ರಗುಣಗಳು ಬರುವ ಮಾತುಬೇರೆ. ಮಹಿಳೆಯರು ಎಷ್ಟು ಪರಾಕ್ರಮವತಿಯರಾಗಿ ಮೆರೆದರೂ ಅಬಲೆಯರೆಂಬ ನಾಮವು ಅವರನ್ನು ಬಿಟ್ಟು ಬೇರೆ ಕಡೆ ಹೋಗುವಂತಿಲ್ಲ.

ಈ ನವನಾಗರಿಕತೆಯಲ್ಲಿ ಆಂಗ್ಲವಿದ್ಯಾಪ್ರಚಾರದಿಂದಲೋ, ಶ್ರೀಮಂತಿಕೆಯ ಕಾರಣದಿಂದಲೋ ನಮ್ಮ ಮಹಿಳೆಯರು ತಾವು ಮಾಡುವ ಗೃಹಕೃತ್ಯಗಳನ್ನು ಆಳುಗಳಿಂದ ಮಾಡಿಸುತ್ತಿರಲೂಬಹುದು. ತಾವು ರೋಗಿಗಳಾಗಿ ಮೂಲೆಗೆ ಕುಳಿತಿರಲೂಬಹುದು, ಇದನ್ನು ಅಲ್ಲಗಳೆವುದು ನಮಗೆ ಸಾಧ್ಯವಲ್ಲವಾದರೂ ಈ ತಪ್ಪು ಮಹಿಳೆಯರದಲ್ಲವೇ ? ನಿಜವಾದ ಈ ಕಾರಣವನ್ನರಿಯದ ನೂತನ ಪತಿಗಳು ತಮ್ಮ ಪ್ರಿಯ ಪತ್ನಿಯರ ರೋಗನಿವಾರಣೆಗಾಗಿ ಬಹಳ ಹಣವನ್ನು ವ್ಯಯಮಾಡುತ್ತಿರುವರು. ಆದುದರಿಂದ ಮಹಿಳೆಯರು ತಮ್ಮ ಗೃಹಕೃತ್ಯಗಳನ್ನು ಸಾಧ್ಯವಾದ ಮಟ್ಟಿಗೂ ತಾವೇ ಮಾಡುತ್ತ ಆರೋಗ್ಯಕಾಯರಾಗಿ ಹಣವು ವ್ಯರ್ಥವಾಗಿ ಹಾಳಾಗದಂತೆ ಮಾಡುವುದುತ್ತಮ. ಒಟ್ಟಿನ ಮೇಲೆ ಸ್ತ್ರೀಪುರುಷರಿಬ್ಬರಿಗೂ ವ್ಯಾಯಾಮ ಬೇಕು. ನಮ್ಮ ದೇಶದಲ್ಲಿ ಸ್ತ್ರೀಯರು ರೋಗಿಗಳಾಗಿರುವುದು ಹೆಚ್ಚು. ಆದುದರಿಂದ ಇವರಲ್ಲಿ ಹುಟ್ಟುವ ಮಕ್ಕಳೂ ಕೂಡ ಅಶಕ್ತರೂ ರೋಗಿಗಳೂ ಆಗಿರುತ್ತಾರೆ. ಯಾವ ಮನುಷ್ಯನು ಯಾವಾಗಲೂ ರೋಗಿಯೇ ಆಗಿರುವನೋ ಆತನ ಆಯುಷ್ಯವು ಕಡಿಮೆಯಾಗುವುದು ಸಹಜವಾಗಿದೆ. ರೋಗವುಳ್ಳ ಮನುಷ್ಯನ ಶ್ವಾಸಕ್ರಿಯೆಯು ಬಹಳ ವೇಗವಾಗಿ ನಡೆಯುತ್ತಿರುವದಾದ್ದರಿಂದಲೇ ಆಯುಷ್ಯವು ಕ್ಷೀಣವಾಗುತ್ತದೆ.

ಯಾವ ಮನುಷ್ಯನು ತಾನು ಸುಖವಾಗಿ ಜೀವಿಸಬೇಕೆಂದೂ, ಸಂಸಾರದಲ್ಲಿಯ ಸಮಸ್ತ ಪದಾರ್ಥಗಳ ಆನಂದವನ್ನು ತೆಗೆದುಕೊಳ್ಳಬೇಕೆಂದೂ, ಬಯಸುವನೋ ಅವನು ಯಾವಾಗಲೂ ತನ್ನ ಜಾಣ್ಮೆಯಿಂದ ನಿರೋಗಿಯಾಗಿರುವದಕ್ಕಾಗಿ ಪ್ರಯತ್ನ ಪಡಬೇಕು. ಸಂಸಾರದಲ್ಲಿ ಯಾವ ಕಾರ್ಯಗಳು ಪೂರ್ತಿಯಾಗಬೇಕಾದರೂ ಪುರುಷನೋರ್ವನು ಬೇಕೇಬೇಕು. ಆ ಪುರುಷನಾದರೂ ನಿರೋಗಿಯಾಗಿದ್ದರೇನೇ ಎಲ್ಲಾ ಕಾರ್ಯಗಳನ್ನು ಸುಲಭವಾಗಿ ಮಾಡಲು ಸಮರ್ಥನಾಗುತ್ತಾನೆ.

ಮನುಷ್ಯನ ಶರೀರವು ಒಂದು ಬಗೆಯಾದ ಯಂತ್ರವು. ಈ ಯಂತ್ರವನ್ನು ಯಾವಾಗಲೂ ಜೋಪಾನಮಾಡಬೇಕು; ಹಾಗೆ ಮಾಡದಿದ್ದರೆ ಚಲನ ಕ್ರಿಯೆಯು ಕಡಿಮೆಯಾಗುತ್ತಾಗುತ್ತ ಒಂದು ದಿನ ಸಂಪೂರ್ಣವಾಗಿ ನಿಂತುಹೋಗುವುದು.

ವ್ಯಾಯಾಮವು ಶಾರೀರಿಕ, ಮಾನಸಿಕವೆಂಬುದಾಗಿ ಎರಡು ತೆರನಾಗಿದೆ. ಮನುಷ್ಯನು ಆಯಾಯ ಅವಯವವನ್ನು ಪುಷ್ಟಗೊಳಿಸಬೇಕೆಂದು ಬಯಿಸಿ ಆ ಅವಯವಕ್ಕೆ ತಕ್ಕ ಯಾವ ವ್ಯಾಯಾಮವನ್ನು ಮಾಡಬೇಕಾಗುವುದೋ ಅದಕ್ಕೆ ಶಾರೀರಿಕ ವ್ಯಾಯಾಮವೆನ್ನುವರು. ಶರೀರದ ಈ ಅಂಗವು ಇಂದು ಪುಷ್ಟವಾಗಿದೆ, ಇನ್ನೂ ಪುಷ್ಟವಾಗುವುದು, ಕಾಂತಿಯುಳ್ಳದಾಗುವುದು ಮುಂತಾಗಿ ಇಚ್ಛಾಶಕ್ತಿಯ ಆಲೋಚನೆಗಳನ್ನು ಮನಸ್ಸಿನೊಡನೆ ಸಂಬಂಧಗೊಳಿಸಿ ಆ ಇಚ್ಛಾಶಕ್ತಿಯಿಂದಲೂ ಅವಯವಗಳನ್ನು ವೃದ್ಧಿಪಡಿಸಿಕೊಳ್ಳುವುದಕ್ಕೆ ಮಾನಸಿಕ ವ್ಯಾಯಾಮವೆನ್ನುವರು. ಹೀಗೆ ಎರಡು ಬಗೆಯಾದ ಈ ವ್ಯಾಯಾಮಸಾಧನೆಯಿಂದ ಸ್ವಲ್ಪ ದಿನಗಳಲ್ಲಿಯೇ ಶರೀರವು ಪುಷ್ಟವೂ ಸುಂದರವೂ ಆಗುವುದು. ಔಷಧಿಯಿಂದ ಗುಣವಾಗದ ರೋಗವು ವ್ಯಾಯಾಮದಿಂದಲೂ, ಯೋಗಾಭ್ಯಾಸದಿಂದಲೂ, ಆಸನಸಾಧನೆಯಿಂದಲೂ ಅವಶ್ಯವಾಗಿ ಗುಣವಾಗುವುದು. ಈ ಸಾಧನೆಗಳನ್ನು ಮಾಡುವವನಿಗೆ ವಿಶ್ವಾಸವೂ, ಅದಕ್ಕೆ ತಕ್ಕ ಪರಿಶ್ರಮವೂ ಬೇಕಾಗುವುದು. ವ್ಯಾಯಾಮ ಮಾಡುವುದರಿಂದ ದೊಡ್ಡದೊಡ್ಡ ರೋಗಗಳೂ ದೂರಾಗಬಲ್ಲವು. ವ್ಯಾಯಾಮ ಶಾಸ್ತ್ರವು ಔಷಧಿ ಶಾಸ್ತ್ರಕ್ಕೇನೂ ಕಡಿಮೆಯಾದುದಲ್ಲ. ಆದರೆ ಇದನ್ನು ತಿಳಿದುಕೊಳ್ಳುವ ಜನಸಂಖ್ಯೆಯು ಕಡಿಮೆಯಾಗಿದೆ.

## ಸ್ನಾನ

ಸಮಸ್ತ ಪ್ರಾಣಿಮಾತ್ರದಲ್ಲಿಯೂ ಪ್ರಚಾರದಲ್ಲಿರುವ ಸ್ನಾನದ ವಿಷಯವಾಗಿ ಯಾರೂ ಅಪರಿಚಿತರಿಲ್ಲ. ಆದರೆ ಮಾಡುವ ಆಚಾರವು ಶುದ್ಧವಾಗಿದ್ದರೂ ಅದರ ಪ್ರಯೋಜನವನ್ನರಿಯದೆ ಮಾಡುವವರು ಬಹಳ ಮಂದಿ. ತಿಳಿಯದವರು 'ಜಳಕಾ ಅಂದ್ರ ಇದೊಂದು ಧರ್ಮ ಬಿಡೋ," ಎಂತಲೂ, ತಿಳಿದವರು 'ಆರೋಗ್ಯ ನಿಯಮಗಳಲ್ಲಿ ಇದೊಂದು ನಿಯಮ, ಸಾಬೂನ ಹಚ್ಚಿ ಚೆನ್ನಾಗಿ ತಿಕ್ಕಿಕೊಂಡು ಒಮ್ಮೆ ಸ್ನಾನಮಾಡಿದರೆ ಎಷ್ಟೋ ದಿವಸ ಕಾಲಹಾಕಬಹುದು; ಇದರಲ್ಲೇನಾಶ್ಚರ್ಯವೆಂತಲೂ ತಮ್ಮ ಬುದ್ಧಿಗೆ ತಕ್ಕಂತೆ ಅರ್ಥಮಾಡಿಕೊಳ್ಳುವರು. ಈ ಸ್ನಾನವು ಧರ್ಮವೂ ಅಹುದು; ಆರೋಗ್ಯ ನಿಯಮವೂ ಅಹುದು. ಆದರೆ ಧರ್ಮವೆಂದು ತಿಳಿದವರಿಗೆ ಧರ್ಮದೊಡನೆ ಆರೋಗ್ಯ ನಿಯಮವಾಗಿಯೂ, ಆರೋಗ್ಯ ನಿಯಮ

ವೆಂದು ತಿಳಿದವರಿಗೆ ಆರೋಗ್ಯ ನಿಯಮದೊಡನೆ ನಿತ್ಯಾನುಷ್ಠೇಯ ಧರ್ಮವಾಗಿ ಯೂ ಸರ್ವತ್ರ ಪ್ರಚಾರವಾಗಬೇಕು.

ವಿಚಾರಮಾಡಿ ನೋಡಿದರೆ ವೇದಮಾರ್ಗಾವಲಂಬಿಯಾದ ಪ್ರತಿಯೊಂದು ಧರ್ಮದಲ್ಲಿಯೂ ಈ ಸ್ನಾನವನ್ನು ಒಂದು ಮುಖ್ಯ ಧಾರ್ಮಿಕ ಕೃತ್ಯವನ್ನಾಗಿಯೇ ಆಚರಿಸುವುದು ಕಂಡುಬರುವುದು ಧರ್ಮೋಪದೇಶಕರು ಶ್ರುತಿಸ್ಮೃತಿ ಮುಂತಾದ ವುಗಳ ದ್ವಾರಾ ಆಚರಿಸಬೇಕಾದ ಯಾವ ಕರ್ಮಗಳನ್ನು ಹೇಳಬೇಕಾದರೂ ಮೊ ದಡು 'ನೈರ್ಮಲ್ಯಂ ಭಾವಶುದ್ಧಿಶ್ಚ ವಿನಾ ಸ್ನಾನಂ ನಜಾಯತೇ | ತಸ್ಮಾನ್ಮನೋ ವಿಶುದ್ಧ್ಯರ್ಥಂ ಸ್ನಾನಮಾದೌ ವಿಧಿಯತೇ || (ಪದ್ಮಪುರಾಣ) ಎಂತಲೂ, 'ಸ್ನಾ ತ್ವಾ ದ್ವಿವಾರಂ ಶಿವಮರ್ಚಯಿಷ್ಯನ್ ಭುಂಜಿತ ನೋಚೇನ್ನರಕಂ ಪ್ರಯಾತಿ ಎಂ ತಲೂ, ಸ್ನಾನಕರ್ಮಕ್ಕೆ ಪ್ರಾಧಾನ್ಯವನ್ನು ಕೊಟ್ಟೇ ಮುಂದೆ ಸಾಗಿದ್ದಾರೆ. ನಮ್ಮ ದೇಶವು ಧರ್ಮವನ್ನು ಪ್ರಾಣವನ್ನಾಗಿ ತಿಳಿಯುತ್ತಿದೆ. ಹಿತಕರವಾದ ಯಾವು ದೊಂದು ಆಚರಣೆಯನ್ನೂ ಧರ್ಮರೂಪವಾಗಿ ಬೋಧಿಸಿದರೆ ಅದನ್ನು ಬಹು ಶ್ರದ್ಧೆಯಿಂದಲೂ ಯತ್ನದಿಂದಲೂ ಪಾಲಿಸಲುದ್ಯುಕ್ತವಾಗುತ್ತದೆ. ಆದುದರಿಂದ ನಮ್ಮ ಪೂರ್ವಿಕರು. ಸ್ವಾಸ್ಥ್ಯರಕ್ಷಣೆಗಾಗಿ ಸ್ನಾನವು ಉತ್ತಮವಾದ ವಿಧಿಯೆಂದು ತಿಳಿದು 'ಸ್ನಾನವಿಲ್ಲದೆ ಊಟಮಾಡುವುದು ಅಧರ್ಮವೆಂದು ಒಂದು ಧರ್ಮನಿಯ ಮವನ್ನೇ ರಚಿಸಿ ಪ್ರಚಾರಮಾಡಿದ್ದಾರಲ್ಲದೆ ಸ್ನಾನದಿಂದ ನಿರೋಗಿಗಳಾಗಿ ಬಾಳಲಿ, ದೇಶಪರದೇಶದವರು ಒಂದುಕಡೆ ಕೂಡಿ ಪರಸ್ಪರ ಪರಿಚಯವನ್ನು ಹೊಂದಲಿ, ನಿತ್ಯಾನಂದವನ್ನು ಪಡೆಯಲಿ ಎಂಬಭಿಪ್ರಾಯದಿಂದಲೇ ಸಂಕ್ರಾಂತಿ, ಶಿವರಾತ್ರಿ ಗ್ರಹಣ ಮುಂತಾದ ಪರ್ವಗಳಲ್ಲಿ ಗಂಗಾ ತುಂಗಾದಿ ನದಿಗಳಲ್ಲಿ ಅವಶ್ಯವಾಗಿ ಸ್ನಾನ ಮಾಡಬೇಕೆಂದು ಕಟ್ಟಪ್ಪಣೆ ಮಾಡಿದ್ದಾರೆ.

ಧಾರ್ಮಿಕ ಕೃತ್ಯವೆಂದು ಆಚರಿಸುತ್ತಿರುವ ಈ ಸ್ನಾನದಲ್ಲಿ ಅನೇಕ ಗುಣಗ ಳುಂಟೆಂದು ಆರೋಗ್ಯ ಶಾಸ್ತ್ರಕಾರರೂ ಹೇಳುತ್ತಾರೆ. ಸ್ನಾನದಿಂದ ಶರೀರದ ಕೊಳೆ, ಬೆವರು ಮುಂತಾದುದು ಕಳೆದು ಅವಯವಗಳು ಸ್ವಚ್ಛವಾಗುವವು; ರೋ ಮ ಕೂಪಗಳು ತೆರೆದು ಸೂಕ್ಷ್ಮ ವಾಯುವಿಸರ್ಜನೆ-ಸ್ವೀಕಾರಗಳಲ್ಲಿ ಸಮರ್ಥವಾ ಗುವುವು. ಶರೀರದ ಉಷ್ಣತೆ, ಆಲಸ್ಯಗಳೂ ಅಥವಾ ಹಗಲೆಲ್ಲಾ ದುಡಿದು ಕಾಯ್ದಿ ರುವ ಮಿದುಳುಗಳೂ ಶಾಂತವಾಗುವವು, ಅವಯವಗಳು ಮೃದುವಾಗಿರುವವು. ಚಿತ್ತಕ್ಕೆ ಶಾಂತಿಯೂ ಅದರಿಂದುಂಟಾಗುವ ಸತ್ವಗುಣವೂ ಅಭಿವೃದ್ಧಿ ಹೊಂದು ವುವು. ಶರೀರದಲ್ಲಿ ಅಪೂರ್ವವಾದ ಬಲವುಂಟಾಗುವದು, ದೇಹದೊಳಗಿನ ದೂಷಿತ ಶ್ಲೇಷ್ಮಾದಿಗಳು ಕಿತ್ತು ಹೊರಗೆ ಬರುವವು. ಮನಸ್ಸು ಯಾವಾಗಲೂ ಆನಂದ

ವಾಗಿಯೂ ಸ್ಥಿರವಾಗಿಯೂ ಇರುವುದು. ದುಃಸ್ವಪ್ನಗಳು ದೂರಾಗುವವು, ಬುದ್ಧಿಯು ಸೂಕ್ಷ್ಮವಾಗುವುದು ನರಗಳು ಬಲಹೊಂದುವವು. ರಕ್ತವು ಶುದ್ಧವಾಗುವುದು. ಶರೀರವು ಪಾಪರಹಿತವಾಗಿ ಪೂರ್ಣಾಯುಷ್ಯವುಳ್ಳದಾಗುವುದು.

ಎಲ್ಲಾ ಕಾಲಗಳಲ್ಲಿಯೂ ಸ್ನಾನಕ್ಕೆ ಬಿಸಿನೀರಿಗಿಂತ ತಣ್ಣೀರೇ ಮಿಗಿಲಾದುದು. ಅದರಲ್ಲಿಯೂ ಪ್ರಾತಃಕಾಲಸ್ನಾನವು ಅತ್ಯಂತ ಬಲಕಾರಿಯಾದುದರಿಂದ ಅಂಗಾಂಗಗಳಲ್ಲಿ ತಡೆದಿರುವ ರಕ್ತವನ್ನು ವೇಗವಾಗಿ ಹರಿಸಿ ಕಾಂತಿಹೀನಗಳಾದ ಅವಯವಗಳಿಗೆ ಕಾಂತಿಯನ್ನುಂಟುಮಾಡುವದರಲ್ಲಿ ಸುಸಮರ್ಥವಾಗಿದೆ. ಈ ಪ್ರಾತಃಸ್ನಾನದ ವಿಷಯದಲ್ಲಿ ವ್ಯಾಸಮಹರ್ಷಿಗಳು ಸ್ಕಾಂದಪುರಾಣದ ಕಾಶೀಖಂಡದಲ್ಲಿ "ಅಶುಚಿತ್ವಂಚ ದುಃಸ್ವಪ್ನಮಲಕ್ಷ್ಮೀಂಗ್ಲಾನಿಮೇವಚ । ಪ್ರಾತಃಸ್ನಾನಂ ಹರೇತ್ಪಾಪಂ ತುಷ್ಟಿಂ ಪುಷ್ಟಿಂ ಪ್ರಯಚ್ಛತಿ ॥" ಎಂದು ಹೇಳಿರುವರು. ತಣ್ಣೀರಿನ ಸ್ನಾನವು ಉಷ್ಣಪ್ರಕೃತಿಯವರ ಉಷ್ಣತೆಯನ್ನು ಕಳೆದು ಶೀತವನ್ನೂ, ಶೀತಪ್ರಕೃತಿಯವರ ಶೀತವನ್ನು ಕಳೆದು ಉಷ್ಣತೆಯನ್ನೂ ಉಂಟುಮಾಡುವುದು.

ಶುದ್ಧಮಾಡಿದ ಗಂಧಕವನ್ನು ನೀರಿನಲ್ಲಿ ಹಾಕಿ ಸ್ನಾನಮಾಡುವುದರಿಂದ ಪಕ್ಷವಾತ (ಸಂದುಹಿಡಿತ) ಕುರು, ಕಜ್ಜಿ, ನವೆ ಮುಂತಾದ ಚರ್ಮರೋಗಗಳು ನಾಶವಾಗುವವು. ಇದರಂತೆ ಬೇವಿನ ಎಲೆಗಳನ್ನು ಹಾಕಿ ನೀರುಕಾಯಿಸಿ ಆಮೇಲೆ ತಕ್ಕ ಪ್ರಮಾಣದಿಂದ ಉಪ್ಪಿನಪುಡಿಯನ್ನು ಕಲಸಿಯಾಗಲಿ, ಅಥವಾ ಬರಿ ಉಪ್ಪಿನ ಪುಡಿಯನಷ್ಟೇ ಬಿಸಿನೀರಿನಲ್ಲಿ ಕಲಿಸಿಯಾಗಲೀ ಸ್ನಾನಮಾಡಿದರೆ ಎಷ್ಟೋ ಚರ್ಮರೋಗಗಳು (ವಾತರೋಗ, ಆಯಾಸ, ನೋವು ಮುಂತಾದವುಗಳು) ನಾಶವಾಗಿ ಶರೀರದಲ್ಲಿ ಚಟುವಟಿಕೆ ಹೆಚ್ಚುವುದು; ಹಾಗೆಯೇ ಸೋಡಾ, ಕಾರ್ಬೋನೇಟ್‌ಗಳನ್ನು ಬೆರಿಸಿ ಸ್ನಾನಮಾಡುವುದರಿಂದಲೂ ಚರ್ಮರೋಗಗಳು ಗುಣ ಹೊಂದುವವು. ನಿತ್ಯವೂ ಸ್ನಾನಮಾಡದ ಜನರಲ್ಲಿ ಪ್ರಾಯಃ ವಿಶೇಷವಾದ ಆಲಸ್ಯವೂ ಚರ್ಮರೋಗಗಳೂ ಮನೆಮಾಡಿಕೊಂಡಿರುತ್ತವೆ.

ಹೀಗೆ ಬಟ್ಟೆಯಿಂದುಜ್ಜಿಕೊಂಡು ಮಾಡುವ ಸ್ನಾನದಲ್ಲಿ ಸದ್ಯಃ ಇಂಗ್ರೇಜಿಯವರು ಬಳಿಕೆಯಲ್ಲಿಟ್ಟುಕೊಂಡಿರುವ "ಕಿಬ್ಬೊಟ್ಟೆಯ ಸ್ನಾನ"ವೆಂಬುದೂ ಅಡಕವಾಗುವಂತಿದೆ, ಆದರೆ ಈ ಕಿಬ್ಬೊಟ್ಟೆಯ ಸ್ನಾನಕ್ಕೆ ಆರಾಮಖುರ್ಚಿಯಂತಹ ಕಲ್ಲಿನ ಹೌದುಖಾನೆಯಾಗಲೀ, ಅದೇ ಆಕಾರದ ತಗಡಿನ ಬಾನೆಯಾಗಲೀ ಬೇಕಾಗುವುದು; ಇದು ಈಗ ಎಲ್ಲಿ ಬೇಕಾದರೂ ದೊಡ್ಡ ಪಟ್ಟಣಗಳಲ್ಲಿ ಕಿಬ್ಬೊಟ್ಟೆಯ ಸ್ನಾನಕ್ಕೆಂದೇ ತಯಾರಿಸಲ್ಪಟ್ಟು ಮಾರಲಿಕ್ಕೆ ದೊರೆಯುತ್ತದೆ. ಇದಕ್ಕೆ 'ಟಬ್ಬು' ಎಂತಲೂ ಕರೆಯುವುದುಂಟು. ಇದರಲ್ಲಿ ಬರೀ ಬತ್ತಲೆಯಾಗಿ ಕುಳಿತುಕೊಳ್ಳುವು

ದಕ್ಕೆ ಮುಂಚೆಯೇ ಸೋಸಿದ ತಣ್ಣೀರು ತುಂಬಿರಬೇಕು; ಕೂತುಕೊಂಡಾಗ ಆ ನೀರು ಹೊಕ್ಕಳದವರೆಗಿರಬೇಕು. ಬಟ್ಟೆಯಿಂದ ತಿಕ್ಕುವ ಭಾಗವಾದರೂ ಹೊಕ್ಕಳದ ಕೆಳಗಿನ ಕಿರುಹೊಟ್ಟೆ; ಈ ಸ್ನಾನವನ್ನು ಎರಡೂ ಪಕ್ಕೆಗಳ ವರೆಗೂ ವ್ಯಾಪಿಸಿಕೊಂಡು ಎಡದಿಂದ ಬಲಕ್ಕೂ ಬಲದಿಂದ ಎಡಕ್ಕೂ ಮೇಲಿನಿಂದ ಕೆಳಕ್ಕೂ ತಿಕ್ಕಬೇಕು. ಆರಂಭದ ದಿವಸ ೧೦ ನಿಮಿಷ ಮೊದಲ್ಗೊಂಡು ೧೫ ದಿವಸದೊಳಗಾಗಿ ಅರ್ಧ ಘಂಟೆಯವರೆಗೂ ಈ ಸ್ನಾನಕ್ಕೆ ಸಮಯವನ್ನು ನಿಶ್ಚಯಮಾಡಿಕೊಳ್ಳಬೇಕು. ಅರ್ಧ ಘಂಟೆಗೆ ಹೆಚ್ಚಾದ ಸಮಯವನ್ನುಪಯೋಗಿಸಿದರೆ ಶರೀರವು ಅತ್ಯುಷ್ಣವಾಗುವುದು. ಈ ವಿಧಿಯನ್ನು ಆಚರಿಸುವಾಗ ಹೆಚ್ಚಾಗಿ ಕಾರ, ಹುಳಿ, ಮಸಾಲೆಗಳನ್ನುಪಯೋಗಿಸಬಾರದೆಂದೂ ಎಣ್ಣೆ ಮತ್ತು ಕರಿದ ಪದಾರ್ಥಗಳನ್ನು ತಿನ್ನಲೇಬಾರದೆಂದೂ ಉಗಿಯಿಂದಾದ ಭಕ್ಷ್ಯಗಳನ್ನುಪಯೋಗಿಸಬೇಕೆಂತಲೂ, ವಿಶೇಷವಾಗಿ ಕಡಲೆ, ಗೆಣಸು, ಗೆಜ್ಜರಿ ಮುಂತಾದ ಹಸಿಯ ಪದಾರ್ಥಗಳನ್ನು ತಿನ್ನುವುದು ಸರ್ವೋತ್ಕೃಷ್ಟವೆಂತಲೂ ಜಲಚಿಕಿತ್ಸೆಯೆಂಬ ಪುಸ್ತಕದಿಂದ ತಿಳಿಯ ಬರುತ್ತದೆ. ಈ ಪ್ರಕಾರವಾದ ಸ್ನಾನವನ್ನು ಎಲ್ಲರೂ ಮಾಡಲು ಸಾಧ್ಯವಾಗುವುದಿಲ್ಲವಾದುದರಿಂದ ಹಾಗೆಯೇ ಸಾದಾ ಸ್ನಾನವನ್ನು ಮಾಡುವವರೂ ಮೇಲೆ ಹೇಳಿದ ಪ್ರಕಾರ ಕಿಬ್ಬೊಟ್ಟೆಯನ್ನು ತಿಕ್ಕಿ ತೊಳೆದುಕೊಳ್ಳುವುದುತ್ತಮ. ಯಾರೇ ಆಗಲಿ, ಈ ಕಿಬ್ಬೊಟ್ಟೆಯ ಸ್ನಾನದ ಹೊರತಾಗಿ ಉಳಿದ ಯಾವ ಸ್ನಾನಗಳನ್ನೂ ಬರೀ ಬತ್ತಲೆಯಾಗಿ ಮಾಡಬಾರದು.

ನೀರಿನ ಅನುಕೂಲತೆ ಬೇಕಾದಷ್ಟು ಇದ್ದರೂ ಆಲಸ್ಯದಿಂದ ಎಂಟು-ಹತ್ತು ದಿನಕ್ಕೊಮ್ಮೆ ಸ್ನಾನಮಾಡತಕ್ಕವರು ಈ ಭಾರತ ಭೂಮಿಯಲ್ಲಿಯೂ ಅದಕ್ಕಿಂತ ನಮ್ಮ ತಾಯಿನಾಡಿನಲ್ಲಿಯೂ ವಿಶೇಷವಾಗಿದ್ದಾರೆ. ಹೀಗೆ ಮಾಡದ ಮನುಷ್ಯರೆಂದು ಹೇಳಿಸಿಕೊಳ್ಳುವ ಪ್ರತಿಯೊಬ್ಬರೂ ಕಟ್ಟಕಡೆಗೆ ದಿನಕ್ಕೊಮ್ಮೆಯಾದರೂ ಸ್ನಾನವನ್ನು ಅವಶ್ಯವಾಗಿ ಮಾಡಬೇಕು. ನಮ್ಮ ಊರಲ್ಲಿ ಕುಡಿಯಲಿಕ್ಕೇ ನೀರಿಲ್ಲ, ಸ್ನಾನಕ್ಕೆಲ್ಲಿಂದ ತರೋಣವೆಂದು ಕೇಳುವವರಿಗೆ—ನೀರಿಲ್ಲದ ಊರಲ್ಲಿದ್ದುಕೊಂಡು ಮಳೆಯಿಲ್ಲದ ಕಪ್ಪೆಯಂತೆ ಒಟಗುಟ್ಟಿ ಬಾಯ್ ಬಾಯ್ ಬಿಡುವುದಕ್ಕಿಂತಲೂ, ಹೊಳೆ, ಹಳ್ಳ, ಕೆರೆ, ಕಟ್ಟೆಗಳುಳ್ಳ ಊರಲ್ಲಿ ಆನೆಯಂತಿರುವುದು ಮೇಲೆಂಬುದೇ ಕೊನೆಯ ಉತ್ತರ.

ಇನ್ನು ಜ್ವರ ಬಂದಾಗಲೂ, ವಿಶೇಷ ಭೇದಿಹತ್ತಿದಾಗಲೂ, ವಾಯುರೋಗ (ಅಪಸ್ಮಾರ) ಬಂದಾಗಲೂ, ಅಜೀರ್ಣದಿಂದ ಹೊಟ್ಟೆಯುಬ್ಬಿದಾಗಲೂ, ಊಟ ಮಾಡಿದಮೇಲೆ ಮೂರು ಘಂಟೆಯವರೆಗೂ, ದುಡಿದು ಬಹಳ ದಣಿದಾಗಲೂ,

# ಧರ್ಮರಾಜ್ಯ

ಸಂಪುಟ ೧ ❖ ಪ್ರಮಾಥಿನಾಮ ಸಂವತ್ಸರ ಆಷಾಢ ❖ ಸಂಚಿಕೆ ೯

ಕೃತದೊಳಾ ತ್ರೇತೆಯೊಳು ದ್ವಾಪರದೊಳುಂ ಕ್ರಮದೆ ।
ಮತಿವಂತ "ನಲ-ರಾಮ-ಧರ್ಮ" ನೃಪರಿಂ ॥
ಅತಿಯಶವನಾಂತು ಬಾಳಿದ ತೆರದೊಳೀ "ಕೃಷ್ಣ- ।
ಕ್ಷಿತಿಪಾಲನಿಂ" ಬಾಳು "ಧರ್ಮರಾಜ್ಯ" ! ॥

[ವರಕವಿ ಶ್ರೀನಾಗೇಶ]



ಕರ್ನಾಟಕ ಸಿಂಹಾಸನಾಧೀಶ್ವರ ಶ್ರೀಕೃಷ್ಣರಾಜೇಂದ್ರರು

# ವಿಷಯ ಸೂಚಿಕೆ



---



---

# ಧರ್ಮರಾಜ್ಯ

ಮುಂಡೇನೂರ "ವೀರಶೈವ ಧರ್ಮಾಲಯ" ದಿಂದ
ಹೊರಡುವ ಮಾಸಪತ್ರಿಕೆ

ಸಂಪುಟ ೧ ಪ್ರಮಾಥಿನಾಮ ಸಂವತ್ಸರ ಆಷಾಢ ಸಂಚಿಕೆ ೯

## ಅಪು ಮಾದಕವಾದರೂ ಎಷ್ಟು ಉಪಕಾರಿ?

ಲೇಖಕ: ಶ್ರೀಶಿವ



ಕಸಕಸಿಯ ಕಾಯಿಯ ರಸ ಅಥವಾ ಅಂಟಿಗೆ ಅಪು ಎಂಬ ಹೆಸರು. ಕಸಕಸಿಯ ಕಾಯಿಯು ಎಳೆಯದಾಗಿದ್ದಾಗ ಸಂಜೆಯಮುಂದೆ ಆ ಕಾಯಿಗಳ ಮೇಲೆ ಕಬ್ಬಿಣದ ಮೊಳೆಗಳಿಂದ ರೇಖೆಯನ್ನು ಹಾಕುವರು. ಬೆಳಗಾಗುತ್ತಲೇ ಆ ಸ್ಥಳದಲ್ಲಿ ಮಂದವಾದ ರಸವು ಬಂದು ಕೂತಿರುವುದು; ಉಪಾಯದಿಂದ ಆ ರಸವನ್ನು ಬಿಡಿಸಿಕೊಂಡು ಒಂದು ಕಡೆಗೆ ಕೂಡಿಸುವರು. ಹೀಗೆ ಆ ಕಾಯಿಗಳನ್ನು ಎಷ್ಟೋ ಸಾರೆ ಮೊಳೆಗಳಿಂದ ಕೊಯ್ದು ಕೊಯ್ದು ರಸವನ್ನು ಹಿಡಿದುಕೊಳ್ಳುವರು. ರಸವನ್ನು ಒಂದು ಕಡೆಗೆ ಕೂಡಿಸುವದಾದ ಮೇಲೆ ಅದನ್ನು ಅಗಸಿಯ ಎಣ್ಣೆಯಲ್ಲಿ ನೆನೆಹಾಕುವರು. ಆ ಮೇಲೆ ಕೆಲವು ದಿನ ಒಣಗು ಬಿಡುವರು. ಹೀಗೆ ಮಾಡುವುದರಿಂದ ಅಪುವಿನ ತೂಕವು ಹೆಚ್ಚಾಗುವುದು. ಈ ತೂಕವನ್ನು ಹೆಚ್ಚುಮಾಡುವುದಕ್ಕೋಸುಗ ಇತರ ಪ್ರಕಾರದ ಕೃತ್ರಿಮೋಪಾಯಗಳೂ ನಡೆಯುವವು. ನಮ್ಮ ಭಾರತ ದೇಶದಲ್ಲಿ ಪಾಟಣಾ ಮುಂತಾದ ಕಡೆ ಗವ್ಹರ್ನಮೆಂಟಿನ ಪರವಾನಿಗೆಯಿಂದ ಈ ಅಪುವನ್ನು ಬೆಳೆಯುವರು. ಆದರೂ ತುರ್ಕಸ್ಥಾನದಿಂದಲೇ ಅಪುವು ಹೆಚ್ಚಾಗಿ ಬರುವುದು. ಇದೂ ಅಲ್ಲದೆ ತುರ್ಕಸ್ಥಾನದ ಅಪುವನ್ನೇ ಉತ್ತಮವನ್ನಾಗಿ ಹೇಳುವರು.

ಈ ಅಪುವಿನಲ್ಲಿ ಮುಖ್ಯವಾಗಿ ಎರಡು ಪ್ರಕಾರದ ಸತ್ವಗಳಿರುವವು. ಒಂದಕ್ಕೆ ಮಾರ್ಫಿನ್ ಎಂತಲೂ ಎರಡನೇಯದಕ್ಕೆ ನಾರಕೋಟಿನ್ ಎಂತಲೂ ಹೆಸರು. ಮಾರ್ಫಿನ್ ಎಂಬ ಸತ್ವವು ಅಂಗಾಂಗಗಳ ನೋವನ್ನು ನಾಶಮಾಡುವದಾಗಿಯೂ

ನಾರಕೋಟಿನ್ ಸತ್ವವು ಜ್ವರವನ್ನು ತಡೆಯುವದಕ್ಕಾಗಿಯೂ ಇರುವುದು. ನಮ್ಮ ಈ ಭಾರತದೇಶದ ಅಫುವಿನಲ್ಲಿ ನಾರಕೋಟಿನ್ ಸತ್ವವೇ ಹೆಚ್ಚಾಗಿರುವುದು. ತುರ್ಕಸ್ಥಾನದ ಅಫುವಿನಲ್ಲಿ ಮಾರ್ಫಿನ್ ಸತ್ವವೇ ಹೆಚ್ಚಾಗಿರುವುದು. ಈ ಅಫುವನ್ನು ಔಷಧಿಯಲ್ಲಿ ಉಪಯೋಗಮಾಡುವದಲ್ಲದೆ ಹಲಕೆಲವರು ಒಂದು ಚಟಕ್ಕೋಸುಗವಾಗಿಯೂ ತಿನ್ನುತ್ತಿರುವರು. ಚೀನಾದೇಶದವರು ಈ ಅಫುವನ್ನು ಚಿಲಮಿಯಲ್ಲಿಟ್ಟುಕೊಂಡು ತಂಬಾಕದಂತೆ ಸೇದುವರು.

ಆಯುರ್ವೇದ ಶಾಸ್ತ್ರವು ಈ ಅಫುವಿನಲ್ಲಿ ನಾಲ್ಕು ಜಾತಿಗಳನ್ನು ಹೇಳಿದ್ದುಂಟು.

ಜಾರಣೋ ಮಾರಣಶ್ಚೈವ ಧಾರಣ ಸ್ತಾರಣ ಸ್ತಥಾ ।
ಅಹಿಫೇನಶ್ಚತುರ್ಥೋಕ್ತೋ ಗುಣಾಸ್ತಸ್ಯ ಬ್ರವೀಮಿತೇ ॥
ಶ್ವೇತ ವರ್ಣೋ ಜಾರಣಃ ಸ್ಯಾತ್ ಭುಕ್ತಮನ್ನಂಚ ಜಾರಯೇತ್ ।
ಮೃತಿಪ್ರದಃ ಕೃಷ್ಣವರ್ಣೋ ಮಾರಣಸ್ತು ಪ್ರಕೀರ್ತಿತಃ ॥
ಜರಾನಾಶಕರಃ ಪೀತೋಧಾರಣಃ ಸಂಪ್ರಕೀರ್ತಿತಃ ।
ಚಿತ್ರ ವರ್ಣಃ ಸಾರಣಃ ಸ್ಯಾತ್ ಮಲಸಾರಣ ಕಾರ್ಯತಃ ॥

ಅಫುವು ಬಿಳಿಯ ಬಣ್ಣದ್ದಾಗಿದ್ದರೆ ಇದಕ್ಕೆ ಜಾರಣವೆಂದು ಹೇಳುವರು. ಇದರಲ್ಲಿ ಅನ್ನವನ್ನು ಪಚನ ಮಾಡುವ ಶಕ್ತಿಯು ಅಧಿಕವಾಗಿರುವುದು. ಕಪ್ಪು ಬಣ್ಣದ್ದಾಗಿದ್ದರೆ ಆ ಅಫುವಿಗೆ ಮಾರಣವೆಂದು ಕರೆಯುವರು. ಇದು ಪ್ರಾಣವನ್ನೇ ತೆಗೆಯುವದು. ಅಥವಾ ಲೋಹಾದಿ ಧಾತುಗಳ ಮಾರಣ ಕಾರ್ಯಕ್ಕೂ ಉಪಯೋಗಿಸಲ್ಪಡುವದು. ಹಳದಿಯ ಬಣ್ಣದ್ದಾಗಿದ್ದರೆ, ಆ ಅಫುವಿಗೆ ಧಾರಣವೆಂದು ಹೇಳುವರು. ಇದರಲ್ಲಿ ಮುಪ್ಪನ್ನು ಕಳೆಯುವ ವಿಶೇಷ ಗುಣವಿದೆ. ಚಿತ್ರ ಬಣ್ಣದ್ದಾಗಿದ್ದರೆ ಆ ಅಫುವಿಗೆ ಸಾರಣವೆಂದು ಹೇಳುವರು. ಇದು ಭೇದಿಯನ್ನುಂಟು ಮಾಡುವುದು.

ಈವಾಗ ಪೇಟೆಯಲ್ಲಿ ಕಪ್ಪು ಬಣ್ಣದ ಅಫುವೇ ಹೆಚ್ಚಾಗಿ ಸಿಗುವುದು. ಕಸಕಸಿಯ ಕಾಯಿಗಳಿಂದ ತಯಾರಾಗುವ ಅಫುವಿನಲ್ಲಿ ಭೇದಿಯನ್ನುಂಟುಮಾಡುವ ಗುಣವು ಇರುವದೇ ಇಲ್ಲ. ಏಕೆಂದರೆ ಕಸಕಸಿಯು ಸ್ವಾಭಾವಿಕವಾಗಿಯೇ ಮಲಬದ್ಧಕವಾದುದು. ಈ ಕಾರಣದಿಂದ ನಾವು ವಿಚಾರಮಾಡುತ್ತಿರಲು ಪೂರ್ವಕಾಲದಲ್ಲಿ ಬೇರೆ ಗಿಡಗಳಿಂದ ಅಫುವನ್ನು ತೆಗೆಯುತ್ತಿರಲೂ ಬಹುದೆಂದು ಕಂಡುಬರುವುದು. ಕಸಕಸಿಯ ಕಾಯಿಯಿಂದ ಅಫುವು ಉಂಟಾಗುತ್ತಿದ್ದರೂ ಅದರಿಂದ ಪೂರ್ವೋಕ್ತವಾದ ಎಲ್ಲಾ ಗುಣಗಳೂ ಉಂಟಾಗಬಹುದೆಂಬ ಸಂಭವವು ಇರದೇ ಇದ್ದರೂ ನೋಡುವದಕ್ಕೆ ಅಫುವಿನಂತೆ ಕಂಡುಬರುವುದರಿಂದಲೂ ಏನಾದರೂ ಇದ

ಕ್ಕೆ ಆ ಹೆಸರು ಬಂದಿರಬಹುದೋ ಹೇಗೋ ತಿಳಿಯದಾಗಿದೆ. ಮೇಲೆ ವರ್ಣಿಸಿದ ಗುಣವುಳ್ಳ ಅಫುವು ಪೂರ್ವಕಾಲದಲ್ಲಿ ತಯಾರಾಗುತ್ತಿರಬಹುದು. ಇಷ್ಟನ್ನು ಮಾತ್ರ ನಾವು ಹೇಳಬಹುದು. ಏಕೆಂದರೆ ಆಯುರ್ವೇದ ಗ್ರಂಥಗಳಲ್ಲಿ ಅಫುವಿನ ನಾಲ್ಕು ಭೇದ ಹಾಗೂ ಗುಣ ಈ ವಿಷಯಗಳು ಮಾತ್ರ ಬಂದಿವೆಯೇ ಹೊರತು ಆ ನಾಲ್ಕೂ ಬಗೆಯ ಅಫುವನ್ನು ತಯಾರ ಮಾಡುವ ವಿಧಿಯು ಎಲ್ಲಿಯೂ ವರ್ಣಿಸಲ್ಪಟ್ಟಂತೆ ಕಾಣಲಿಲ್ಲ.

## "ಅಫುವಿನ ಗುಣಧರ್ಮಗಳು"

ಅಫುವು ನಿದ್ರೆಯನ್ನು ತರುವುದು, ಕರುಳನ್ನು ಸಂಕೋಚಗೊಳಿಸುವುದು, ನೋವನ್ನು ಕಳೆಯುವುದು, ಕಫವನ್ನು ಕರಗಿಸುವದು, ರಕ್ತವನ್ನು ಗಟ್ಟಿಮಾಡುವುದು, ಬೆವರನ್ನು ತರುವುದು, ಬಾವನ್ನು ಕಳೆಯುವುದು, ಭೇದೆಯನ್ನು ಬಂದು ಮಾಡುವುದು, ಬಲವನ್ನು ಕೊಡುವುದು, ಉತ್ತೇಜನವನ್ನುಂಟು ಮಾಡುವುದು, ಶರೀರವನ್ನು ಒಣಗಿಸುವುದು, ಸ್ತಂಭನವನ್ನುಂಟುಮಾಡುವುದು, ಮಾದಕವಾಗಿರುವುದು, ಮುಖದಿಂದ ಹಿಡಿದು ಮಲದ್ವಾರದ ವರೆಗೂ ಎಲ್ಲಾ ಪಾಚಕಾವಯವಗಳ ಮೇಲೂ ಇದರ ಪ್ರಭಾವವು ಬೀಳುವುದು, ಇದರ ಪ್ರಭಾವದಿಂದ ಉಗುಳುವುದು ಕಡಿಮೆಯಾಗಿ ಹಸಿವು ನಿರ್ಮೂಲವಾಗಿ ಮಲವು ಒಣಗುವುದು.

ಸ್ವಲ್ಪ ಮಾತ್ರ ಅಫುವನ್ನು ತಿನ್ನುವುದರಿಂದ ಮನಸ್ಸು ಒಳ್ಳೆ ಆನಂದಕರವಾಗಿ ಉತ್ಸಾಹವು ಹೆಚ್ಚಾಗುವುದು. ಕಾಮ ಶಕ್ತಿಯು ಬೆಳೆದು ನಿದ್ರೆಯು ಅಧಿಕವಾಗಿ ಬರುವುದು. ಇದಲ್ಲದೆ ವಿಚಾರ ಶಕ್ತಿಯು ಬೆಳೆಯುವುದು. ಆದರೆ ಹೇಗೆ ಹೇಗೆ ಇದರ ಮದವು ಇಳಿಯುತ್ತಬರುವುದೋ ಹಾಗೆ ಹಾಗೆ ಅಂಗಾಂಗವೆಲ್ಲವೂ ನಿಶ್ಚೇತನವಾಗಹತ್ತುವುದು, ತಲೆ ಒಜ್ಜೆಯಾಗುವುದು; ಕೂತು ಮೇಲಕ್ಕೆದ್ದೊಡನೆಯೇ ಮೈಯೆಲ್ಲ ತಿರುಗುವುದು, ಹಸಿವೆ ಕಡಿಮೆಯಾಗುವುದು, ಮಲಾವರೋಧವಂತೂ ಪ್ರತ್ಯಕ್ಷವಾಗಿ ಕಾಣುವುದು.

ಒಂದು ವೇಳೆ ಈ ಅಫುವನ್ನು ಹೆಚ್ಚಾಗಿ ತಿನ್ನುವುದಾದರೆ ಸ್ವಲ್ಪ ಹೊತ್ತಿನ ವರೆಗೆ ಮನವು ಅತ್ಯಂತ ಪ್ರಫುಲ್ಲಿತವಾಗಿರುವುದು. ಆದರೆ ಸ್ವಲ್ಪ ಹೊತ್ತಿನಲ್ಲಿಯೇ ಅದರ ನಿಶೆಯು ಇಳಿಯಿತೆಂದರೆ ಜ್ಞಾನ ಶಕ್ತಿಯು ನಷ್ಟವಾಗಿ ಹೋಗುವುದಲ್ಲದೆ ಕೂಡ್ರುವುದಕ್ಕೂ ಕೂಡ ಚೈತನ್ಯವಿಲ್ಲದಂತಾಗಿ ಮನುಷ್ಯನನ್ನು ಭೂಮಿಗೆ ಕೆಡವಿಬಿಡುವುದು. ಒಂದು ವೇಳೆ ಮಿತಿತಪ್ಪಿ ಅಫುವನ್ನು ತಿನ್ನುವುದಾದರೆ ಮನುಷ್ಯನು ಶೀಘ್ರವಾಗಿ ಸ್ಮೃತಿತಪ್ಪಿ ಬಿದ್ದು ಬಿಡುವನು, ಆಗ ಅವನನ್ನು ಎಷ್ಟೋ ಜೋರಾಗಿ

ಕರೆಯಿರಿ, ಅಥವಾ ಗಟ್ಟಿಯಾಗಿ ಉರುಳಾಡಿಸಿರಿ, ಮಾತನಾಡುವದೇ ಇಲ್ಲ. ಆತನ ಕಣ್ಣೊಳಗಿನ ಬೊಂಬೆಗಳು ಅತ್ತಿತ್ತ ವಿಕಾರಹೊಂದಿ ತಿರುಗುವವು. ಆ ಸಮಯ ದಲ್ಲಿ ಆತನ ಕಣ್ಣುಗಳಿಗೆ ಎಷ್ಟೋ ಪ್ರಕಾಶಮಯವಾದ ದೀವಿಗೆಯನ್ನೇ ತೋರಿಸಿರಿ, ಆತನ ಕಣ್ಣುಗಳು ಎಷ್ಟೂ ಚುಚ್ಚುವದಿಲ್ಲ. ತೊಗಲಿಗೆ ಸೂಚಿಯನ್ನು ಚುಚ್ಚಿರಿ ಜ್ಞಾನವಿರುವದಿಲ್ಲ. ಸುಖವಾವುದು, ದುಃಖವಾವುದು ಗೊತ್ತಾಗುವದಿಲ್ಲ. ಇಂತಾಗಿ ಈ ಅಫುವು ಶರೀರದ ಸಮಸ್ತ ಧಾತುವನ್ನೂ ಒಣಗಿಸಿ ಬಿಡುವುದು. ಆದರೆ ಮೂತ್ರ, ಬೆವರು, ಮೊಲೆಯೊಳಗಿನ ಹಾಲು ಇವುಗಳನ್ನು ಮಾತ್ರ ಒಣಗಿ ಸುವದಿಲ್ಲ. ದೊಡ್ಡವರಿಗಿಂತಲೂ ಸಣ್ಣ ಮಕ್ಕಳಮೇಲೆ ಇದು ತನ್ನ ದುಷ್ಪರಿಣಾಮ ವನ್ನು ಶೀಘ್ರವಾಗಿ ಮಾಡುವುದು. ಆದರೆ ನಮ್ಮ ಭಾರತೀಯರಾದ ತಾಯಿಂದಿರು ತಮ್ಮ ಮಕ್ಕಳು ಸುಖವಾಗಿ ನಿದ್ರೆ ಮಾಡಲೆಂಬ ಅಭಿಲಾಷೆಯಿಂದ ಈ ಅಫುವನ್ನೇ ಉಪಯೋಗಿಸುತ್ತಿರುವುದು ಬಹಳ ಖೇದಕರವಾದ ಸಂಗತಿಯು.

## " ಅಫುವಿನ ಉಪಯೋಗ "

" ಅತಿಸಾರಕ್ಕೆ "— ಅತಿಸಾರವೆಂದರೆ ಸಾಮಾನ್ಯವಾಗಿ ಹೆಚ್ಚು ಭೇದಿಯಾ ಗುತ್ತಿರುವುದು. ಈ ವಿಧವಾಗಿ ಹೆಚ್ಚು ಭೇದಿಯಾಗುವ ಯಾವ ಅತಿಸಾರಕ್ಕಾ ಗಲಿ ಈ ಅಫುವು ಉಪಯುಕ್ತವಾಗುವುದು. ರಕ್ತಾತಿಸಾರ, ಸಂಗ್ರಹಿಣಿ, ಕಾಲರಾ ಇವುಗಳಲ್ಲಿ ಪ್ರಾಯಶಃ ಎಲ್ಲಾ ವೈದ್ಯರೂ ಎಲ್ಲಾ ಡಾಕ್ಟರರೂ ಹಕೀಮರೂ ಈ ಅಫು ವನ್ನು ಉಪಯೋಗಿಸುತ್ತಾರೆ. ಬಹಳ ಮಟ್ಟಿಗೆ ಈ ಅಫುವನ್ನು ದೀಪನ ಹಾಗೂ ಪಾಚನ ಔಷಧಿಗಳೊಡನೆ ಕೂಡಿಸಿ ಕೊಡುವುದೇ ಹೆಚ್ಚು. ಅತಿಸಾರದಲ್ಲಿ ಅಫುವು ಉಪಯೋಗಿಸಲಿಕ್ಕೆ ಯೋಗ್ಯವಾದರೂ ಆಮಶಂಕೆಯಲ್ಲಿ ಅಷ್ಟೊಂದು ಲಾಭದಾಯಕ ವಾಗುವುದಿಲ್ಲ.

ಅಫುವು ಮತ್ತು ಕೇಸರಿ ಇವೆರಡನ್ನು ಸಮಾನವಾಗಿ ತೆಗೆದುಕೊಂಡು ಸಣ್ಣಾಗಿ ಅರೆದು ಜೇನುತುಪ್ಪದಲ್ಲಿ ಸೇರಿಸಿ ಸಜ್ಜೆಯ ಕಾಳಿನಷ್ಟು ಗುಳಿಗೆಗಳನ್ನು ಕಟ್ಟಿ ಅದ ರಲ್ಲಿ ಒಂದು ಗುಳಿಗೆಯನ್ನು ನೀರಿನೊಡನೆ ಸೇವಿಸುವುದರಿಂದ ಎಂಥಹ ಅತಿಸಾರ ಇದ್ದರೂ ಬೇಗನೆ ಬಂದಾಗುವುದು. ದಿನಕ್ಕೆ ಮೂರು ಗುಳಿಗೆ ಸೇವಿಸಬೇಕು.

ಒಂದು ಉತ್ತುತ್ತಿಯನ್ನು ಅದರ ಬಾಯಿಯ ಕಡೆಗೆ ಸ್ವಲ್ಪ ಕೊರೆದು ಒಳ ಗಿನ ಬೀಜವನ್ನು ತೆಗೆದು ಅದರೊಳಗೆ ಅಫುವನ್ನು ತುಂಬಿ ಕೊಯ್ದ ತುಂಡಿನಿಂದ ಅದರ ಬಾಯಿಯನ್ನು ಬಂದು ಮಾಡಿ ಮೇಲೆ ಕೆಮ್ಮಣ್ಣು ಬಟ್ಟೆಯನ್ನು ಸುತ್ತ ಬೇಕು. ಆ ಮೇಲೆ ಅದನ್ನು ಮಂದಾಗ್ನಿಯಲ್ಲಿ ಇಟ್ಟು ಬೇಯಿಸಬೇಕು. ಅದು

ಚನ್ನಾಗಿ ಉಬ್ಬಿಕೊಂಡ ಮೇಲೆ ಕಡೆಗೆ ತೆಗೆದು ಮೇಲಿನ ಬೂದಿಯನ್ನು ಬಿಡಿಸಿ ಅಪುವಿನಿಂದ ಕೂಡಿದ ಆ ಉತ್ಪತ್ತಿಯನ್ನು ಕಲ್ಲಮೇಲೆ ಸಣ್ಣಾಗಿ ಅರೆದು ಕಡಲೆಯ ಕಾಳುಗಾತ್ರ ಗುಳಿಗೆಗಳನ್ನು ಕಟ್ಟಬೇಕು. ಇವುಗಳಲ್ಲಿ ಬೆಳಗ್ಗೆ ಒಂದು ಗುಳಿಗೆ, ರಾತ್ರಿ ಒಂದು ಗುಳಿಗೆಯನ್ನು ತಣ್ಣೀರಿನೊಡನೆ ಕೊಡಬೇಕು. ಇದರಿಂದ ಎಂತಹ ಭಯಂಕರವಾದ ಅತಿಸಾರವಿದ್ದರೂ ಗುಣವಾಗುವುದು.

"ಉದರ ಶೂಲಕ್ಕೆ"— ಅತ್ಯಧಿಕವಾದ ಹೊಟ್ಟೆಯೊಳಗಿನ ಮುರಿತಕ್ಕೂ ಈ ಅಪುವು ಬಹಳ ಲಾಭಕರವಾದದ್ದು. ಆ ಸಮಯದಲ್ಲಿ ಸ್ವಲ್ಪ ಅಪುವನ್ನು ಸೇವನೆಮಾಡುವುದರಿಂದ ನೋವು ಎಷ್ಟೋ ಮಟ್ಟಿಗೆ ಕಡಿಮೆಯಾಗುವುದು.

"ನೋವಿಗೆ"— ಸೊಂಟ, ಕತ್ತು, ಮಸ್ತಕ ಇವೇ ಮುಂತಾದ ಸ್ಥಳಗಳಲ್ಲಿ ನೋವಾಗಿದ್ದರೆ, ಅಥವಾ ಅರದೆಲೆಯ ನೋವಾಗಿದ್ದರೆ ಈ ಅಪುವನ್ನು ಹೊಟ್ಟೆಯೊಳಗೂ ಹಾಗೂ ನೋವಿದ್ದ ಕಡೆಗೂ ಉಪಯೋಗಿಸುವುದರಿಂದ ಖಂಡಿತವಾಗಿ ಗುಣ ಬರುವುದು.

"ಹುಚ್ಚಿಗೆ"— ಹುಚ್ಚಿನ ರೋಗಕ್ಕೆ ಈ ಅಪುವು ಅತ್ಯಂತ ಶ್ರೇಷ್ಠವಾದ ಔಷಧಿಯು. ಈ ರೋಗವು ಆರಂಭವಾಗುತ್ತಲೇ ಅವರವರ ವಯಸ್ಸಿನ ಪ್ರಮಾಣಕ್ಕನುಸರಿಸಿ ಈ ಅಪುವನ್ನು ಕೊಡುತ್ತಬಂದರೆ ಹುಚ್ಚು ಹೆಚ್ಚಾಗದೆ ಹಾಗೆಯೇ ನಿಂತುಹೋಗುವುದಲ್ಲದೆ ಕೆಲವು ದಿನಗಳ ಸೇವನೆಯಲ್ಲಿ ಪೂರ್ಣವಾಗಿಯೂ ಗುಣವಾಗುವುದು. ಈ ಹುಚ್ಚಿನ ರೋಗದಲ್ಲಿ ಅಪುವನ್ನು ಸ್ವಲ್ಪ ಹೆಚ್ಚುಕಡಿಮೆ ಕೊಟ್ಟರೂ ಅಪಾಯವೇನೂ ಇಲ್ಲ. ಒಳ್ಳೆಯ ತಾರುಣ್ಯಾವಸ್ಥೆಯಲ್ಲಿ ಉಂಟಾದ ಹುಚ್ಚಿಗೆ ಪ್ರತಿದಿನ ಒಂದೊಂದು ಗುಂಜಿಯ ತೂಕ ಅಪುವನ್ನು ಕೊಟ್ಟರೂ ತಪ್ಪಾಗುವದಿಲ್ಲ. ಹುಚ್ಚಿನಲ್ಲಿ ಹೀಗೆ ಅಪುವಿನ ಪ್ರಯೋಗವು ಅವರ ಚೀರಾಟವನ್ನು ಕಳೆದು ಸುಖವಾದ ನಿದ್ರೆಯನ್ನುಂಟುಮಾಡುವುದಾದ ಕಾರಣ ಹುಚ್ಚರಿಗೆ ಇದೊಂದು ವಿಶೇಷವಾದ ಲಾಭವೇ ಸರಿ. ಒಂದು ವೇಳೆ ಹುಚ್ಚು ಹಿಡಿದವನ ಮುಖವು ಬಾಡಿಕೊಂಡಂತಿರಲಿ, ನಾಡಿಗಳು ಮಂದವಾಗಿರಲಿ, ಅಥವಾ ನಿದ್ರೆಯಿಲ್ಲದ ಮೂಲಕ ಶರೀರವೆಲ್ಲ ಕ್ಷೀಣವಾಗಿರಲಿ ಹಾಗಾದರೂ ಅಪುವನ್ನು ಕೊಡುವುದೇ ಒಳ್ಳೆಯದು. ಒಂದು ವೇಳೆ ಈ ಹುಚ್ಚಿನಲ್ಲಿ ಮನುಷ್ಯನ ಮುಖವು ಕೆಂಪಾಗಿದ್ದು ಮುಖ ಹಾಗೂ ಹುಬ್ಬುಗಳ ನರಗಳು ಉಬ್ಬಿಕೊಂಡಂತೆ ಕಂಡರೆ ಆ ಸಮಯದಲ್ಲಿ ಅಪುವನ್ನು ಕೊಡುವುದು ಒಳ್ಳೆಯದಲ್ಲ.

"ಪೆಟ್ಟುಹತ್ತಿದ್ದಕ್ಕೆ"— ಯಾವ ಅವಯವಕ್ಕಾದರೂ ಪೆಟ್ಟುಹತ್ತಿ ನೋವಾಗಿದ್ದರೆ ಆ ಸ್ಥಳದಲ್ಲಿ ನೀರಿನಲ್ಲಿ ತೇದ ಅಪುವನ್ನು ಲೇಪಿಸಬೇಕು, ಹಾಗೂ ಸ್ವಲ್ಪ ಬೆಂಕಿಯಿಂದ ಕಾಯಿಸಬೇಕು, ಇದರಿಂದ ನೋವು ಕಡಿಮೆಯಾಗುವುದು

“ನಿದ್ರೆಬಾರದಿದ್ದರೆ”— ಕೆಲವರಿಗೆ ಅನಿದ್ರಾ ರೋಗವು ಬಾಧಿಸುವುದು. ಈ ಸಮಯದಲ್ಲಿ ಈ ಅಫುವನ್ನು ವಯೋಮಾನಕ್ಕನುಸರಿಸಿ ಸೇವಿಸುವುದು ಸರ್ವೋತ್ತಮವಾದುದು. ಆದರೆ ರೋಗಿಗೆ ಜ್ವರವು ಮಾತ್ರ ಬಂದಿರಬಾರದು; ಜ್ವರದಲ್ಲಿ ಈ ಅಫುವನ್ನು ಕೊಡಬಾರದು.

“ಕೆಮ್ಮಿಗೆ”— ಸಂಜೆಯ ವೇಳೆಯಲ್ಲಿ ಸ್ವಲ್ಪ ಸ್ವಲ್ಪ ಹೊತ್ತು ತಡೆದು ಕೆಮ್ಮುಬರುವುದೂ ಒಂದು ವಿಧವಾದ ರೋಗ. ಇಂಥ ಕೆಮ್ಮು ಹೆಚ್ಚಾದಾಗ ಒಂದು ಸಾಸವೆ ಕಾಳಷ್ಟು ಅಫುವನ್ನು ತೆಗೆದುಕೊಂಡು ಸೂಜಿಗೆ ಚುಚ್ಚಿ ಒಳ್ಳೆಣ್ಣೆಯ ದೀಪದ ಕುಡಿಯಲ್ಲಿ ಅದನ್ನು ಬೆಚ್ಚಗೆ ಮಾಡಿ ಸೇವಿಸಿ ಸ್ವಲ್ಪ ಬಿಸಿನೀರು ಕುಡಿಯಬೇಕು.

ಹೀಗೆ ಅಫುವು ಇನ್ನೂ ಅನೇಕಾನೇಕ ರೋಗಗಳನ್ನು ಗುಣಮಾಡುವುದರಲ್ಲಿ ಸಮರ್ಥವಾಗಿರುವುದು. ಆದ್ದರಿಂದ ನಾವು ಅಫುವು ಕೇವಲ ಮಾದಕ ಪದಾರ್ಥವೆಂದು ದೂರ ತಳ್ಳುವುದು ಉಚಿತವಲ್ಲ. ಗುಣಕ್ಕೆ ಪಕ್ಷಪಾತವೆಲ್ಲಿದೆ? ಅಸ್ತು!

---

## ಪುರುಷತ್ವವು ಹೇಗೆ ಕ್ಷೀಣವಾಗುವುದು?

ಲೇ. (ಶ್ರೀಶಿವ)

(೩ನೆಯ ಸಂಚಿಕೆಯಿಂದ ಮುಂದೆ ಸಾಗಿದೆ)

ಪುರುಷತ್ವವನ್ನು ಹಾಳುಮಾಡಲು ಇತರ ಕಾರಣಗಳಿರಬಹುದಾದರೂ ಈ ವಿಷಯದಲ್ಲಿ ಮಾಮೂಲಿ ವೈದ್ಯರೇನೂ ಕಡಿಮೆಯಲ್ಲ. ತರುಣರು ಇಂಥವರ ಬಲೆಗೆ ಬೀಳುವುದೇ ಬಹಳ. ಯಾವನಾದರೂ ಇವರನ್ನು ಸ್ವಲ್ಪ ಮಾತನಾಡಿಸಿದರೆ ಸಾಕು. ತಮ್ಮ ಎಲ್ಲಾ ಪುರಾಣವನ್ನೂ ಓದಿಬಿಡುವರು. ಉದ್ದ ಉದ್ದವಾದ ಪ್ರಶಂಸೆಗಳನ್ನು ಹೇಳುತ್ತ ನಮ್ಮಿಂದ ಇಂಥವರು ಔಷಧಿಯನ್ನು ತೆಗೆದುಕೊಂಡರು; ಇಂಥವರು ಸಾಯಲಿಕ್ಕೆ ಹತ್ತಿದ್ದರು, ಆ ಊರ ದೇಸಾಯಿ, ಗೌಡರು, ರಾಜರ ವರೆಗೂ ನಮ್ಮನ್ನು ಕರೆಯಿಸಿ ಗುಣಹೊಂದಿದರು ಮುಂತಾಗಿ ಹೇಳಿಕೊಳ್ಳುತ್ತ ಹಳ್ಳಿಯಿಂದ ಹಳ್ಳಿಗೆ ಪೇಟೆಯಿಂದ ಪೇಟೆಗೆ ತಿರುಗಹತ್ತುವರು. ಇವರಲ್ಲಿ ಕ್ರಮವಾದ ಗುರುಪರಂಪರೆಯಿಂದ ಬಂದ ವಿದ್ಯೆಯಾಗಲಿ ಅಥವಾ ಯೋಗ್ಯತೆಯಾಗಲಿ, ಯಾವದೂ ಇಲ್ಲದೇ ಇರುವುದರಿಂದ ರೋಗಿಗಳು ಗುಣಹೊಂದುವದಕ್ಕೆ

ಬದಲು ಸುಲಭವಾಗಿ ಸತ್ತುಹೋಗುವರು. ಇಷ್ಟಲ್ಲದೆ, ಇಂತಹ ಮಾಮೂಲಿ ವೈದ್ಯರಿಂದ ರೋಗಿಗೆ ಒಂದು ವ್ಯಾಧಿಗೆ ಬದಲಾಗಿ ಅನೇಕ ವ್ಯಾಧಿಗಳು ಅಂಟಿಕೊಳ್ಳುವವು. ಆದುದರಿಂದ ತರುಣರೇ! ಸುಮ್ಮ ಸುಮ್ಮನೇ ವರ್ತಮಾನ ಪತ್ರಿಕೆಗಳಲ್ಲಿ ಮಾಮೂಲಿ ವೈದ್ಯರ ಉದ್ದವಾದ ಜಾಹೀರಾತುಗಳನ್ನು ನೋಡಿ ಭ್ರಮಿಸಿ ಪುರುಷತ್ವವನ್ನು ಕಳೆದುಕೊಳ್ಳಬೇಡಿರಿ. ವೈದ್ಯನು ಯೋಗ್ಯತಾವಂತನಾಗಿದ್ದ ಪಕ್ಷದಲ್ಲಿ ಅವನ ಸಮಗ್ರ ವಿಚಾರಗಳನ್ನು ತಿಳಿದು ಪ್ರಾಣಾಪಾಯ ಬರದಿದ್ದರೆ ಮಾತ್ರ ಔಷಧಿಯನ್ನು ಸೇವಿಸಿರಿ.

ತರುಣರೇ! ಪುರುಷತ್ವವನ್ನು ನಾಶಮಾಡುವ ವಸ್ತುಗಳು ಇನ್ನೂ ಅನೇಕವಾಗಿವೆ. ಅವುಗಳಲ್ಲಿ ವಾಜೀಕರಣ (Retentive) ಪ್ರಯೋಗವೂ ಒಂದಾಗಿದೆ. ವಾಜೀಕರಣವೆಂದರೆ ಮನುಷ್ಯನನ್ನು ಹೆಚ್ಚು ಉತ್ತೇಜನಗೊಳಿಸುವ ಒಂದು ಔಷಧಿಯು. ಇಂತಹ ಅಸ್ವಾಭಾವಿಕವಾದ ವಾಜೀಕರಣದಿಂದ ತಮ್ಮ ಪುರುಷತ್ವವನ್ನು ದುರುಪಯೋಗ ಪಡಿಸಿಕೊಳ್ಳುವ ಅಭ್ಯಾಸವು ಅಂತ್ಯಂತ ನಿಂದನೀಯವಾಗಿದೆ. ಇಂತಹ ದುಷ್ಕ್ರಿಯೆಯಿಂದ ಪುರುಷತ್ವವು ಕ್ಷೀಣವಾಗುವುದು ಸ್ವಾಭಾವಿಕವಾದರೂ ಅದರೊಡನೆಯೂ ಉಂಟಾಗುವ ದೌರ್ಬಲ್ಯವು ಅತ್ಯಧಿಕವಾಗುವುದು. ಇದೇ ಪ್ರಕಾರವಾಗಿ ಅಫು, ಸರಾಯಿ, ಹೆಂಡ, ಭಾಂಗು, ಮುಂತಾದ ವಸ್ತುಗಳೂ ಅದೇ ಪ್ರಕಾರ ಬೀಡಿ, ಸಿಗರೇಟು, ತಂಬಾಕು, ಚಹ ಮುಂತಾದವುಗಳೂ ಈ ಪುರುಷತ್ವವನ್ನು ನಾಶಮಾಡುವುದರಲ್ಲಿ ಕೈಕಟ್ಟಿಕೊಂಡು ನಿಂತಿವೆ. ಆದ್ದರಿಂದ ಪೂರ್ಣವಾಗಿ ಎಚ್ಚರಗೊಳ್ಳಿರಿ. ಇದೂ ಅಲ್ಲದೇ ಹೆಚ್ಚಾಗಿ ಉಪ್ಪು ತಿನ್ನುವುದೂ, ಹೆಚ್ಚಾಗಿ ಕಾರತಿನ್ನುವುದೂ, ಅದೇ ಪ್ರಕಾರ ಸಿಹಿಯನ್ನು ತಿನ್ನುವುದೂ, ಇವೆಲ್ಲವೂ ಶೀಘ್ರವಾಗಿ ತಾರುಣ್ಯವನ್ನು ಹಾಳುಮಾಡತಕ್ಕವುಗಳೇ. ಆದರೆ ಮಿತಭೋಗದಿಂದ ಹಾನಿಯಿಲ್ಲ. ಈ ಮೇಲ್ಕಂಡ ಪದಾರ್ಥಗಳಂತೆ ಯಾವ ಬಗೆಯಾದ ಚಟ್ನಿಯಾಗಲಿ, ಉಪ್ಪಿನಕಾಯಿಯಾಗಲಿ, ಮಸಾಲಿ ಪುಡಿಯಾಗಲಿ ಈವೆಲ್ಲವೂ ಹೆಚ್ಚು ಸೇವನೆಮಾಡುವದರಿಂದ ವೀರ್ಯಕೋಶದ ಶಕ್ತಿಯನ್ನು ಹರಣಮಾಡಿ ಪುರುಷನ ನಿಜವಾದ ಸಾಮರ್ಥ್ಯವನ್ನೂ ಕಾಂತಿಯನ್ನೂ ಕಳೆಯುವದರಲ್ಲಿ ಮಿಗಿಲಾದವುಗಳು. ಇದೂ ಅಲ್ಲದೆ ದಿನದಲ್ಲಿ ಎಷ್ಟೋ ಸಾರೆ ಸಿಕ್ಕ ಸಿಕ್ಕ ಪದಾರ್ಥವನ್ನು ಬಾಯಾಡುತ್ತಲೇ ಇರುವುದೂ ಹಾನಿಕರವೇ. ಇದರಿಂದ ಜೀರ್ಣಕೋಶದಲ್ಲಿ ಸ್ವಾಭಾವಿಕವಾಗಿ ಅಗ್ನಿಮಾಂದ್ಯವು ತಲೆದೋರುವುದು. ಈ ಅಂಗ್ನಿಮಾಂದ್ಯದಿಂದಲೇ ಮಲಬದ್ಧತೆಯುಂಟಾಗುವುದು. ಈ ಮಲಬದ್ಧತೆಯಿಂದ ರಕ್ತವೂ, ಆ ರಕ್ತದಿಂದ ವೀರ್ಯವೂ ಕೆಟ್ಟುಹೋಗುವವಾದ ಕಾರಣ ಇನ್ನು ಪುರುಷತ್ವವೆಲ್ಲಿಂದ ಸ್ಥಿರವಾಗಿ ನಿಲ್ಲಬೇಕು.

ತಂಬಾಕದಲ್ಲಿ ಸ್ವಾಭಾವಿಕವಾಗಿ "ನಿಕೋಟಿನ್" ಎಂಬ ವಿಷವು ಇದ್ದೇ ಇರುವುದು. ಈ ವಿಷವು ಹೃದಯ (ಎದೆ) ಮಸ್ತಿಷ್ಕ (ಮೆದುಳು) ಮತ್ತು ಸಕಲ ಶರೀರವನ್ನೇ ಶಕ್ತಿಹೀನವನ್ನಾಗಿ ಮಾಡಿ ಪ್ರಾಣಶಕ್ತಿಯನ್ನು ಕುಗ್ಗಿಸಿ ಬಿಡುವುದು. ಹೆಚ್ಚೇಕೆ? ಈ ತಂಬಾಕದಿಂದುಂಟಾದ 'ನಿಕೋಟಿನ್" ಎಂಬ ವಿಷದ ಒಂದು ಹನಿಯೇ ದೊಡ್ಡ ಮನೆಯ ಹವೆಯನ್ನು ಅಶುದ್ಧಗೊಳಿಸುವುದಕ್ಕೆ ಸಾಕು. ಈ ಕಾರಣದಿಂದ ತಂಬಾಕವನ್ನು ಸಾಧ್ಯವಾದ ಮಟ್ಟಿಗೂ ತ್ಯಾಗಮಾಡುವುದೇ ಸರ್ವೋತ್ತಮವಾದ ದಾರಿಯಾಗಿದೆ. ತಂಬಾಕವನ್ನು ತಿಂದ ಹಾಗೂ ಸಿಗರೇಟ್, ಬೀಡಿಗಳನ್ನು ಸೇದಿದ ಅನೇಕರ ನಾಡೀ ಪರೀಕ್ಷೆಯನ್ನು ಸುಪ್ರಸಿದ್ಧ ವೈದ್ಯರು ನೋಡಿ ಒಂದು ನಿಶ್ಚಯವಾದ ನಿರ್ಣಯವನ್ನು ಕೊಟ್ಟಿದ್ದಾರೆ. ಆ ನಿರ್ಣಯವು ಈ ಕೆಳಗಿನಂತಿದೆ. "ಯಾವನೇ ಒಂದು ವಿಧದಲ್ಲಿ ತಂಬಾಕವನ್ನು ಉಪಯೋಗ ಮಾಡಿದವನ ವೀರ್ಯವು ನಿಜವಾಗಿ ಶುದ್ಧವಾಗಿರುವುದಿಲ್ಲ. ಇಷ್ಟು ಅಲ್ಲದೆ ಸಂತಾನವನ್ನುಂಟುಮಾಡುವ ಅಧಿಕವಾದ ನಂಬಿಗೆಯನ್ನೂ ಹೊಂದಿರುವುದಿಲ್ಲ, ಕಾಮಶಕ್ತಿಯು ಪ್ರಬಲವಾಗಿರುವದಿಲ್ಲ. ಆಹಾರವು ಚನ್ನಾಗಿ ಜೀರ್ಣವಾಗುವುದಿಲ್ಲ." ಮುಂತಾಗಿ ತರುಣರು ಈ ಎಲ್ಲಾ ವಿಷಯಗಳನ್ನು ಹೆಚ್ಚಾಗಿ ಗಮನಿಸಬೇಕಾದದು ಪ್ರಧಾನವಾದ ಕಾರ್ಯವಾಗಿದೆ. ಅಶುದ್ಧವಾದ ವಾಯುವಾಗಲಿ, ಆಲಸ್ಯಪೂರ್ಣವಾದ ಸ್ವಭಾವವಾಗಲಿ, ಅತ್ಯಧಿಕ ಮಾನಸಿಕ ಶ್ರಮವಾಗಲಿ, ಔದಾಸೀನ್ಯವಾಗಲಿ ಇವುಗಳಾದರೂ ಪುರುಷತ್ವವನ್ನು ಕಳೆಯುವುದರಲ್ಲಿ ಕಮ್ಮಿಯವಲ್ಲ.

ತರುಣರೇ! ನೀವು ತರುಣರೆಂದು ಧೈರ್ಯವಾಗಿ ಹೇಳಿಕೊಳ್ಳುವಿರಾದರೆ ಮೊದಲು ಅಂತಹ ಸಾಮರ್ಥ್ಯವನ್ನು ಪಡೆಯಿರಿ. ನಾಡಿನಾಡಿಯಲ್ಲಿಯೂ ಉತ್ಸಾಹಶಕ್ತಿಯನ್ನು ತುಂಬಿರಿ. ಜೀವಾತ್ಮನನ್ನು ಆನಂದಗೊಳಿಸುವ ದೃಢಸಂಕಲ್ಪವನ್ನು ಇಂದೇ ಕೈಕೊಳ್ಳಿರಿ. ಹೃದಯದಲ್ಲಿ ಸಂತೋಷ, ಅದಕ್ಕನುಗುಣವಾದ ಪ್ರೇಮ ಇವುಗಳ ಹೊಳೆಯನ್ನು ಹರಿಸಿರಿ! ಕ್ರೀಮ್ ಪೌಡರ್ ಮುಂತಾದ ಕೃತ್ರಿಮವಾದ ಅಲಂಕಾರಗಳನ್ನು ಮಾಡಿಕೊಂಡು ನಿಮ್ಮ ಮುಖದ ಕಲಂಕವನ್ನು ಮುಚ್ಚಿಕೊಳ್ಳುವುದಕ್ಕಿಂತಲೂ ಆ ಕಲಂಕವನ್ನು ಮೂಲದಿಂದಲೇ ಕಳೆಯಬಹುದಾದ ನೂತನ ಶಕ್ತಿಯನ್ನು ಸಂಪಾದಿಸಿರಿ. ಆ ಶಕ್ತಿಯೇ ಇಂದ್ರಿಯ ನಿಗ್ರಹ, ಅಥವಾ ಬಹ್ಮಚರ್ಯ, ಇಲ್ಲವೇ ಏಕಪತ್ನೀವ್ರತವೆಂದು ಭಾವಿಸಿ ಈ ಸರಳ ಮಾರ್ಗವನ್ನೇ ಕೈಕೊಂಡು ಕೀರ್ತಿಶಾಲಿಗಳಾಗಿರಿ. ಅನ್ಯಾಯವಾದ ಮಾರ್ಗದಲ್ಲಿ ಪುರುಷತ್ವವನ್ನು ಕಳೆದುಕೊಂಡು ನಾವು ಪುರುಷರೆಂದು ಹೇಳಿಕೊಳ್ಳುವದು ಸರ್ವಥಾ ಅನುಚಿತವಲ್ಲವೇ?

---

## ಯಾರ ಸಲುವಾಗಿ ?

ಬರೆದವರು:- ಪಾಟೀಲ ಲಿಂಗನಗೌಡರು

---

ಅದೊಂದು ಬೆಳದಿಂಗಳರಾತ್ರಿ. ಹುಣ್ಣಿವೆಯ ಚಂದ್ರನರಾತ್ರಿ. ಎಲ್ಲ ಕಡೆಗೂ ಬೆಳದಿಂಗಳು ಬೆಳ್ಳಿಯಂತೆ ಬಿದ್ದಿದೆ. ನೈಸರ್ಗವು ತನ್ನ ಸೌಂದರ್ಯದ ಶಿಖರದಲ್ಲಿ ನಲಿದಾಡುವಂತೆ ಭಾಸವಾಗುತ್ತಲಿದೆ ಆಹ್ಲಾದಕರವಾದ ಆ ರಾತ್ರಿಯಲ್ಲಿ ಅನುಪಮೆಗೇಕೋ ವಿಶೇಷವಾದ ಚಿಂತೆ. ಆ ಸುಖವನ್ನು ಸವಿಯುವ ಭಾಗ್ಯ ಅವಳಿಗಿಲ್ಲವೆನ್ನಬೇಕು. ತನ್ನ ಸಂಸಾರವನ್ನು ತನ್ನ ಸಂಗಡಿಗನೊಂದಿಗೆ ನಡೆಯಿಸುವ ಮೊದಲಿನ ಸುಖದಿನಗಳ ಸಂಭ್ರಮದಲ್ಲಿಯೇ ಈ ಚಿಂತೆಯೇ ? ನಿದ್ರಾಸಮಯವು ಮೀರಿದ್ದರೂ ನಿದ್ರೆಯು ಅವಳನ್ನು ಮರೆತಂತಿದೆ. ಆ ಸುಖವೇ ಅವಳಿಗೆ ದುಃಖದ ಉಗಮವಾಗಿ ಮಾರ್ಪಡಿಸಿದೆ. ಆನಂದನು ಅವಳ ಜೀವನದ ಜೊತೆಗಾರ, ಮೇಲೆ ರಸಿಕ. ಸುಶಿಕ್ಷಿತ ಸಂಸಾರವನ್ನು ಆದರ್ಶವಾಗಿ ನಡೆಯಿಸಬೇಕೆಂಬ ಮನದಾಸೆಯುಳ್ಳವನು, ಇಂದು ಅವನು ಹೊರಗೆ ಹೋದವನು ಈ ವರೆಗೂ ಬಂದಿರಲಿಲ್ಲ. ಅನುಪಮೆಗೆ ಈ ಸಮಯದಲ್ಲಿ ತನ್ನ ಬಾಲ್ಯದ ಒಡನಾಡಿಯಾದ ಅಶೋಕನ ನೆನಪಾಯಿತು. ಅವನಿಗೊಂದು ಓಲೆಯನ್ನು ಬರೆಯಬೇಕೆಂಬ ಹಂಬಲವು ಹೆಚ್ಚಿ ಅದನ್ನು ಮುಂದುವರಿಸಿದಳು:—

ಪ್ರಿಯ ಅಶೋಕ,

ಈ ವರೆಗೂ ನಿನಗೆ ಓಲೆ ಬರೆಯುವ ಧೈರ್ಯವಾಗಲಿಲ್ಲ. ಇಂದು ನೀನೆಂದರೂ ಸರಿಯೇ ಆ ಕೆಲಸವನ್ನು ಮಾಡಹತ್ತಿದ್ದೇನೆ. ವಿಶ್ವವು ವಿಶಾಲವಾಗಿದೆ. ಆ ವಿಶಾಲವಾದ ವಿಶ್ವದ ಮೂಲೆಯೊಂದರಲ್ಲಿ ನೀನಿದ್ದರೂ ಈ ಜಗತ್ತಿನಲ್ಲಿ ಎಲ್ಲ ಕಡೆಗೂ ನೀನಿರುವಂತೆ ನನ್ನ ಕಣ್ಣುಗಳಿಗೆ ಭಾಸವಾಗುತ್ತಿದೆ. ಅಂದಿನ ನನ್ನ ಸಲುಗೆ, ನಿನ್ನ ರೂಪು, ನಗೆ, ಸಲ್ಮೆಯನ್ನೂ ಇನ್ನೊಮ್ಮೆ ನಾನು ನೋಡಬಹುದೇ ? ಇಲ್ಲ! ಆ ಭಾಗ್ಯವೆನಗಿಲ್ಲ. ನೀನು ನನಗೆ ಯಾವ ಹೆಸರಿಟ್ಟರೂ ಚಿಂತೆಯಿಲ್ಲ. ನನ್ನ ಮನೋವಿಕಾರಗಳನ್ನು ನಿನ್ನೆದುರಿನಲ್ಲಿ ಮುಚ್ಚಿಡಲಾರೆ. ಅದಕ್ಕಾಗಿ ಹೃದಯವು ಕೊರಗುತ್ತಿದೆ, ಕಂಪಿಸುತ್ತಿದೆ. ಹೃದಯದ ಒಜ್ಜೆಯನ್ನು ಕಡಿಮೆಮಾಡಿಕೊಳ್ಳುವ

ದಕ್ಕಾಗಿಯೇ ಇಂದು ನನ್ನ ಹೃದಯವನ್ನೇ ತೆರೆದು ನಿನ್ನೆದುರಿನಲ್ಲಿಡುತ್ತೇನೆ. ಅದ ರಲ್ಲಿ ಕಾಣುವ ದೃಶ್ಯವನ್ನಾದರೂ ನೀನು ನೋಡು. ಹಿಂದೊಮ್ಮೆ-ಅದು ನಗೆಗಾಗಿ ಯಾಗಲಿ ಇಲ್ಲವೇ ಅಭಿಮಾನಕ್ಕಾಗಿಯಾಗಲಿ- ಅಂತೂ ನೀನೇ ಹೇಳಿರುವೆ. ಅನು ಪಮೆಯು ನಿರುಪಮೆಯೆಂದು. ಬರೇ ಹೇಳಲಿಲ್ಲ ಆ ಪ್ರೀಯವಾದ ಹೆಸರಿನಿಂದಲೇ ನೀನು ನನ್ನನ್ನು ಸಂಬೋಧಿಸಿದೆ. ನನಗಾಗಿ ನೀನು ಆಗ ಯಾವದನ್ನಾದರೂ ಮಾಡಲು ಸಿದ್ಧನಾಗಿದ್ದಿ. ಆದರೆ ಈಗ ಅದೆಲ್ಲವೂ ಬದಲಾಯಿತೇ? ಸ್ತ್ರೀಹೃದಯವು ಚಂಚಲವೆಂದು ಹೆಸರಿಡುವ ನಿನ್ನ ಹೃದಯಕ್ಕೆ ಅದಾವ ಹೆಸರು ಕೊಡಬೇಕು? ಕ್ಷಮಿಸು, ನಿಷ್ಠುರಳಾಗಿ ನುಡಿಯಹತ್ತಿದ್ದೇನೆ. ನನ್ನಲ್ಲಿ ನಿನಗೆ ಅನುರಾಗವಿರಲಿಲ್ಲವೇ? ಹಾಗಾದರೆ ಅಂದಿನದೆಲ್ಲವೂ ಬರಿಯ ಕೃತಕತೆಯೇ? ನೀನಿಂದು ತಿಳಿದಿರಬಹುದು, ಅನುಪಮೆಯು ಅನ್ಯರ ಸೊತ್ತಾಗಿರುವಳೆಂದು. ತಪ್ಪು. ಇದಕ್ಕೆ ಬುಡವಿಲ್ಲ. ನೀ ಕರೆಯುವಂತೆ ನಿರುಪಮೆಯು ಇಂದಿಗೂ ನಿನ್ನವಳೇ. ಸಮಾಜವು ನನ್ನನ್ನು ಬೇರೆ ದೃಷ್ಟಿಯಿಂದ ನೋಡಬಹುದು. ಆದರೆ ಅದನ್ನು ನಾನೊಪ್ಪುವದಿಲ್ಲ. ನಾ ನಿಂದು ಒಬ್ಬರ ತೊತ್ತು. ದಾಸ್ಯದಲ್ಲಿ ಬಿದ್ದಿದ್ದೇನೆ. ಸುಖದ ಲವಲೇಶವೂ ಕೂಡಾ ಇಲ್ಲ. ಸುಖವಿದ್ದರೂ ಆ ಸುಖವೇ ದುಃಖವಾಗಿ ನನಗೆ ತೋರುತ್ತಿರಬಹುದೇ? ಅಶೋಕನೊಬ್ಬನಿದ್ದರೆ ಸಾಕು ಈ ಸಂಸಾರದ ಎಂಥ ಕ್ರೂರ ಹೊಡೆತವನ್ನಾ ದರೂ ನಾನು ಲೆಕ್ಕಿಸಲಾರೆನು. ಅಶೋಕ, ಹೇಳು ಇಂದಿನ ನನ್ನ ವಿವಾಹವನ್ನು ಹಿಂದೂ ಧರ್ಮವು ಒಪ್ಪಿರುವದೇ? ಅರ್ಥವಾಗದ ಅರಿಯದ ಭಾಷೆಯಲ್ಲಿ ಆಚಾ ರ್ಯರು ಹೇಳಿಸುತ್ತಿದ್ದುದು ನನಗರ್ಥವಾಗಲಿಲ್ಲ. ಮನಸ್ಸೊಪ್ಪದಿದ್ದಲ್ಲಿ ದೇವತೆ ಗಳನ್ನೇಕೆ ಸಾಕ್ಷಿಯಾಗಿ ಕರೆತರಬೇಕು? ಆ ಆಚಾರ್ಯರಾದರೂ ವಿವಾಹದ ತಿರು ಳನ್ನು ಅರಿತಿರುವರೇ? ಕೂಡಿದ ಜನರ ಮೋಜಿಗಾಗಿ ವಿವಾಹವೇದಿಕೆಯ ಮೇಲೆ ಅಬಲೆಯರ ಬಲಿಕೊಡಬೇಕೇ? ದಾರಿತಪ್ಪಿದೆನೆಂದು ನಿಂದಿಸಬೇಡ. ಎಂತಹ ಯಾತ ನೆಯಲ್ಲಿ ನಾನಿರುವೆನೆಂಬುದರ ಚಿತ್ರವನ್ನು ಕಲ್ಪಿಸಿಕೊ, ಹೆಚ್ಚು ಬರೆಯಲಾರೆ, ನನಗೆ ಸುಖವಾಗಬೇಕೆಂದು ಅಪೇಕ್ಷಿಸುವೆಯಾದರೆ ನನಗೊಮ್ಮೆ ದರ್ಶನಕೊಡು. ನಿನ್ನ ಕ್ಷೇಮ ಸಮಾಚಾರಕ್ಕೆ ಮೇಲೆ ಮೇಲೆ ಬರೆಯುತ್ತಿರು.

ಇತಿ

ನಿನ್ನ ಹತಭಾಗ್ಯ

ಅನುಪಮೆ,

ಓಲೆಯನ್ನು ಬರೆದು ಮುಗಿಸಿ. ಅದನ್ನು ತನ್ನ ಮನೆಯೆದುರಿನಲ್ಲಿಯೇ ಇದ್ದ ಅಂಚೆಯ ಪೆಟ್ಟಿಗೆಯಲ್ಲಿ ಚಲ್ಲಿದಳು. ಇಷ್ಟಾದರೂ ಆನಂದನು ಬರ

ಲಿಲ್ಲ. ಅನುಪಮೆಯು ತನ್ನ ಹಿಂದಿನ ಚಿತ್ರವನ್ನು ತನ್ನೆದುರಿನಲ್ಲಿ ನಿಲ್ಲಿಸಿ ಕಣ್ಣೀರಿಡುತ್ತಿದ್ದಾಳೆ. ಸುಖವೇ ಈ ಪ್ರಪಂಚದಲ್ಲಿಲ್ಲವೆಂಬಂತೆ ಅವಳಿಗೆ ಭಾಸವಾಗಿದೆ. ಹಲವು ವಿಚಾರಗಳಿಂದ ಆವಳ ಮನಸ್ಸು ಪೂರ್ಣವಾಗಿ ಬಳಲಿ ಬೆಂಡಾಗಿದೆ. ಆಗ ಹೊರಗೆ ಬಾಗಿಲ ತಟ್ಟಿದ ಸದ್ದಾದ್ದರಿಂದ ಹೋಗಿ ಕದ ತೆರೆದಳು. ಮೋರೆಯ ಮೇಲೆ ಆನಂದದ ಕಳೆಯಿರಲಿಲ್ಲ. ಆನಂದನು ಗಾಬರಿಯಿಂದ

"ಅನುಪಮಾ, ತೀವ್ರ ಬರಲಿಲ್ಲವೆಂದು ರೇಗಿರುವಿಯಾ?"

"....................."

"ತೀವ್ರ ಬರಬೇಕೆಂದಿದ್ದೆ; ಆದರೆ ದಾರಿಯಲ್ಲಿ ಮಿತ್ರರು ಭೆಟ್ಟಿಯಾಗಿ ಚಲನಚಿತ್ರದ ಕಡೆ ಎಳೆದೊಯ್ದರು. ಅಲ್ಲಿಂದ ಇದೀಗ ಬಂದಿರುವೆ ಸಿಟ್ಟಾಗಿರುವಿಯಾ? ಇನ್ನೊಮ್ಮೆ ಈ ರೀತಿ ಮಾಡಲಾರೆ"

"....................."

ಯಾಕೆ ಅನುಪಮಾ ಇಷ್ಟೇಕೆ ಕಳಹೀನಳಾಗಿರುವಿ? ಸಂಸಾರ ಯಾತ್ರೆಯ ಎಳೆಯ ದಿನಗಳು ಈಗಾಗಲೇ ನಿನಗೆ ಬೇಸರವಾದವೇ? ಬೇಸರವೆನಿಸಿ ಮನೆಗೆ ಬಂದಾಗ ನಗೆಮುಖದೊಂದಿಗೆ ಸ್ವಾಗತಿಸುವದನ್ನು ಮರೆತು ಏಕೆ ಈ ರೀತಿ ಆಚರಿಸುವಿ?

"....................."

ಮೈಯಲ್ಲಿ ಅಸ್ವಸ್ಥತೆಯೇ? ತಲೆನೋಯುವದೇ? ಏಕೆ, ಅಮೃತಾಂಜನವನ್ನು ಕೊಡಲೇ? ಹೇಳು ಆದದ್ದಾದರೂ ಏನು? ನಿನ್ನನ್ನೀ ಸ್ಥಿತಿಯಲ್ಲಿ ನಾನು ನೋಡಲಾರೆ.

"....................."

"ಇಷ್ಟೇಕೆ ನಾಚಿಕೆ? ಸಂಗಡಿಗನೊಂದಿಗೆ ಸಲುಗೆ ಬೇಡವೇ? ಏನಿದ್ದರೂ ಹೇಳು. ನಿನಗೋಸ್ಕರ ನಾನು ಏನನ್ನಾದರೂ ಮಾಡುವೆನು"

"ಆನಂದ, ಏನು ಹೇಳಲಿ ನನ್ನ ಪ್ರಾರಬ್ಧ!"

"ಹಾಗೆಂದರೇನು ಅರ್ಥವಾಗಲಿಲ್ಲ"

" ಅದೇ ಒಳ್ಳೆಯದು; ಅರ್ಥವಾದರೆ ಅನರ್ಥವಾಗಬಹುದು "

" ಅನುಪಮೆ, ಹೇಳುವದನ್ನು ಸರಿಯಾಗಿ ಹೇಳಬಾರದೇಕೆ? "

" ಆನಂದ! ನಾನುಹೇಳುವದು ನಿನಗೆ ರುಚಿಸಲಿಕ್ಕಿಲ್ಲ. ಆದರೂ ನಾನು ಹೇಳು ತ್ತೇನೆ. ನಿನ್ನ ಮನಬಂದಂತೆ ಮಾಡು. ಶಕ್ಯವಿದ್ದರೆ ನನ್ನನ್ನು ಕೊಲ್ಲು. ಪಾಪಿ ಯೆಂಬ ಹೆಸರನ್ನು ಕೊಡು, ಆದರೂ ನಾನು ಎಲ್ಲವನ್ನೂ ಹೇಳುತ್ತೇನೆ. ಎಲ್ಲ ವನ್ನೂ ನನ್ನೊಳಗಿಟ್ಟುಕೊಂಡು ನಾನು ಬಹು ದಿವಸ ಕೊರಗಲಾರೆ. ನನಗೆ ನೀನು ಬೇಕಾದ ಶಿಕ್ಷೆಯನ್ನು ಕೊಡು. ನಾನು ನಿನ್ನನ್ನು ಮನಸ್ಸಿನಿಂದ ಲಗ್ನವಾಗ ಲಿಲ್ಲ. ನಾನೊಬ್ಬನನ್ನು ಹೃದಯದಿಂದ ಪ್ರೀತಿಸುತ್ತಿದ್ದೇನೆ. "

" ನಿಜವೇ? "

" ನಿಜ, ಆನಂದ! "

" ಈ ವಿಷಯವನ್ನು ನನಗೇಕೆ ತಿಳಿಸಲಿಲ್ಲ? ನಿನ್ನ ಜೀವಿತದೊಂದಿಗೆ ಆದರ್ಶ ವಾಗಬೇಕೆಂದಿದ್ದ ನನ್ನ ಸಂಸಾರವನ್ನೂ ಪೂರ್ಣವಾಗಿ ನಾಶಮಾಡಿದಿ. ಈ ಅನ ರ್ಥವನ್ನು ತಪ್ಪಿಸಲು ದಾರಿಯಿರಲಿಲ್ಲವೇ? "

" ಇರಲಿಲ್ಲವೆಂದೇ ಈ ಅನರ್ಥ ಪರಂಪರೆಯು "

" ಹಾಗಾದರೆ ನನ್ನನ್ನು ವಿವಾಹವಾಗಲು ಒಪ್ಪಿದ್ದೇಕೆ? "

" ನಾನು ಒಪ್ಪಲಿಲ್ಲ ಆನಂದ. ಒಪ್ಪಲೇಬೇಕೆಂದು ಬಲಾತ್ಕರಿಸಲ್ಪಟ್ಟೆ. ಮನೆತನದ ಗೌರವವನ್ನು ಉಳಿಸಿಕೊಳ್ಳುವದಕ್ಕಾಗಿ ಈ ತ್ಯಾಗಕ್ಕೆ ಕೈಹಾಕಬೇ ಕಾಯಿತು. "

" ಈ ವಿಚಾರವನ್ನು ಕೊನೆಯಪಕ್ಷ ನನ್ನ ಮುಟ್ಟಿಗಾದರೂ ತಿಳಿಯುವಂತೆ ಮಾಡಬೇಕಾಗಿತ್ತು; ಆ ಮೇಲೆ ಈಗೊದಗಿದ ಅನರ್ಥವನ್ನು ನಾನು ತಪ್ಪಿಸುತ್ತಿದ್ದೆ"

" ಆನಂದ, ನೀನು ನನ್ನನ್ನು ವಿವಾಹವಾಗಲು ಒಪ್ಪಿದೆಯೆಂತೆ "

" ನಿಜ, ನಾನು ಎಷ್ಟೋ ಪ್ರೇಮದಿಂದ ನಿನ್ನನ್ನು ಪ್ರೀತಿಸಿದರೂ ನನ್ನ ಮೇಲೆ ನಿನ್ನ ಅನುರಾಗವಿರದಿದ್ದರೆ ನಿನ್ನನ್ನು ಬಲಾತ್ಕಾರದಿಂದ ಮದುವೆಯಾಗುವ ಹುಚ್ಚು

ಹನ್ಯಾಸವುಳ್ಳವನಾಗಿರಲಿಲ್ಲ. ಪ್ರೇಮದಿಂದ ಒಲಿದು, ಹೃದಯದಿಂದ ಕೂಡುವದೇ ವಿವಾಹವಲ್ಲವೇ? ಈ ವಿಷಯವನ್ನು ನನ್ನಿಂದ ಮುಚ್ಚಿಟ್ಟದ್ದು ನಿಜವಾಗಿಯೂ ಅಕ್ಷಮ್ಯ ಅಪರಾಧವಾಗಿದೆ."

"ಒಲ್ಲೆನೆಂದರೆ ನಡೆಯುವಂತಿರಲಿಲ್ಲ. ನಿಮ್ಮ ಅಣ್ಣನವರ ಬೇಡಿಕೆ ಮಾನ್ಯ ಮಾಡುವದಕ್ಕಾಗಿ, ನನ್ನ ತಂದೆಯ ಮರ್ಯಾದೆ ಕಾಯುವದಕ್ಕಾಗಿ ಬೇರೊಂದು ದಾರಿಯಿರಲಿಲ್ಲ."

"ಅನುಪಮೆ, ನಿನ್ನ ಹುಚ್ಚಿನಿಂದ ನನ್ನ ಜೀವನವನ್ನು ಬರಿದುಮಾಡಿದಿ. ಏನೇನೋ ಗಾಳಿಗೋಪುರಗಳನ್ನು ಕಟ್ಟಿದೆ. ಆದರ್ಶ ಸಂಸಾರಿಯಾಗಬೇಕೆಂದಿದ್ದೆ. ನನ್ನ ಬಳಲುವಿಕೆಯನ್ನು ನನ್ನವಳ ನಲ್ಮೆಯು ನೀಗಿಸಬಹುದೆಂದು ತಿಳಿದಿದ್ದೆ. ಸುಖವನ್ನು ಹೆಚ್ಚಿಸಿ ಸ್ವರ್ಗದಲ್ಲಿರುವಂತೆ ಇಲ್ಲಿಯೇ ಇರಲು ಶಕ್ಯವಿದೆಯೆಂಬುದನ್ನು ನನ್ನವಳ ಸಹಕಾರದಿಂದ ಜನತೆಗೆ ತೋರಿಸಬೇಕೆಂದಿದ್ದೆ. ಆದರೆ ಇಂದಾದುದೇನು?! ನಿನ್ನ ಹುಚ್ಚಿಗೇನನ್ನಬೇಕು? ನನ್ನದು ಹುಂಬತನದ ತ್ಯಾಗ. ಒಬ್ಬ ಸಂಬಂಧಿಕನ—ಬೇಕಾದಷ್ಟು ಸಮೀಪದವನಿರಲಿ—ಸ್ವಾರ್ಥದ ಹಿತಸಂಬಂಧಕ್ಕೆ ನಿನ್ನ ಜೀವಿತವನ್ನೇ ದಾರಿಯೆಗೆದದ್ದರಲ್ಲಿ ಜಾಣ್ಮೆಯಿಲ್ಲ. ಅದು ತಿಳಿಗೇಡಿಗಳ ಹುಂಬತನ ಜನತೆಯ ದೃಷ್ಟಿಯಲ್ಲಿ ನಾವು ಜೊತೆಗಾರರೆಂಬುವಂತಿದ್ದರೂ ನಿಜಾರ್ಥವು ಹಾಗಿಲ್ಲ. ಆಗಲಿ—ಅನುಪಮೆ, ನನ್ನದೊಂದು ಮಾತು, ಅದನ್ನು ನಡೆಯಿಸುವಿಯಾ?"

"ಶಕ್ಯವಿದ್ದರೆ"

ಶಕ್ಯವಿದೆ? ನಾವಿಬ್ಬರೂ ಜೊತೆಯಲ್ಲಿಯೇ ಜೀವಿಸೋಣ? ಬಂಧುತ್ವ ಪ್ರೇಮದಿಂದ ನಡೆಕೊಳ್ಳೋಣ; ನಮ್ಮ ತ್ಯಾಗದಿಂದ ಮುಂದಿನ ಜನಾಂಗಕ್ಕೆ ದಾರಿ ತೋರೋಣ. ಅನುಪಮೆ, ಹಿಂದೂ ಧರ್ಮವು ವಿವಾಹವು ಆಜನ್ಮದ ಸಂಯೋಗವೆಂದು ಅದನ್ನು ಸಡಿಲಿಸಲು ಯಾರಿಂದಲೂ ಆಗದೆಂದು ಹೇಳುತ್ತಿರುವದಷ್ಟೇ? ವಿವಾಹ ಸಂಬಂಧವು ನಮ್ಮವರ ಶಾಸ್ತ್ರದಂತೆ ಮರಣ ಪರಿಯಂತರವೂ ಕೂಡಿಯೇ ಇರಬೇಕೆಂದಲ್ಲವೇ? ನಮ್ಮ ಧರ್ಮವನ್ನು ನಾವು ಕಾಯ್ದುಕೊಳ್ಳುವದಕ್ಕಾಗಿ ಇಂದು ತ್ಯಾಗಿಗಳಾಗಿ ಕೊನೆಯ ವರೆಗೂ ಕೂಡಿಯೇ ಬಾಳೋಣ. ನಮ್ಮನ್ನು ಜನತೆಯು ಗಂಡಹೆಂಡರೆಂದು ಭಾವಿಸಿದರೂ ನಾವಿಂದು ವಿಶುದ್ಧವಾದ ಸಹೋದರಭಾವದಿಂದ ಕೂಡಿ ಬಾಳೋಣ. ಇದನ್ನು ನೀನು ಒಪ್ಪಲಾರಿಯಾ? ಒಪ್ಪಲಾರಿಯಾದರೆ ಆಗುವ ಅನರ್ಥವನ್ನು ನೆನೆದುಕೋ! ನನ್ನ ಬಂಧುವು ನನ್ನನ್ನು ತನ್ನ ಪ್ರಾಣ

ಕ್ಕಿಂತಲೂ ಹೆಚ್ಚಾಗಿ ಪ್ರೀತಿಸುತ್ತಾನೆ. ಅವನಿದನ್ನು ಅರಿತರೆ ಆಗುವ ಅನರ್ಥವು ಅಂತಿಂತಹುದೇ?

"ಉದಾರಿ ಆನಂದ, ನೀನೇಕೆ ಮತ್ತೊಮ್ಮೆ ವಿವಾಹಿತನಾಗಬಾರದು ?

"ಒಲ್ಲೆ, ಅದನ್ನು ನಾನಿಚ್ಛಿಸುವದಿಲ್ಲ. ಪ್ರೇಮದಿಂದ ಒಬ್ಬಳ ಕೈಹಿಡಿದೆ. ಅವಳ ಪ್ರೇಮವನ್ನು ಪರೀಕ್ಷಿಸಲು ನನಗವಕಾಶವಿತ್ತು, ದುಡುಕಿದೆ. ವಿವಾಹದ ನಿಜ ಉದ್ದೇಶವು ಇನ್ನು ಮೇಲಾದರೂ ಸರಿಯಾದ ರೀತಿಯಲ್ಲಿ ನಡೆಯಲೆಂದು ನಾನು ಸರ್ವ ತ್ಯಾಗಕ್ಕೆ ಸಿದ್ಧನಾಗಿದ್ದೇನೆ. ಆದರೆ ಅನುಪಮೆ, ನನ್ನಂತೆ ನಿನ್ನ ಜೀವಿತವನ್ನು ಹದಗೆಡಿಸಿದ ಅಪವಾದವು ನನ್ನ ತಲೆಯಮೇಲಿದೆ? ನೀನದನ್ನು ಕ್ಷಮಿಸು."

"ಆನಂದ, ನೀನೊಪ್ಪಿದಂತೆ ಇಂದಿನ ಸಮಾಜವು ಇದಕೊಪ್ಪುವದೇ? ಅಶೋಕನು ನನ್ನವನಾಗಿದ್ದರೆ ಇಂದಿನ ಶೋಕಕ್ಕೆ ಕಾರಣವಿದ್ದಿಲ್ಲ. ಅಶೋಕನಾದರೂ ಈಗ ನನ್ನವನಲ್ಲ. ಧರ್ಮವು ಅವನನ್ನು ಬೇರೊಬ್ಬಳ ವಶಕ್ಕೆ ಒಪ್ಪಿಸಿದೆ. ಒಲ್ಲೆ. ಈ ಜಗತ್ತಿನಲ್ಲಿ ದುಃಖವಲ್ಲದೆ ಬೇರಾವುದೂ ನನ್ನ ಪಾಲಿಗೆ ಇಲ್ಲ. ವಿವಾಹವು ಇನ್ನು ಮುಂದಿನ ಜನ್ಮದಲ್ಲಿ. ಆನಂದ, ನಮ್ಮ ಪರಸ್ಪರ ವಿಚಾರಗಳು ಮೊದಲು ವಿವಾಹದ ಮುಂಚೆ ತಿಳಿದಿದ್ದರೆ, ........... ನೀನದನ್ನು ಕ್ಷಮಿಸು"

ಅದನ್ನು ಮರೆಯುವದರಿಂದಾಗುವ ಲಾಭವೇನು?

ವೇಳೆಯು ಬಹಳವಾದ್ದರಿಂದ ಅವರು ಒಬ್ಬರನ್ನೊಬ್ಬರು ಬೀಳ್ಕೊಟ್ಟರು. ಆದರೆ ಈ ಇಡೀ ರಾತ್ರಿಯೂ ಒಬ್ಬರಿಗೂ ನಿದ್ರೆಬರಲಿಲ್ಲ. ಇಬ್ಬರಿಗೂ ಹೃದಯ ವ್ಯಥೆ. ಹೃದಯದ ಒಜ್ಜೆಯು ಕಡಿಮೆಯಾಗಬೇಕಾದರೆ ಕಣ್ಣೀರುಗಳು ಹರಿಯ ಬೇಕು. ಆಗ ಮನಸ್ಸಿಗೆ ತಕ್ಕಮಟ್ಟಿಗೆ ಶಾಂತಿ.

+ + + +

ಇದಾದ ಮೇಲೆ ೧೦–೧೫ ದಿವಸದ ವಿಷಯ. ಅಶೋಕನಿಗೆ ಅನುಪಮೆಯ ವಿಷಯ ತಿಳಿದು ಮನಸ್ಸಿಗೆ ವ್ಯಥೆಯೆನಿಸಿ ಅದಕ್ಕೆ ತಾನೊಂದು ಮಾರೋಲೆಯನ್ನು ಬರೆದ.

ಹೃದಯ ದೇವತೆಗೆ–

ತಪ್ಪಾಯಿತು ಕ್ಷಮಿಸು. ನಿನ್ನ ಪ್ರೇಮದಬೆಲೆಯನ್ನು ನಾನರಿಯದೆ ಹೋದೆ.

ಆದರೂ ನೀನು ನನಗೆ ಹೃದಯ ದೇವತೆ, ಮುಂದಿನ ಜನ್ಮದಲ್ಲಿಯಾದರೂ ನಿನ್ನನ್ನು ಪಡೆಯುವೆನೆಂಬ ಆಶೆಯಿಂದ ಕೂಡಿದ ಆಶಾವಾದಿಯಾಗಿದ್ದೇನೆ. ಮನಸ್ಸಿನಲ್ಲಿದ್ದುದನ್ನು ಇಬ್ಬರೂ ಕೂಡಿಯೇ ಅನೇಕ ಸಾರೆ ಚರ್ಚಿಸಿದ್ದೆವು. ಆದರ್ಶ ದಾಂಪತ್ಯವನ್ನು ನಡೆಯಿಸಬೇಕೆಂದಿದ್ದೆವು ನಿನ್ನ ಸಹವಾಸದಿಂದ ನನಗದು ಶಕ್ಯವಾಗಿತ್ತು. ಆದರೆ ನಿನ್ನ ತಂದೆಯವರು ಅದಕ್ಕೊಪ್ಪಲಿಲ್ಲ. ಕಾರಣವು ನನಗೆ ತಿಳಿಯದೆ ಹೋಯಿತು. ನಿನ್ನ ಆಶೆಯನ್ನು ನಾನು ಬಿಡಬೇಕಾಯಿತು. ಮುಂದೆ ಬೇರೊಬ್ಬಳೊಡನೆ ನಾನು ವಿವಾಹಿತನಾದೆ. ಈ ವಿವಾಹದಿಂದ ನನಗೆ ಸುಖವಿಲ್ಲ. ನಮ್ಮಿಬ್ಬರ ಆಚಾರವಿಚಾರಗಳು ಒಂದುಗೂಡುವಂತಿಲ್ಲ ಆದರೂ ಜೋರಿನಿಂದ ಸಂಸಾರ ರಥವನ್ನು ಮುಂದೊಯ್ಯಬೇಕಾಗಿದೆ. ಅದೆಂದು ಮುಗ್ಗರಿಸಿ ಒಡೆದು ಬೀಳುವದೋ ಹೇಳಲಾರೆ. ಎಂದೇಕೆ? ಇಂದೇ ಹೀಗಾದರೂ ನನಗೆ ಸಂತೋಷ, ಇನ್ನೊಂದು ಮಾತು. ಆನಂದನನ್ನು ನಾನು ಬಲ್ಲೆ, ಅವನು ನನ್ನ ಸ್ನೇಹಿತ. ಅವನು ನನಗಿಂತಲೂ ರಸಿಕ, ಚಲುವ, ಹಣವಂತ; ಇಂಥವನ ಸಾನಿಧ್ಯದಲ್ಲಿಯೂ ನಿನಗೆ ಸುಖವಿಲ್ಲವೇ? ಆಶ್ಚರ್ಯ! ಅವನಲ್ಲಿ ನಿನಗೆ ಅನುರಾಗವಿಲ್ಲವೇ? ಇರಬಹುದು. ಪ್ರೇಮೋದಯಕ್ಕೆ ಬಹಿರಂಗ ಕಾರಣಗಳು ಮುಖ್ಯವಲ್ಲ, ಅದು ದೇವದತ್ತವಾದದ್ದು; ಅದಕ್ಕೆ ಕಣ್ಣಿಲ್ಲ.

ನಿನ್ನನ್ನು ಹೃದಯ ದೇವತೆಯೆಂದು ಕರೆದಿದ್ದೇನೆ, ಈ ನನ್ನ ದೇಹದಲ್ಲಿ ನಿನಗಿರುವ ಅಧಿಕಾರಕ್ಕಾಗಿ. ಇಲ್ಲಿ ಒಂದು ಮಾತನ್ನು ನೆನಪಿನಲ್ಲಿಡು ಹಿಂದೂ ಧರ್ಮವು ಪುನರ್ವಿವಾಹವನ್ನು ಒಪ್ಪಿದರೂ ನಮ್ಮಂಥವರಿಗೆ ಪುನರ್ವಿವಾಹದಲ್ಲಿ ಪ್ರವೇಶವಿಲ್ಲ. ಅದಕ್ಕಾಗಿಯೇ ಕೊನೆಯವರೆಗೂ ನಿರ್ವಂಚನೆಯಿಂದ ವಿಶುದ್ಧ ಜೀವನವನ್ನು ನಡೆಸೋಣ. ಮುಂದಿನ ಸಂತತಿಯಲ್ಲಾದರೂ ಈ ತರದ ಅನರ್ಥವು ತಲೆಯೆತ್ತದಂತೆ ಜನತೆಯನ್ನು ಎಚ್ಚರಿಸೋಣ. ಎಲ್ಲಿಯೇ ಯಾವ ಸಂಸ್ಕೃತಿಯಲ್ಲಿಯೇ ಬೆಳೆದವಳೊಬ್ಬಳ ಕೈ ಹಿಡಿದ ಫಲವಾಗಿ ಇದನ್ನು ಅನುಭವಿಸಬೇಕಾಗಿದೆ. ಒಬ್ಬರ ಹೃದಯವನ್ನೊಬ್ಬರು ಅರಿಯದಿರುವದೇ ಇದಕ್ಕೆ ಕಾರಣ. ನಿನ್ನದೂ ಅದೇ ವಿಚಾರ ಇಂಥಹ ವಿಷಮ ಸಂಸಾರಗಳನ್ನೇಕೆ ಬೆಳೆಯಿಸಬೇಕೋ ನಾನರಿಯೆ. ನಮ್ಮಂತೆಯೇ ಮತ್ತೆ ಅದೆಷ್ಟು ಜೀವಗಳು ಸಂಸಾರದ ಆದರ್ಶಕ್ಕಾಗಿ ಹಂಬಲಿಸಿ ನಿರಾಶೆಯಾಗಿರುವವೋ? ಆಗಲಿ ಅನುಭವಿಸೋಣ, ಬೆಳಕೊಮ್ಮೆ ಬರಲಿ.

ಇತಿ
ನಿನ್ನ ದುಃಖಭಾಗಿ,
ಅಶೋಕ

ಈ ಓಲೆಯನ್ನು ಈರ್ವರೂ ಓದಿದರು. ಆನಂತರ ಅವರ ಮುಖದಿಂದ ನಮ್ಮವರ ಮೌಢ್ಯತನ, ವಿವಾಹದ ನಿಜತತ್ವವರಿಯದ ಅಂಧಶ್ರದ್ಧೆಯೆಂಬ ಉದ್ಗಾರಗಳು ಹೊರಬಿದ್ದವು.

ಸಮಾಜದ ಮೌಢ್ಯತನ, ಅಂಧ ಶ್ರದ್ಧೆಗಳು ಅಳಿಯಲಿ !
ಸಮಾಜದಲ್ಲಿ ಸುವಿಚಾರ, ಸುಜ್ಞಾನ, ಆತ್ಮವಿಶ್ವಾಸಗಳು ಬೆಳೆಯಲಿ !!

---

## ಆ ಭಾಗ್ಯ ಬರುವದೆಂದು ?

ಆ ಭಾಗ್ಯ ಬರುವದೆಂದು ? | ಅದ ಬರಿಸಿಕೊಳ್ವರಾರಿಂದು ? |
ಸೌಭಾಗ್ಯ ಲಕ್ಷ್ಮಿ ನಲಿದಾಡಿ | ಸತ್ಕೀರ್ತಿ ಪಡೆಯುವಾಕಾಲ ||

ಬಲಯುತರು ಕಟ್ಟಿದಾರಾಜ್ಯ | ಬಲಹೀನರಾಗಿ ಕಳೆದಿಹೆವು |
ಬಲ್ಲಿದರು ಬಾರದಿಹರೇನು | ನಿಲ್ಲಿಸಲು ನಮ್ಮ ಧ್ವಜವನ್ನು? ||

ಅಭಿಮಾನ ಮೈದೋರಿ ಯುವಕರಲಿ | ಹೊಸತನವ ಹುಡುಕುವ ಜಾಣ್ಮೆ |
ಸದ್ಭಾವನೆಯು ತಾ ನೆಲಿಸಿ | ಬಂಧನವ ದಾಟುವ ಕಾಲ ||

ವರಧರ್ಮರಾಜ್ಯವೆಂದು | ಹೆಸರಾಗಿ ಮೆರೆದ ಭಾರತವು |
ಪರಿಪರಿಯ ಕಷ್ಟಗಳನೀಗಿ | ನಂದನದಿ ಮೆರೆಯುವ ಕಾಲ ||

ಮಹಿಳೆಯರಿಗಿಲ್ಲ ಸ್ವಾತಂತ್ರ್ಯ | ಬಳಲುವರು ರೂಢಿ ದಾಸ್ಯದಲಿ |
ಮಹಕೀರ್ತಿಪೊಂದಿದಬಲೆಯರು | ಭಾರತೆಯ ಕೀರ್ತಿ ಪೆಚ್ಚಿಸಲು ||

ತೋರಿದರು ಹಿಂದೊಮ್ಮೆ ದಾರಿಯನು | ಇಂದವರು ಮಲಗಿ ನಿದ್ರಿಪರೇ? |
ಕಾರುಣ್ಯಕ್ಕೀಡಾದ ನೋಟವನು | ಆ ಗುರುವರರು ಕಾಣದಿಹರೇನು ? ||

ಬೇಡಿದ್ದು ಕೊಡುವೆ ನೀನೆಂದು | ಪೇಳುವರು ವಿವಿಧ ರೀತಿಯೊಳು |
ಬೇಡುವೆವು ನೀಡೋ ವೀರೇಶ | ಭಾರತದ ಜನರೊಳೊಮ್ಮನವ ||

ಶ್ರೀ: ಶಿದ್ಧಲಿಂಗ

## " ಮತವೃದ್ಧಿಗೆ ಐಕ್ಯತೆಯೇ ಮೂಲ "

" ಸಂಪಾದಕೀಯ "

ವೀರಶೈವರಲ್ಲಿ ಕೆಲಕಾಲದಿಂದ ವ್ಯಕ್ತಿದ್ವೇಷವು ಪ್ರಬಲವಾಗಿ ಅನಂತಾನಂತ ದುರ್ವಾದಗಳಿಗೆ ಕಾರಣವಾಗಿರುವುದು ಸರ್ವರಿಗೂ ಗೊತ್ತಾದ ಸಂಗತಿಯಷ್ಟೇ! ಆವುದಾದರೊಂದು ವಾದವು ಪ್ರಮಾಣಬದ್ಧವಾದ ಸೌಮ್ಯಮಾರ್ಗದಲ್ಲಿ ಸಾಗುವುದಾದರೆ ಅದಕ್ಕೆ ಸತ್ಫಲವು ಲಭಿಸುವಲ್ಲಿ ಸಂದೇಹವೇ ಇಲ್ಲ. ಆದಿಯಲ್ಲಿ ವ್ಯಕ್ತಿದ್ವೇಷದಿಂದಲೇ ಆರಂಭವಾದ ವಾದಕ್ಕೆ ದೊರೆವ ಫಲವೇನು? ಇದೀಗ ನಮ್ಮ ಸಮಾಜದಲ್ಲಿ ಹೀಗಾಗಿದೆ. ಅದಕ್ಕಾಗಿಯೇ ವೀರಶೈವರು ಸರ್ವವಿಧದಿಂದಲೂ ಪ್ರತಿವರ್ಷವೂ ಅವನತಿಗೀಡಾಗುತ್ತಿರುವರೆಂಬುದು ಪ್ರತ್ಯಕ್ಷವಾಗಿಯೇ ಇದೆ. ನಮ್ಮವರಲ್ಲಿಯ ದೊಡ್ಡವರೆಂಬವರು ಈಶ್ವರ ದಯೆಯಿಂದ ಸರ್ವಾನುಕೂಲವನ್ನು ಹೊಂದಿದವರಾಗಿ, ಸಾಮಾನ್ಯ ಜನಗಳನ್ನು ಕೈಯಲ್ಲಿ ತೆಗೆದುಕೊಂಡು ಅಲ್ಲಸಲ್ಲದ ಕೋಲಾಹಲಗಳನ್ನೆಬ್ಬಿಸಿ ಅವರನ್ನೇ ಕಷ್ಟಕ್ಕೀಡುಮಾಡಿ ತಾವು ಮಾತ್ರ ಬೆಚ್ಚಗೆ ನಿದ್ರಿಸುತ್ತಿರುವರು.

ವೀರಶೈವರಂತೆ ಇತರ ಮತದವರು ವಾದವನ್ನು ಆರಂಭಿಸುವುದಿಲ್ಲವೆಂತಲ್ಲ ವೀರಶೈವರಿಗಿಂತಲೂ ಇತರರಲ್ಲಿ ಅಧಿಕವಾದ ವಾದವು ಹಬ್ಬಿದೆ. ಆದರೆ ಅದಕ್ಕೊಂದು ಮೇರೆಯುಂಟು, ಆರಂಭದಲ್ಲಿ ಪ್ರಮಾಣವುಂಟು. ನಮ್ಮವರಲ್ಲಿ ಅದಾವುದೂ ತೋರುವುದಿಲ್ಲ. ಅಲ್ಲದೆ ಇತರ ಮತದವರಿಗಿಂತಲೂ ಲಿಂಗಧಾರಿಗಳಾದ ನಮ್ಮವರಲ್ಲಿ ಮೊದಲಿನಿಂದಲೂ ಜಾತಿಗಳು ಹೆಚ್ಚು. ಈಗಲಾದರೂ ದಿನೇ ದಿನೇ ಜಾತಿಗಳು ಹೆಚ್ಚಾಗುತ್ತಲಿವೆಯೇ ಹೊರತು ಹಲಕೆಲವು ವಿಶಿಷ್ಟ ಜಾತಿಗಳಲ್ಲಿ ಇತರರು ಸಮಾವೇಶವಾಗುವಂತಿಲ್ಲ. ಒಂದು ಮತದಲ್ಲಿ ನೂರಾರು ಜಾತಿಗಳಿರುವದಕ್ಕಿಂತಲೂ ೪-೬ ಜಾತಿಗಳಿದ್ದರೆ ಬಹು ಮಟ್ಟಿಗೆ ಸಮಾಜದಲ್ಲಿ ಐಕ್ಯಮತ್ಯವುಂಟಾಗುವದೆಂಬದು ಪ್ರಾಚೀನರಿಗೂ ನವೀನರಿಗೂ ಒಪ್ಪಿಗೆಯಾದ ಮಾತು. ಆದರೆ ಯಾರು ಯಾವ ಜಾತಿಯಲ್ಲಿ ಸೇರಬೇಕು? ಯಾರಿಗೆ ಏನನ್ನಬೇಕು? ಎಂಬುದರಲ್ಲಿ ಈರ್ವರಿಗೂ ಬಹುಕಾಲದಿಂದ ಭಿನ್ನಾಭಿಪ್ರಾಯವುಂಟಾಗುತ್ತ ಬಂದಿದೆ. ಆದರೂ ಕೆಲ ಪ್ರಾಚೀನ ವೃದ್ಧ ವಿದ್ವಾಂಸರು ತಮ್ಮಕಾಲದ ರೀತಿನೀತಿಗಳಿಂದಲೂ, ಧರ್ಮಶಾಸ್ತ್ರನಿಯಮಗಳಿಂದಲೂ, ವೀರಶೈವನಾದ ಮೇಲೆ ಇತರ ಮತದ ಸ್ತ್ರೀ, ಬಾಲಕ

ರಂತೆ ಭವಿತ್ವ (ಶೂದ್ರತ್ವ)ವು ಆತನಿಗಿಲ್ಲವೆಂತಲೂ, ಅಸಚ್ಛೂದ್ರ, ಚಾಂಡಾಲರ ಹೊರತು ಉಳಿದವರೆಲ್ಲರಿಗೂ ವೈದಿಕ, ತಾಂತ್ರಿಕ, ದ್ವಿಜತ್ವವು ಸ್ವತಸ್ಸಿದ್ಧವಾಗಿ ರುವದೆಂತಲೂ, ಬ್ರಾಹ್ಮಣ್ಯ ವಿಚಾರವಾಗಿ ಲೌಕಿಕ, ಪಾರಮಾರ್ಥಿಕವೆಂಬ ಎರಡು ಭೇದವುಂಟಾಗಿ ಪಾರಲೌಕಿಕ ಬ್ರಾಹ್ಮಣ್ಯವು ಮಾಹೇಶ್ವರ (ಜಂಗಮ) ವ್ಯತಿರಿಕ್ತ ರಾದ ಸರ್ವ ದ್ವಿಜರಿಗೂ ಸಂಭವಿಸುವದೆಂತಲೂ, ಜನ್ಮ ಕರ್ಮಗಳಿಂದ ಜಾತಿಗಳ ನಂತವಾದಾಗ್ಯೂ ಅವೆಲ್ಲವುಗಳನ್ನು ಪೃಥಕ್ಕರಿಸುವದಕ್ಕಿಂತಲೂ ನಾಲ್ಕಾರು ವಿಧ ವಾಗಿ ಏಕೀಕರಿಸುವದೇ ಉತ್ತಮವೆಂತಲೂ, ಶಿವಾಗಮ ಭಾಷ್ಯಾದಿ ಸಂಶೋಧನೆ ಯಿಂದ ಮಾಹೇಶ್ವರ (ಜಂಗಮ)ರು ಲೌಕಿಕ ಕರ್ಮಾಧಿಕಾರಿಗಳಾದ ಬ್ರಾಹ್ಮಣ ರೆಂತಲೂ, ಇನ್ನಿತರ ಲಿಂಗಧಾರಿಗಳು ಪಾರಮಾರ್ಥಿಕ ಬ್ರಾಹ್ಮಣ್ಯವುಳ್ಳ ದ್ವಿಜರೆಂ ತಲೂ, ಹಿಂಸಾಧರ್ಮವುಳ್ಳ ಲಿಂಗಧಾರಿಗಳು ಅಸಚ್ಛೂದ್ರ ವೃತ್ತಿಯವರೆಂತಲೂ, ಅವರಿಗೂ ಮಿಕ್ಕ ಮೃತ ಮಾಂಸ ಭಕ್ಷಕ, ಮದ್ಯಪಾಯಿ ಮೊದಲಾದ ಲಿಂಗಧಾರಿ ಗಳು ಅಂತ್ಯ ವೃತ್ತಿಯವರೆಂತಲೂ, ಶಿವಲಿಂಗಧಾರಿಗಳಾದುದರಿಂದ ಸರ್ವರೂ ಒಂದೇ ಒಂದು ವೀರಶೈವ ನಾಮದಿಂದ ಕರೆಯಲ್ಪಡತಕ್ಕವರೆಂತಲೂ ತಮ್ಮತಮ್ಮ ಭಾಷ್ಯ ಗ್ರಂಥಗಳಲ್ಲಿ ಸಾರಿರುವರು. ಶ್ರೀಕರ ಭಾಷ್ಯವನ್ನೋದಿದರೂ ನೀಲಕಂಠ ಭಾಷ್ಯಕಾರಿಕಾ ರೂಪವಾದ ಕ್ರಿಯಾಸಾರವನ್ನೋದಿದರೂ ಈ ಅಭಿಪ್ರಾಯಗಳೆಲ್ಲ ಸುಸ್ಪಷ್ಟವಾಗಿ ತಲೆದೋರುವವು. ಪ್ರಾಚೀನ ಕಾಲದವರು ಗ್ರಂಥಗಳಲ್ಲಿ ಬರೆದಿರು ವವಾದರೂ ಅದಕ್ಕೆ ಪ್ರಾಚೀನಗಳಾದ ಗ್ರಂಥಾಧಾರಗಳಿಂದಲೇ ಲೌಕಿಕದಲ್ಲಿ ಈ ವಿಧ ವಾದ ಸಂಘಟನೆಯಾಗದಿದ್ದರೆ ಮತಾಭಿವೃದ್ಧ್ಯಾಯುಷ ಶಾಸ್ತ್ರೀಯವಾದ ಪದ್ಧತಿ ಯಲ್ಲಿ ಉಳಿಯಲು ಸಾಧ್ಯವಿಲ್ಲವೆಂತಲೇ ಹಿರಿಯರು ಅನಂತ ಜಾತಿಗಳನ್ನು ಸಂಕೋ ಚಗೊಳಿಸಿದರು.

ನಮ್ಮೀಗಿನ ಚಾತುರ್ವರ್ಣ್ಯ ವಾದಿಗಳ ಅಭಿಪ್ರಾಯವಾದರೂ ಇಷ್ಟೇ. ವೀರ ಶೈವರಲ್ಲಿ ವರ್ಣಗಳಿಲ್ಲವೆಂದು ಶಾಸ್ತ್ರಮಾರ್ಗವನ್ನು ಬಿಟ್ಟು ವಾದಿಸತಕ್ಕವರೂ ಈಗ ಅಸಂಖ್ಯಾಕರಾಗಿರುವರು. ಇವರೀ ವಾದವಿಚಾರವನ್ನು ವಿಮರ್ಶಿಸುವುದಾದರೆ ಇವರಿಗೆ ವೀರಶೈವರಲ್ಲಿ ಇನ್ನೂ ನೂರಾರು ಜಾತಿಗಳೇ ಉಳಿಯಲೆಂಬ ಅಭಿಪ್ರಾಯ ವಿರುವದೆಂದು ತೋರುವದು. ಈಗ ನಡೆದಿರುವ ಏಕೀಕರಣವಾದರೂ ಹಾಗೆಯೇ ಅದೆ. ಅನಂತ ಜಾತಿಗಳನ್ನು ನಾಲ್ಕಾರರಲ್ಲಿ ಏಕೀಕರಿಸುವದು ವಿಹಿತವೋ? ಅವೆ ಲ್ಲವನ್ನೂ ಆಯಾ ನಾಮದಿಂದ ಹಾಗೆಯೇ ಇರಿಸಿ ಏಕೀಕರಣವಾಯಿತು, ಸಹ ಭೋಜನವಾಯಿತು, ಮಿಶ್ರವಿವಾಹವಾಯಿತೆಂದು ಹೇಳುತ್ತ ಸರ್ವರಿಗೂ ನಿಂದ್ಯ ವಾದ ಸಾಂಕರ್ಯದಲ್ಲಿ ಪ್ರವೇಶಿಸುವದು ವಿಹಿತವೋ ಧರ್ಮವೃದ್ಧರು ವಿಚಾರಿಸು ವದೊಳಿತು.

ಏಕೀಕರಣಾಭಿಲಾಷೆಯುಳ್ಳ ಈಗಿನ ನವೀನ ತರುಣ-ವೃದ್ಧ ಪೀಳಿಗೆಯು ತನ್ನ ತುಚ್ಛವಾದ ಕಾರ್ಯಸಾಧನೆಗಾಗಿ ಪ್ರಾಚೀನ ಪರಂಪರೆಯನ್ನೇ ಬುಡಮೇಲು ಮಾಡಲುಪಕ್ರಮಿಸಿರುವದು ಸರ್ವರಿಗೂ ಗೊತ್ತಾಗದ ವಿಷಯವಲ್ಲ. ವೀರಶೈವ ರಲ್ಲಿಯ ಅನಂತ ಜಾತಿಗಳನ್ನು ಅಲ್ಪ ಸಂಖ್ಯೆಯಲ್ಲಿ ತರಬೇಕೆಂಬ ಬಯಕೆಯುಳ್ಳ ವರ್ಣವಾದಿಗಳು ಮಾಡುತ್ತಿರುವ ಕಾರ್ಯವು ವೇದಾಗಮಾದಿ ಪ್ರಾಚೀನ ಸಿದ್ಧಾಂ ತಕ್ಕೆ ಲೇಶಮಾತ್ರವೂ ವ್ಯತ್ಯಾಸವಾಗಿಲ್ಲ. ಇಂದಿಲ್ಲನಾಳೆ ಇವರ ಪ್ರಮಾಣ ಬದ್ಧ ವಾದ ಶಾಸ್ತ್ರಮಾರ್ಗವೇ ಶಾಶ್ವತವಾಗಬಲ್ಲುದೇ ಹೊರತು ವೇದಾಗಮಗಳೆಂಬ ನೆಲಗಟ್ಟಿಲ್ಲದ ಏಕೀಕರಣವೆಂಬ ಗೃಹವು ಬಹುಕಾಲ ಬಾಳಲಾರದು. ಏಕೆಂದರೆ ನೆಲಗಟ್ಟಿಲ್ಲದ ಗೃಹವು ಜಲಪ್ರವಾಹ, ಭೂಕಂಪಗಳಿಗೆ ಮೊದಲೇ ತುತ್ತಾಗಿ ಭೂಸ ಮವಾಗುವದು ಸುಪ್ರಸಿದ್ಧವಾಗಿರುವದು. ಆದುದರಿಂದ ಈ ನೂತನವಾದ ಏಕೀ-ಕರಣವೆಂಬ ಅಭದ್ರ ಗೃಹವನ್ನು ಕ್ರಿಶ್ಚಿಯನ್ ಮೊದಲಾದ ಸುಸುಧಾರಕ ಜಲ ಪ್ರವಾಹ ಭೂಕಂಪಗಳು ಕೆಡಹುವದಿಲ್ಲವೆಂಬುದಕ್ಕೆ ಎಷ್ಟೂ ವಿಶ್ವಾಸವಿಲ್ಲ. ಈಗಾ ಗಲೇ ಇಂತಹ ಕೆಲ ಗೃಹಗಳು ಬಿದ್ದಿರುವದು ಸರ್ವರ ಕಣ್ಣಮುಂದೆ ಕಟ್ಟಿವೆ. ಆದುದರಿಂದ ಸರ್ವರೂ ನೋಡಿ ನಡೆಯುವದೇ ಉತ್ತಮಪಕ್ಷ.

ಶಿವಂ ಶಿವಂ ಶಿವಂ

---

**"ಸಂಪಾದಕೀಯ ಸೂಚನೆ":—** ಈ ವರ್ಷ ಶ್ರಾವಣವು ಅಧಿಕವಾಗಿ ಬಂದಿರುವುದರಿಂದ ನಮ್ಮ "ಧರ್ಮರಾಜ್ಯ"ವು ನಿಜಶ್ರಾವಣದ ಆರಂಭಕ್ಕೆ ಹೊರ ಡುವುದೆಂಬುದನ್ನು ಪೋಷಕ-ಸಹಾಯಕ-ಚಂದಾದಾರರೆಲ್ಲರೂ ಜ್ಞಾಪಕದಲ್ಲಿರಿಸ ಬೇಕಾಗಿ ಕೋರಿಕೆ!

**"ಸಾದರ ಸ್ವೀಕಾರ":—** ಕಾಶೀ ಶ್ರೀಜಗದ್ಗುರು ವಿಶ್ವಾರಾಧ್ಯಪೀಠದ ಗುರುಕುಲದಲ್ಲಿ ವಿದ್ಯಾಭ್ಯಾಸ ಮಾಡುತ್ತಿರುವ ಪುರದ ಮಠದ ಪಂ. ಶ್ರೀ ಚಿಕ್ಕವೀರ ಶಿವಾಚಾರ್ಯರು ಕಲಕತ್ತಾ ಯುನಿವರ್ಸಿಟಿಯ "ವೇದಾದ್ಯ" ಪರೀಕ್ಷೆಯಲ್ಲಿ ಉತ್ತೀರ್ಣರಾದ ಸಂತೋಷಕ್ಕಾಗಿ "ಧರ್ಮರಾಜ್ಯ"ದ ಪೋಷಣೆಗೆ ೧-೫೦ ಕಳು ಹಿದ್ದಾರೆ. ಶ್ರೀವಿಶ್ವಾರಾಧ್ಯರು ಸದರಿಯವರನ್ನು ಉದ್ದಾಮ ಪಂಡಿತರಾಗುವಂತೆ ಅನುಗ್ರಹಿಸಲಿ!

— ಸಂಪಾದಕ

## "ಎಲೆ ಮಾವೆ, ನೋಡಲು ಬಂದೆ"

ಲೇ:- ಷ. ಷಡಕ್ಷರದೇವ ಶಿವಾಚಾರ್ಯ ಹಿರೇಮಠ ಸೀರಲಕೇರಿ ಮಾಸಿಗಿ



ಎಲೆ ಮಾವೆ, ಈ ನಿನ್ನ ಸೊಬಗ ನೋಡಲು ಬಂದೆ ।
ಚಂದಿರ ವಸಂತನು ಬನವನಾಲಿಂಗಿಸೀ ॥
ಅಲ್ಲಲ್ಲಿ ಸುಳಿದಾಡಿ ಎಲ್ಲ ಬನಗಳ ಬಿಟ್ಟು ।
ತಲ್ಲಣಿಸಿ ನಿನ್ನಲ್ಲಿಗಿಳಿದನಾವಸಂತನೂ ॥ ॥ ೧ ॥
ಮಾವು ಅಂದರೆ ಪ್ರೇಮ ನಿನಗಿರುವದಾನಾಮ ।
ಮಾವು ನಿನಗಿನಿತು ಪ್ರಿಯಕರನು ಕರೆದನಾಮ ॥
ಮಾವಿನಾಮರವೆಂದು ಪೆಸರನೀನಾಂತಿರುವೆ ।
ಮಾವಿನಿಂಬಣ್ಣಿಪರು ಸಕಲೇತಿಹಾಸಗಳಲ್ಲಿ ॥ ॥ ೨ ॥
ವಸಂತ ಮಾಸದೊಳು ಎಸೆವ ಕುಸುಮ ಮಂಜರಿಯ ।
ಪಸರಿಸಿದ ಸುಗಂಧವನು ಸ್ವೀಕರಿಸಲುಂ ಬಂದ ॥
ಭೃಂಗಗಳ ಸಂಗದಿಮನಂಗನು ಚುಂಬಿಸಲ್ಕೆ ।
ಶೃಂಗಾರದಿಂ ಶೋಭಿಸೀ ಪಣ್ಕಾಯ್ಗಳಿಂದ ॥ ॥ ೩ ॥
ಪೆತ್ತಿರ್ದ ಪೂಗಾಯ್ಗಳ ಭಾರದಿಂ ನೀಬಾಗಿ ।
ಮುತ್ತಿರ್ದ ಮಕ್ಕಳಿಗೆ ಪಣ್ಗಾಯ್ಗಳಂ ಕೊಡುವೆ ॥
ಬಿಸಿಲಿನೊಳು ಬೇಸತ್ತು ಬೇಸರಿಕೆಯಂ ಕಳೆಯಲು ।
ಕುಸುಮದ ಹಾಸಿಗೆಯು ನಿನ್ನಡಿಯ ನೆಳಲಲ್ಲಿ ॥ ॥ ೪ ॥
ಬಂದು ಕುಳಿತಿರ್ದ ಪುಲಗಿರ್ದ ಒಕ್ಕಲ ಮಕ್ಕಳಿಗೆ ।
ಮಂದಮಾರುತನಿಂದಾನಂದನೀಗೊಳಿಸುವೆ ॥
ಎಲ್ಲ ದೇಶದೊಳೆಲ್ಲಿ ನೋಡಿದರು ನೀನಲ್ಲಿ ।
ಎಲ್ಲ ಜನರಿಗೆ ನೀಬೆಲ್ಲದಂತಿರುವೆಯಲ್ಲಿ ॥ ॥ ೫ ॥
ಬಸಿರಿನೊಳು ಬಯಸುವರು ಯುವತಿಯರು ನಿನ್ನನ್ನು ।
ಹಸುವಿನಲಿ ಬಯಸುವರು ಹಸುಗೂಸುಗಳು ನಿನ್ನಂ ॥
ರುಚಿಗೆಟ್ಟು ಬಯಸುವರು ನಿನ್ನನ್ನು ರೋಗಿಗಳು ।
ಸುಚಿಯಿಂದ ಬಯಸುವರು ನಿನ್ನನ್ನು ಯೋಗಿಗಳು ॥ ॥ ೬ ॥

ಸಕಲ ಪಶುಪಕ್ಷಿಗಳಿಗೆ ತವರುಮನೆಯಾಗಿರುವೆ |
ಸಕಲರಿಗೆ ಸಂತೋಷವನು ಕೊಡುವೆ ನೀಮಾವೆ ||
ಕಂಣ್ಗಳ್ಗೆ ರಂಜಿಸುವ ಬಂಣದಾ ಸೊಬಗನ್ನು |
ಬಂಣಿಪರು ಕವಿವರರು ನಿನ್ನನ್ನು ಕಾವ್ಯದೊಳು ||
ವರುಷಕೊಮ್ಮೆ ನೀ ಹರುಷದಿಂಬರುತಿರುವೆ |
ಪರಮೆ, ನಿನ್ನುಪಕಾರವನ್ನೆಷ್ಟು ಬಂಣಿಸಲೀ ||

---

ಶ್ರೀಮಜ್ಜಗದ್ಗುರು ಪಂಚಾಚಾರ್ಯ ದೇವತಾಭ್ಯೋನಮಃ

ಲೇಖಕ: ಓರ್ವ ಸಮಾಜ ಶೇವಕ **S M. ದೊಡ್ಡಯ್ಯ**

# ಹೊಸಪೇಟೆ ಮ. ರಾ. ರಾ. ಶ್ರೀ. ಕೈಲಾಸವಾಸಿ ಶ್ರೀಮಾನ್
# ಜ್ಯಾಲಿ ಸಣ್ಣಲಿಂಗಪ್ಪನವರ
## ಜೀವನ ಚರಿತ್ರೆಯ

( ಒಂದು ಭಾಗ )



ಸದ್ರಿ ಸಂಣಲಿಂಗಪ್ಪನವರ ಚರಿತ್ರೆಯಲ್ಲಿ ನಾನು ಕಂಡು ಕೇಳಿದ ವಿಷಯದಲ್ಲಿ ಒಂದೆರಡು ಮಾತನ್ನು ಸಮಾಜದ ಮುಂದಿಡುತ್ತೇನೆ. ಇದನ್ನು ಸಮಾಜದಲ್ಲಿ ಡುವದರಿಂದ ಸಮಾಜವು ಜಾಗ್ರತಾವಸ್ತೆಗೆ ಬರಲು ಅವಕಾಶವಿದೆ.

( ಮೊದಲು ಹೊಸಪೇಟೆಯಲ್ಲಿ ಅಂತಃಕಲಹಗಳಿಂದ ಸಮಾಜವು ಭಿನಭಿನ್ನ ವಾಗಿ ಒಡೆದು ಹೋಗಿತ್ತು. ) ಈ ಪರಿಸ್ಥಿತಿಯು ಸಮಾಜದ ಏಳಿಗಿಗೆ ಕುಂದಕ ವೆಂಹು ಸದ್ರಿಯುವರು ಮಾಡಿದ ಘನಕಾರ್ಯವೇನಂದರೆ, ಐಕ್ಯಮತ್ಯ.

ಚೆದರಿರ್ದ ವೀರಶೈವರಂ |
ಹದನದೊಳೊಂದು ಮಾಡಿತಾ ಮುಂದಾಗಿರುತಂ |
ಮೋದದಿ ಪಾಠಶಾಲೆಯಂ |
ಬಾಧಕಮಿಲ್ಲದೆ ಮಾಡಿದ ಜ್ಯಾಲಿ ಸಣ್ಣಲಿಂಗಪ್ಪಾಖ್ಯಂ ||

ಈ ಕೃತಿಯನ್ನು ಮಾಡಿದ್ದರಿಂದ ಸಮಾಜಕ್ಕಾದ ಲಾಭವೇನಂದರೆ ?

ಹಿಂದಾದ ವೀರಶೈವರ್ ।
ಮುಂದರಿತ ಬಂದರ್ಪುರಘಾಲನ ಚುನಾವಣೆಯೋಳ್ ।
ಮುಂದುದೋರದನ್ಯರ್ತಾವ್ ।
ಬಂದುಮೈತ್ರಭಾವದಲಿ ಬೆರೆದರೆಲ್ಲ ಕಾರ್ಯದಲಿ ॥

ಇದೇ ಸಮಯದಲ್ಲಿ ಪಂಡಿತ ವೇ. ಕಾಶೀನಾಥಶಾಸ್ತ್ರಿಗಳವರ ಸಹಾಯದಿಂದ ಹೊಸಪೇಟೆಯಲ್ಲಿ ಸಭೆಗಳನ್ನು ಮಾಡಿಸಿ ಶ್ರೀಮಜ್ಜಗದ್ಗುರು ಪಂಚಾಚಾರ್ಯರ ತತ್ವಗಳನ್ನು ಜನತೆಯಲ್ಲಿ ಬೇರೂರುವಂತೆ ಮಾಡಿ ಗುರುಭಕ್ತಿಯನ್ನು ಹೆಚ್ಚಿಸಿ ನೂತನ ಪುರವು ಆಚಾಚಾರ್ಯರ ಮೂಲಸ್ಥಾನವೇನೊ ಎಂಬ ಭಾವನೆಯನ್ನು ಹುಟ್ಟುವಂತೆ ಮಾಡಿದರು. ಈ ಕೃತಿಯಿಂದಾದ ಪರಿಣಾಮವೇನಂದರೆ?

ಮೂಡಿತಾನಂದವು ಬಂದು ।
ರೂಡಿಯೊಳು ವೇದಮಂತ್ರವು ನಮ್ಮದಿಹುದೆಂದು ॥
ಪಾಡಿದೆವು ವೇದವನಂದು ।
ಬೇಡಿದೆವೀಮನವಿರಲೆಂದು ಗುರುಪಾದವನಂದು ॥

ಈ ಪ್ರಕಾರ ಸಮಾಜವು ಮುಂದೋಡುತ್ತಿರಲು ಹಗಲು ಹೋಗಿ ಕತ್ತಲೆಯು ಬಂದಂತೆ ಶ್ರೀಮಾನ್ ಸಣ್ಣಲಿಂಗಪ್ಪನವರ ಮರಣವಾರ್ತೆಯು ನಮ್ಮನ್ನು ಗಾಂಡಾಂಧಕಾರದಲ್ಲಿ ಕೆಡಿವಿತು.

ಆ ಸಮಯದಲ್ಲುಂಟಾದ ಪರಿಯೇನಂದರೆ–

ಸಮಾಜ ಕಿರೀಟ ರತ್ನವು ।
ಭೂಮಿಯೊಳ್ಕಳಚಿತೆಂದಾಹಾ ಹಾಕಾರ ಮಾಡಿದೆವು ॥
ನಾಮ ನಿನ್ನುಳಿತೆಂದೆವು ।
ಸೋಮಧರ ಕೊಡೀತನಿಗೆ ಶ್ರೀಪದಮೆಂದು ಬೇಡಿದೆವು ॥

ಸಮಾಜದಲ್ಲಿ ಇಂಥ ಗುಣರತ್ನಗಳು ಹುಟ್ಟುವದು ದೈವ ಪ್ರೇರಣೆಯಾಗಿರುವದು. ಕಾರಣ ಈಗಿನ ಪರಿಸ್ಥಿತಿಯಲ್ಲಿ ನಮ್ಮ ಸಮಾಜ ಮುಖಂಡರು ಸದ್ರಿ ಶ್ರೀಮಾನ್ ಜ್ಯಾಲಿ ಲಿಂಗಪ್ಪನವರ ಧಾರ್ಮಿಕ ಸಾಮಾಜಿಕ ಮಾರ್ಗವನ್ನೇ ಮುಂದ ಮಾಡುತ್ತಾರೆಂದು, ಅದರಿಂದ ಸಮಾಜದಲ್ಲಿ ಐಕ್ಯಮತ್ಯತೆ ಹೆಚ್ಚಿ ಸಮಾಜವು

ಮುಂದು ಬರುತ್ತದೆಂಬ ನಮ್ಮ ಸಮಾಜ ಬಂಧುಗಳಿಗೂ ಮುಖಂಡರಿಗೂ ಶ್ರೀಜಗದಾಚಾರ್ಯರು ಸದ್ಬುದ್ಧಿಯನ್ನು ಕೊಡಲೆಂದು ಬೇಡುತ್ತೇನೆ.

ಹೊಸಪೇಟೆ
೨೮—೪—೩೯

---

# ಮನಗುದಿ

---

(ವಿ. ಸೂ— ಶ್ರೀ ವಿದ್ಯಾರಣ್ಯ ಗುರುಗಳು ಕನ್ನಡ ನಾಡಿನ ಆಗಿನ ಸ್ಥಿತಿಯನ್ನು ಕಣ್ಣಾರೆ ಕಂಡು, ಕಿವಿಯಾರೆ ಕೇಳಿ, ಮನಸಾರೆ ತಿಳಿದು, ತಳಮಳಗೊಂಡು, ಭುವನೇಶ್ವರೀ ಮಾತೆಯ ಪ್ರಸನ್ನತೆಗಾಗಿ ತೆಗೆದ ಉದ್ಗಾರವಿದು! ಅರ್ಥಾತ್ ಅವರ ಮನಗುದಿಯು! )

— ದ್ವಿಪದಿಗಳು —

ಮೌನಗೊಂಡಿಹುದೇಕೆ ? ಸಮಯದಲಿ ತಾಯೇ, ?
ಹೈನವಿಲ್ಲದ ತುರುವು ಮನೆಗೆ ಭೂಷಣವೇ ೧

ನಿನ್ನ ಮನೆಯಲಿ ಪರರ ಹಾವಳಿಯ ಕಂಡು ,
ನಿನ್ನ ಪುತ್ರರ ಸುಖವ ಯೋಚಿಸುವುದೆಂದು ? ೨

ಹರಿಕೆ ಹೊತ್ತಿಹೆನೀಗ ಹರಿಸು ನಮ್ಮಮ್ಮ ,
ಹರಿಸುವೆನು ಪರತಂತ್ರ ಬರುತಿರಲು ಬೊಮ್ಮ ; ೩

ಲೆಕ್ಕಿಸೆನು ಆವವನ ಬರಹ ಧೈರ್ಯವನೂ ,
ಮುಕ್ಕಣ್ಣನರಸಿ ತನು ಧಾರೆಯೆರೆಯುವೆನು . ೪

ನಿನ್ನ ಸೇವೆಯೆ ಜಗದಿ ಘನ್ನ ಭೂಷಣವು,
ಸನ್ಯಾಸ ಕೈಕೊಂಡು ವಿದಿತಗೊಂಡಿಹೆನು; ೫

ಸ್ವಾತಂತ್ರ್ಯ ಸೂರ್ಯನಿಜ ತೇಜವನು ಬೀರಿ ,
ಪಾತಕವ ಹರಿಸುವನದೆಂದು ಮಾಹೇಶ್ವರೀ . ೬

ಆಶೆ ಮಿಗಿಲಾಗಿಹುದು, ಮಾತಾಡೆ, ಜನನೀ ,
ದಾಸ್ಯ ಪಾಶದಿ ಬದ್ಧಳಿಹ ನಾಡದೇವೀ . ೭

ಅದುನೋಡು, ಭಾರತದಿ ಕನ್ನಡದ ನಾಡು ,
ಮುದಹೊರೆದು ನೆಲೆಯಾಯ್ತು ಪರತಂತ್ರ ಬೀಡು , ೮

ಸತ್ಯ ತತ್ವಾಚರಣೆ ಧರ್ಮದಗೂಡು ,
ಅತ್ತು ಹೋಗಿಹುದೀಗ ಬುಧರ ನೆಲೆವೀಡು ; ೯

ಬಿತ್ತರಿಸಿ ಫಲವಿಲ್ಲ, ಅಮ್ಮ ಗೋಮಾತೆ ,
ಕತ್ತರಿಸಿಕೊಳ್ಳುವಳು ಶಿರವ ಭೂಮಾತೆ— , ೧೦

ಹೊತ್ತಿರುವ ದೇಗುಲದ ದೇವ ಮೂರ್ತಿಗಳ ,
ಕಿತ್ತು ಬಿಸುಟುತಲಿಹರು ಏನಮ್ಮ ಕಾಲ ; ೧೧

ವಿಪರೀತ ಗತಿಯಿಹುದು ನಾಡಿನಲಿ ದಿನವೂ ,
ಉಪಕಾರಿ ಏನಿಸದಿಹ ಅಪರಾಧಿ ನಾನೂ ; ೧೨

ಕೊಡು ನೀನು ವಿಹಿತವಿರೆ ಮರಣ ದಂಡನೆಯ ,
ಮಡಿಯುವೆನು ಅಡಿಯಲ್ಲಿ ನೋಡದನ್ಯಾಯ ; ೧೩

—ಸುಭದ್ರಾತನಯ

ಜಿವರು ಬರುತ್ತಿರುವಾಗಲೂ ರಾತ್ರಿ ಒಂಭತ್ತು ಘಂಟೆಯವರೆಗೂ, ಅಪರರಾತ್ರಿ ಮೂರು ಘಂಟೆಯವರೆಗೂ, ದಪ್ಪನ್ನ ಬಟ್ಟೆಗಳನ್ನುಟ್ಟುಕೊಂಡು, ದಿನದಲ್ಲಿ ಎಷ್ಟೋ ಸಾರೆಯೂ, ಕೊಳಕಾದ ಮತ್ತು ರಾಡಿಯಾದ ನೀರಿನಲ್ಲಿಯೂ ಸ್ನಾನ ಮಾಡಬಾರದು.

ಹೀಗೆ ನಮ್ಮ ಪ್ರಾಚೀನ ಪುರುಷರು ಸೂಕ್ಷ್ಮ ದೃಷ್ಟಿಯಿಂದ ಕಂಡುಹಿಡಿದಿರುವ ಶರೀರ ರಕ್ಷಣೆಯ ವಿಷಯವು ಅತ್ಯಂತ ಗಹನವಾಗಿದೆ. ಅವರ ತಾತ್ವಿಕ ಸಿದ್ಧಾಂತವು ಸರ್ವಜಗನ್ಮಾನ್ಯವಾಗಿದೆ. ಅವರು ತೋರಿಸಿರುವ ದಾರಿಯಿಂದ ಹೋದರೆ ಯಾರಿಗೂ ಕಷ್ಟವಿಲ್ಲ. ಆದುದರಿಂದ ಪ್ರತಿಯೊಬ್ಬರೂ ಈ ವಿಷಯುಗಳನ್ನೋದಿ ಆರೋಗ್ಯವನ್ನು ಸಂಪಾದಿಸಿ ದೀರ್ಘಾಯುಗಳಾಗಿ ಬಾಳಿರೆಂದು ಹೇಳಿ ಕಟ್ಟಕಡೆಗೆ ವೀರ್ಯರಕ್ಷಣೆಯ ಸಲುವಾಗಿ ಮುಖ್ಯವಾದ ಮಾತೊಂದನ್ನು ನಮ್ಮ ವಾಚಕರ ಹಿತಕ್ಕಾಗಿ ಹೇಳುವೆವು— ಅಯ್ಯಾ! ಅಯ್ಯಾ!! ಬಿಂದುವು ಬಂಧುರವಾಗಿರಲಯ್ಯಾ! ಬಿಂದುವೇ ಬೆಳ್ಳಿ, ಬಿಂದುವೇ ಬಂಗಾರ, ಬಿಂದುವೇ ರತ್ನವಯ್ಯಾ! ಬಿಂದುವನ್ನು ತಡೆದರೆ ಬಹುಕಾಲ ಬದುಕುವಿ, ಬುದ್ಧಿಯುಳ್ಳವನಾಗುವಿ; ಮನುಷ್ಯನಾಗಿಯೇ ದೇವರೆನಿಸಿಕೊಳ್ಳುವಿ. ಬಿಂದು ಜಾರಿದರೆ ಮರಣವು ಬೇಗ ಬರುವದಯ್ಯಾ! ದುಷ್ಟ ಕಾಮಕ್ಕೆ ವಶನಾಗದಿರಯ್ಯಾ! ವ್ಯಾಯಾಮದಿಂದ ತಡೆ ಆಸನಸಾಧನೆಯಿಂದ ತಡೆ, ಬಿಂದುವನ್ನು ಮನಸ್ಸಿನಿಂದ ತಡೆಯಯ್ಯಾ! ಬಿಂದುವ ತಡೆಯದವಗೆಲ್ಲಿಯೂ ಜಯವಿಲ್ಲವಯ್ಯಾ! ಆದುದರಿಂದ ಚಿತ್ತವು ಚಂಚಲವಾಗದಿರಲಿ. ಚಿತ್ತಚಾಂಚಲ್ಯವೇ ನರಕ. ಚಿತ್ತಸ್ಥೈರ್ಯವೇ ಸ್ವರ್ಗಕಾಣೋ! ಹಿಂದಿನ ಸಂತರು ಸತ್ಸಂತಾನಕ್ಕಲ್ಲದೆ ಬೇರೆಯದಕ್ಕೆ ಬಿಂದುವಂಕಳೆದಿಲ್ಲ ಕಳೆದಿಲ್ಲ, ಎಚ್ಚರದಿಂದಿರು! ಮೋಸ ಹೋಗದಿರು ಮಗುವೇ!! ಪಾಪಿಯಾಗುವಿ!!!

ನೀನು ಕದ್ದು ಮುಚ್ಚಿ ಮಾಡುವುದೆಲ್ಲವೂ ಶ್ರೀಶೈಲ ಮಲ್ಲಿಕಾರ್ಜುನ ಲಿಂಗದಿಂ ಪುಟ್ಟಿದ ನಿರ್ಮಾಯನಾದ, ನಿತ್ಯನಿರಂಜನನಾದ, ಗುರುಸಾರ್ವಭೌಮನಾದ, ಶ್ರೀ ಜಗದ್ಗುರು ಪಂಡಿತ ಗುರುವಿಗೆ ತಿಳಿಯದಿರದು ಕಂಡ್ಯಾ!

ಸರ್ವೇ ಭದ್ರಾಣಿ ಪಶ್ಯಂತು ಸರ್ವೇ ಸಂತು ನಿರಾಮಯಾ |
ಸರ್ವೇಪಿ ಸುಖಿನಃ ಸಂತು ಮಾಕಶ್ಚಿದ್ದುಃಖಭಾಗ್ಭವೇತ್ ||

---

## ಪ್ರಕೃತಿಸಿದ್ಧ ಸಂಪತ್ತುಗಳು

ಪ್ರಕೃತಿಯ ಪ್ರಧಾನ ಸಂಪತ್ತುಗಳೆಂದರೆ ಗಾಳಿ, ನೀರು, ಅನ್ನಗಳು. ಇವುಗಳನ್ನು ಯೋಗ್ಯವಾಗಿ ಉಪಯೋಗಿಸುತ್ತ ಬಂದರೆ ಆರೋಗ್ಯವು ಅವಶ್ಯವಾಗಿ ವೃದ್ಧಿಹೊಂದುವುದು. ವಿಚಾರ ಮಾಡಿ ನೋಡಿದರೆ ಮನುಷ್ಯನು ಇವುಗಳ ಉಪಯೋಗವನ್ನು ಚನ್ನಾಗಿ ಮಾಡಿಕೊಳ್ಳುವದಿಲ್ಲವೆಂದು ಕಂಡುಬರುತ್ತದೆ. ಅನ್ನ-ನೀರುಗಳ ಸೇವನೆಗೆ ಸ್ವಲ್ಪ ಹೊತ್ತಾದರೂ ತಡೆದುಕೊಳ್ಳಬಹುದು, ವಾಯು ಸೇವನೆಗೆ ಮಾತ್ರ ಹಾಗೆ ಸಾಧ್ಯವಿಲ್ಲ; ಶರೀರದಲ್ಲಿ ವಾಯುಸಂಚಾರವು ಸ್ವಲ್ಪ ನಿಂತಿತೆಂದರೆ ಸಾಕು. ಕಣ್ಣುಗಳು ಬೆಳ್ಳಗಾಗುವವು. ಈ ವಾಯುವು ಯಾರೊಬ್ಬರ ಮನೆಯ ಗಂಟಲ್ಲ, ಇದರ ಮೇಲೆ ಎಲ್ಲರದೂ ಅಧಿಕಾರವಿದೆ. ಹೀಗದ್ದೂ ಇದನ್ನು ನಾವು ಪೂರ್ಣ ರೀತಿಯಿಂದ ಉಪಯೋಗ ಮಾಡಿಕೊಳ್ಳದೆ ನರಳುತ್ತ ಕುಳಿತಿರುವುದು ತಿಳಿಗೇಡಿತನವಲ್ಲವೇನು ? ನಾವು ಯಾವಾಗಲೂ ವಿಶಾಲವಾದ ಪ್ರದೇಶದಲ್ಲಿದ್ದುಕೊಂಡು ವಿಪುಲವಾದ ಗಾಳಿಯನ್ನು ಸೇವಿಸಿ ನೀರೋಗಿಗಳಾಗಿ ಬಾಳುವುದಕ್ಕೆ ಹಿಂಜರಿಯಬಾರದು.

ನೀರಿನ ಅವಶ್ಯಕತೆಯು ಮುಖ್ಯವಾಗಿ ಸ್ನಾನಪಾನಗಳನ್ನುದ್ದೇಶಿಸಿಕೊಂಡಿದೆ. ತಮ್ಮ ಮೈಯೊಳಗಿನ ಉಷ್ಣತೆಯು ದೂರಾಗಿ ಶಾಂತತೆಯುಂಟಾಗುವುದಕ್ಕೂ, ಅವಯವಗಳು ನಿರ್ಮಲವಾಗಿರುವದಕ್ಕೂ ಎಲ್ಲರೂ ಸ್ನಾನಮಾಡಬೇಕು. ಸ್ನಾನಕ್ಕೆ ಮುಂಚೆ ಮೈಗೆಲ್ಲಾ ಎಣ್ಣೆ ಹಚ್ಚಿಕೊಂಡು ತಲೆಕಾಲುಗಳನ್ನು ಸ್ವಲ್ಪ ಹೆಚ್ಚಾಗಿಯೂ ಕಿವಿಗಳನ್ನು ಅದಕ್ಕೂ ಸ್ವಲ್ಪ ಕಡಿಮೆಯಾಗಿಯೂ ತಿಕ್ಕಿಕೊಳ್ಳಬೇಕು. ಎಣ್ಣೆಯ ಜಿಡ್ಡು ಹೋಗುವದಕ್ಕೂ, ಕೊಳೆಯನ್ನು ಕಳೆಯುವದಕ್ಕೂ ಸೀಗೆಯ ಪುಡಿಯನ್ನು ಉಪಯೋಗಿಸುವುದು ಹೆಚ್ಚು ಬೆಲೆಯ ಸಬಕಾರದ ಉಪಯೋಗಕ್ಕಿಂತಲೂ ಹಿತಕರವಾಗಿದೆ.

ನೀರನ್ನು ಕುಡಿಯಬೇಕಾದರೂ ನಾವು ಒಂದು ಕ್ರಮವನ್ನಿಟ್ಟುಕೊಂಡಿರುವುದಿಲ್ಲ. ಆದುದರಿಂದ ಪಚನಕ್ರಿಯೆಯು ಚನ್ನಾಗಿ ನಡೆಯುವುದಿಲ್ಲ. ಬಾಯಾರಿದಾಗ ಸ್ವಾಭಾವಿಕವಾದ ನೀರನ್ನು ಬಿಟ್ಟು ಕೃತ್ರಿಮ ಪೇಯಪದಾರ್ಥಗಳನ್ನು ತೆಗೆದುಕೊಳ್ಳುವುದು ನೆಟ್ಟಗಲ್ಲ. ಇಂತಹ ಪೇಯವು ಕೇವಲ ನಾಲಗೆಗೆ ರುಚಿಯನ್ನುಂಟುಮಾಡುವುದೇ ಹೊರತು ಸ್ವಾಭಾವಿಕವಾದ ನೀರಿನಿಂದಾಗುವ ಶಾಂತಿಯನ್ನು ಎಂದಿಗೂ ಕೊಡಲಾರದು. ಕೃತ್ರಿಮ ವಸ್ತುಗಳೆಲ್ಲವೂ ಹೀಗೇ ಎಂದು ತಿಳಿಯ

ಬೇಕು. ನಾವು ಸ್ವಾಭಾವಿಕ ವಸ್ತುಗಳಿಂದಾಗುವ ಕಾರ್ಯವನ್ನು ಕೃತ್ರಿಮ ವಸ್ತುಗಳಿಂದ ಪೂರ್ಣಮಾಡಲು ಎಂದೂ ಪ್ರಯತ್ನ ಪಡಬಾರದು.

ನಾವು ಆಹಾರವನ್ನು ತೆಗೆದುಕೊಳ್ಳುವಾಗಲೂ ಅವುಗಳ ಗುಣಗಳನ್ನರಿಯದೆ ಮುಖ್ಯವಾಗಿ ಸೂಕ್ಷ್ಮತೆಯ ಕಡೆಗೆ ಚಿತ್ತಗೊಡುವೆವಾದುದರಿಂದ ಧಾನ್ಯ ಮುಂತಾದವುಗಳನ್ನು ಕುಟ್ಟಿಯೋ, ಬೀಸಿಯೋ, ಸೋಸಿಯೋ ಅವುಗಳಲ್ಲಿರುವ ಮುಖ್ಯ ಸತ್ವವನ್ನೇ ತೆಗೆದುಹಾಕುತ್ತಿರುವೆವು. ಆಹಾರದಲ್ಲಿಯ ರುಚಿಯ ಕಡೆಗೆ ಲಕ್ಷ್ಯಕೊಡದೆ ವಿಶೇಷವಾಗಿ ಗುಣದ ಕಡೆಗೆ ಲಕ್ಷ್ಯಕೊಡುವುದೇ ಒಳ್ಳೆಯದು ಒಮ್ಮೊಮ್ಮೆ ನಾವು ಹಸಿವನ್ನು ತಡೆಯಲಾರದೆ ರುಚಿಯಿಲ್ಲದ, ಗುಣವಿಲ್ಲದ ತಂಗಳು ತಿನ್ನುವುದಕ್ಕೆ ಕೂಡ್ರುವೆವು. ಇಂತಹ ಆಹಾರದಿಂದ ಬುದ್ಧಿಮಾಂದ್ಯ, ಅಗ್ನಿಮಾಂದ್ಯಗಳುಂಟಾಗಿ ನಾಲಿಗೆಯ ರಸಗ್ರಾಹಕ ಶಕ್ತಿಯು ನಷ್ಟವಾಗುವುದು. ಆ ಸಮಯದಲ್ಲಿ ನಾಲಗೆಯ ರುಚಿ ಕೆಟ್ಟಿದೆ ಎಂದು ಹುರಿದ, ಕರಿದ ಜೀನಸುಗಳನ್ನು ತಿಂದರಂತೂ ವಿಷಪಾನಕ್ಕೆ ಸಮಾನವಾಗುವುದು.

ಚನ್ನಾಗಿ ಪಚನವಾಗುವಷ್ಟು ಆಹಾರವೇ ಊಟದ ಪರಿಮಾಣವು. ಹಗುರಾದ ಆಹಾರವಿದ್ದರೆ ಹೊಟ್ಟೆತುಂಬಾ ಉಣ್ಣುವುದಕ್ಕೆ ಯಾವ ಬಾಧಕವೂ ಇಲ್ಲ. ಉಣ್ಣುವಾಗ ಪ್ರತಿಯೊಬ್ಬನೂ ತನ್ನ ಹೊಟ್ಟೆಯು ನಾಲ್ಕು ಭಾಗವಾಗಿದೆ ಎಂದು ತಿಳಿದುಕೊಂಡು ಎರಡು ಭಾಗವನ್ನು ಆಹಾರದಿಂದಲೂ, ಒಂದು ಭಾಗವನ್ನು ನೀರಿನಿಂದಲೂ ಪೂರ್ಣಮಾಡಿ ಉಳಿದೊಂದು ಭಾಗವನ್ನು ವಾಯುಸಂಚಾರಕ್ಕಾಗಿ ಬರಿದಾಗಿಡಬೇಕು. ಅನ್ನ, ನೀರು ಗಾಳಿಗಳನ್ನು ಪೂರ್ಣರೂಪವಾಗಿ ಸೇವಿಸಬಾರದು. ಮುಖದಿಂದ ಉಸಿರಾಡಿಸಲಿಕ್ಕೂ ಮೇಲೆ ಮೇಲೆ ಸ್ವಲ್ಪ ನೀರು ಕುಡಿಯುವುದಕ್ಕೂ ಹೊಟ್ಟೆಯಲ್ಲಿ ಅವಶ್ಯವಾಗಿ ಸ್ಥಳವಿರಬೇಕು. ಊಟವನ್ನು ದಿವಸದಲ್ಲಿ ಎರಡು ಸಾರೆ ಮಾಡಬೇಕೆಂಬುದೂ ಹೀಗೆ ಮಾಡಿದರೆ ಆರೋಗ್ಯವು ಸರಿಯಾಗಿರುವುದೆಂಬುದೂ ಎಲ್ಲರಿಗೂ ಗೊತ್ತು. ಆದರೆ ನವೀನ ಮಾನವಸಮೂಹವು ಈ ಎರಡೂ ಊಟಗಳ ನಡುವೆ ನಾಲ್ಕಾರು ಅಲ್ಪಾಹಾರಗಳಾಗುವುದೂ ಒಳ್ಳೆಯದೆಂದು ತಿಳಿದುಕೊಳ್ಳುತ್ತ ನಡೆದಿದೆ; ಹೀಗೆ ತಿಳಿಯುತ್ತ ನಡೆದಿರುವುದೇ ಅಪಮೃತ್ಯುವುಂಟಾಗುವುದಕ್ಕೆ ಕಾರಣವೆಂದು ನಮಗೆ ಕಂಡುಬಂದಿದೆ. ಊಟದ ವಿಷಯದಲ್ಲಿ—'ಒಪ್ಪೊತ್ತುಂಡವ ಯೋಗಿ, ಎರಡೊತ್ತುಂಡವ ಭೋಗಿ, ಮೂರೊತ್ತುಂಡವ ರೋಗಿ, ನಾಲ್ಕೊತ್ತುಂಡವನ ಸುಡುಗಾಡಿಗೆ ಹೊತ್ತುಕೊಂಡು ಹೋಗಿ' ಎಂದು ಹೇಳುವ ಇದೊಂದು ನೀತಿಪದ್ಯವನ್ನಾದರೂ ಹೊಸಬರು ಓದಿ ವಿಚಾರಮಾಡಿಕೊಂಡರೆ ಉಪಕಾರವಾಗುವಂತಿದೆ. ಹೊಟ್ಟೆ ತುಂಬಿದ ಮೇಲೂ ಊಟಮಾಡ

ತಕ್ಕವರು ೧೦೦ಕ್ಕೆ ೯೯ ರಂತೆ ಹೊರಡುತ್ತಿದ್ದಾರೆಂದು ಪರದೇಶದ ಪ್ರಸಿದ್ಧ ಡಾಕ್ಟರರೂ ಕೂಡ ಅಭಿಪ್ರಾಯಪಡುತ್ತಾರೆ. ಹೊಟ್ಟೆ ತುಂಬಿದ ಮೇಲೆ ಉಣ್ಣಬಾರದೆಂಬುದೊಂದು ಸಣ್ಣಮಾತು, ಅಕ್ಷರವನ್ನರಿಯದವನೂ ಕೂಡ ತಿಳಿದುಕೊಳ್ಳುವಂತಿದೆ; ಹೀಗಿದ್ದೂ ಓದಿದವರೂ ಈ ವಿಷಯದಲ್ಲಿ ದಾರಿದಪ್ಪುತ್ತಲಿದ್ದಾರೆಂಬುದು ಬಹಳ ಆಶ್ಚರ್ಯ! ಪಾಪ! ಮಾಡುವುದೇನು? ಆಶೆ ಅಂಥದು!

## ಆಹಾರಪರಿಜ್ಞಾನ

ಆರೋಗ್ಯ ರಕ್ಷಣೆಗೆ ಆಹಾರ ಪರಿಜ್ಞಾನವು ಅತ್ಯಾವಶ್ಯಕವಾದುದೆಂಬುದು ಸರಿಯಷ್ಟೆ? ಇನ್ನೀ ಆಹಾರ ವಿಷಯವನ್ನು ಧರ್ಮದೃಷ್ಟಿಯಿಂದ ಸ್ವಲ್ಪ ವಿಚಾರ ಮಾಡೋಣ– ಮಾನವ ಪ್ರಾಣಿಗೆ ಆಹಾರವು ಒಂದು ಪರಮಾವಶ್ಯಕವಾದ ವಸ್ತುವು "ಅನ್ನಂ ಬ್ರಹ್ಮೇತಿವ್ಯಜಾನಾತ್, ಅನ್ನಾದೇವಹಿ ಖಲ್ವಿಮಾನಿ ಭೂತಾನಿ ಜಾಯಂತೇ" ಎಂಬ ಶ್ರುತಿಗನುಸಾರವಾಗಿ ನಮ್ಮ ಶರೀರವು ಅನ್ನದ ಎರಡನೆಯ ರೂಪವಾಗಿದೆ. ಕಾರಣವು ಯಾವ ಗುಣ ಅಥವಾ ಯಾವ ಶಕ್ತಿಯಿಂದೊಡಗೂಡಿರುವುದೋ ಕಾರ್ಯವೂ ಅದೇ ಗುಣ ಅದೇ ಶಕ್ತಿಯುಳ್ಳದಾಗುವಂತೆ ನಾವು ಉಣ್ಣುವ ಅನ್ನವು ಹೇಗಿರುವುದೋ ಅದಕ್ಕನುಸಾರವಾಗಿಯೇ ಶೌರ್ಯ, ವೀರ್ಯ ರೂಪಗಳು ನಮ್ಮ ಶರೀರದಲ್ಲಿ ಉತ್ಪನ್ನವಾಗುವುವು. ಪೂರ್ವಿಕರು ಆಹಾರವಸ್ತುಗಳನ್ನು ಸಾತ್ವಿಕ, ರಾಜಸ, ತಾಮಸಗಳೆಂಬುದಾಗಿ ಮೂರು ಭಾಗ ಮಾಡಿದ್ದಾರೆ. ಸತ್ವರಜಸ್ತಮೋಗುಣಮಯವಾದ ದೇಹವು ಈ ಮೂರು ತೆರನಾದ ಆಹಾರಸಮ್ಮೇಲನದಿಂದ ಪರಿಪುಷ್ಟವಾಗುವುದು. ಕೇವಲ ಸಾತ್ವಿಕಾಹಾರದಿಂದಲೋ ಅಥವಾ ರಾಜಸ ತಾಮಸಾಹಾರಗಳಿಂದಲೋ ಒಂದೊಂದರಿಂದಲೇ ಶರೀರವು ಸ್ವಸ್ಥವಾಗಿರುವುದು ಕಡಿಮೆ. ಹೆಚ್ಚಾಗಿ ಯಾವ ಪದಾರ್ಥವನ್ನು ಊಟಮಾಡುವೆವೋ ಆ ಪದಾರ್ಥಕ್ಕೆ ಸರಿಯಾದ ಗುಣಗಳೇ ಶರೀರ ಮನಸ್ಸುಗಳಲ್ಲಿ ತುಂಬಿಕೊಳ್ಳುವವಾದುದರಿಂದ ನಮ್ಮ ಸನಾತನ ಹಿಂದೂ ಶಾಸ್ತ್ರವು ಭೋಜನವಸ್ತು ಸಂಬಂಧವಾಗಿ ಬಹು ಕಠಿಣವಾದ ವಿಧಿನಿಷೇಧಗಳ ವ್ಯವಸ್ಥೆಯನ್ನು ಮಾಡಿದೆ

ಮಾನವ ಶರೀರಕ್ಕೆ ಪಿತೃಪಿತಾಮಹ ಮಾತೃ ಮಾತಾಮಹವಂಶದ ಒಂದು ಪರಂಪರೆಯುಂಟು, ಅದಕ್ಕಾಗಿಯೇ ನಮ್ಮ ವಂಶದ ಪೂರ್ವಿಕರು ಆಚರಿಸಿಕೊಂಡು ಬಂದ ಆಹಾರಪದ್ಧತಿಯನ್ನು ನಾವೂ ಅನುಸರಿಸಬೇಕಾಗುವುದು; ಅದಕ್ಕೆ ವಿಪರೀತವಾಗಿ ನಡೆದರೆ ನಮ್ಮ ಶರೀರವು ತೇಜೋಮಯವೂ, ಸುಶಕ್ತಿಯುಕ್ತವೂ

# ಧರ್ಮರಾಜ್ಯ

ಸಂಪುಟ ೧ ❖ ಪ್ರಮಾಥಿನಾಮ ಸಂವತ್ಸರ ಶ್ರಾವಣ ❖ ಸಂಚಿಕೆ ೧೦

ಕೃತದೊಳಾ ತ್ರೇತೆಯೊಳು ದ್ವಾಪರದೊಳುಂ ಕ್ರಮದೆ ।
ಮತಿವಂತ "ನಲ-ರಾಮ-ಧರ್ಮ" ನೃಪರಿಂ ॥
ಅತಿಯಶವನಾಂತು ಬಾಳಿದ ತೆರದೊಳೀ "ಕೃಷ್ಣ- ।
ಕ್ಷಿತಿಪಾಲನಿಂ" ಬಾಳು "ಧರ್ಮರಾಜ್ಯ" ! ॥

[ವರಕವಿ ಶ್ರೀವಾಗೀಶ]



ಕರ್ನಾಟಕ ಸಿಂಹಾಸನಾಧೀಶ್ವರ ಶ್ರೀಕೃಷ್ಣರಾಜೇಂದ್ರರು

ನಮ್ಮ ಕರ್ನಾಟಕದಲ್ಲಿ ಆ ಆಳುವಿ (ಶಾವಿ)ಗೆ ಆಸ್ಪದವಿಲ್ಲ. ಒಂದು ಧರ್ಮಕ್ಕೆ ಚಂಡಿಕೆ ಬಿಡಿಸುವುದು ಧರ್ಮ. ಇನ್ನೊಂದಕ್ಕೆ ಬೋಳುದಲೆಯೆ ಪಾವಿತ್ರ್ಯದ ಕುರುಹು. ಮದುವೆಯ ಮಂಗಲ ಸಮಾರಂಭದಲ್ಲಿ ಒಬ್ಬರು ಬನ್ನಿಯ ಮರವನ್ನು ಪೂಜಿಸಿದರೆ ಇನ್ನೊಬ್ಬರು ಇಪ್ಪಿಯ ಟೊಂಗೆಯನ್ನು ಪೂಜಿಸುವರು.

ಇಂತಹ ರೂಢಿಗಳು ಏಕೆ ಉಂಟಾದವು? ಹೇಗೆ ಉಂಟಾದುವೆಂಬುವನ್ನು ಹೇಳಲಿಕ್ಕಾಗುವುದಿಲ್ಲ. ಮನುಷ್ಯನಲ್ಲಿ ತಿಳುವಳಿಕೆ ಬೆಳೆದುಬಂದಂತೆ ಕಟ್ಟು-ಕಟ್ಟಳೆಗಳಿಗೆ ಹೆಚ್ಚು ಮಹತ್ವವಿದೆ. ಅನೇಕ ಸಲ ರೂಢಿಯೇ ಕಟ್ಟಳೆ (ಕಾನೂನು)ಯಾಗಿ ಪರಿಣಮಿಸಿದೆ. ಇಂತಹ ಸಮಾಜದ ರೂಢಿ ಕಟ್ಟಳೆಗಳನ್ನು ಮುರಿದರೆ ಜನರಿಂದ ನಗೆಗೀಡಾಗುವ ಸಂಭವವಿದೆ; ಬಹಿಷ್ಕೃತರಾಗುವ ಹೆದರಿಕೆಯಿದೆ. ಇದರೊಂದಿಗೆ ದೇವರು-ದೆವ್ವಗಳ ಕಾಲವೂ ಸೇರಿ ಮನುಷ್ಯನು ಪರಂಪರಾ ಪ್ರಿಯನಾಗುತ್ತಾನೆ. ರೂಢಿಗೆ-ಸಮಾಜದ ಕಟ್ಟಳೆಗಳಿಗೆ-ತಲೆಬಾಗದ ಮಾನವನಿಲ್ಲ. ಜಗತ್ತನ್ನೇ ಗೆದ್ದು ಆಳುವ ಸಮ್ರಾಟರನ್ನು, ಸೇನಾಪತಿಗಳನ್ನು ರೂಢಿ ತನ್ನ ಗುಲಾಮರನ್ನಾಗಿ ಮಾಡಿಕೊಂಡಿದೆ.

ಇನ್ನೂ ಕೆಲವು ಮೂಢರೂಢಿಗಳನ್ನು ನೋಡಿ:– ಒಂದೇ ಸೀನುವದು, ಬೆಕ್ಕು ಅಡ್ಡಬರುವದು, ಹಲ್ಲಿ ನುಡಿಯುವದು, ವಿಶಿಷ್ಟ ಕನಸುಗಳು ಬೀಳುವದು ಇವೇ ಮೊದಲಾದುವು. ಗಂಡಸರ ಎಡಗಣ್ಣು ಹೆಂಗಸರ ಬಲಗಣ್ಣು ಹಾರಿದರೆ ಅಶುಭವಂತೆ. ಇಂತಹ ಗ್ರಹಿಕೆಗಳನ್ನು ತ್ರಿಕಾಲಾಬಾಧಿತ ಸಿದ್ಧಾಂತಗಳೆಂದು ನಂಬುವುದು ತಿಳಿಗೇಡಿತನ; ಘಾತುಕತನ. ಇಂತಹದನ್ನು ನಂಬಿ ಹಾಳಾದವರ ಉದಾಹರಣೆಗೆ ಕೊರತೆಯಿಲ್ಲ. ಹಗೆಗಳು ಮೈಮೇಲೆ ಏರಿಬಂದಾಗ ಆತ್ಮ ಸಂರಕ್ಷಣೆಯ ಉಪಾಯಗಳನ್ನು ಯೋಜಿಸದೆ, ಮುಹೂರ್ತ ನೋಡುವುದು, ಶತಚಂಡಿ ಹೋಮ ಮಾಡುವುದರಲ್ಲಿ ಕಾಲ ಕಳೆಯುವುದು ಆತ್ಮಘಾತಕವಲ್ಲದೆ ಮತ್ತೇನು ? ಒಮ್ಮೆ ಟೀಪುಸುಲ್ತಾನನು ಯುದ್ಧದಲ್ಲಿ ತನಗೆ ಗೆಲುವಾಗುವುದಕ್ಕೆ ಹೋಮ ಹವನಾದಿಗಳನ್ನು ಮಾಡಬೇಕೆಂದು ಶೃಂಗೇರಿ ಪೀಠದವರಿಗೆ ಪ್ರಾರ್ಥಿಸಿಕೊಂಡಂತೆ ಕಾಗದ ಪತ್ರಗಳು ಈಗ ದೊರೆತಿವೆ.

ಮೊದಲು ಅತಿ ಪ್ರಾಚೀನಕಾಲದಲ್ಲಿ ನಮ್ಮ ನಾಡಿನಲ್ಲಿ ಹತ್ತಿ ಗೊತ್ತಾಗಿರಲಿಲ್ಲ. ಉಣ್ಣೆಯ ಬಟ್ಟೆಯೇ ಬಟ್ಟೆ. ಯಜ್ಞಗಳಲ್ಲಿ ಸೋಮರಸವನ್ನು ಸೋಸುವುದಕ್ಕೆ ಉಣ್ಣೆಬಟ್ಟೆ ಉಪಯೋಗಿಸುತ್ತಿದ್ದರು. ಆದರಿಂದ ಉಣ್ಣೆಯ ಸಣ್ಣ ಎಳೆಗಳು ಸೋಮರಸದಲ್ಲಿ ಬೆರೆತುಕೊಳ್ಳುವುದು ಅನಿವಾರ್ಯ. ಹೀಗಾಗಿ ನೂಲಿನ ಬಟ್ಟೆಯಿಂದ ಸೋಸಲು ಪ್ರಾರಂಭಿಸಿದರು. ಆದರೂ ಸಂಪ್ರದಾಯವಂತರಾದ ಅವರು ನೂಲಿನ ಬಟ್ಟೆಯ ಅಂಚಿಗೆ ಉಣ್ಣೆಯನ್ನು ಅಂಟಿಸುವದನ್ನೆ ಮರೆತಿಲ್ಲ.

ನಮಗೆ ಸೂಜಿ ಗೊತ್ತಾಗುವುದಕ್ಕಿಂತ ಮುನ್ನ ಹೊಲಿವ ಬಟ್ಟೆಗಳಿರಲಿಲ್ಲ. ಸೂಜಿ–ಬಂದು ಹೊಲಿದ ಕೋಟು–ಶರ್ಟುಗಳನ್ನು ತಯಾರಿಸಿತು. ಬೇಡ ಬೇಡ ವೆನ್ನುತ್ತ ಎಲ್ಲರೂ ಅವನ್ನು ಧರಿಸಲಾರಂಭಿಸಿದರು. ಆದರೆ, ವೈದಿಕ ಸಂಪ್ರದಾಯ ಶರಣರು, ಈಗ್ಯೂ ಧೋತರಗಳನ್ನುಟ್ಟು ಧೋತರ ಹೊದೆದುದನ್ನು ತಾವು ಈಗಲೂ ಅಪರೂಪವಾಗಿ ನೋಡಬಹುದು. ಇಷ್ಟೇ! ಸೂಜಿ ಸೊಂಕಿದ ಬಟ್ಟೆ ಮಡಿಗೆ ಬರಲಾರದು.

ರಾಟೆಯು ನಮ್ಮ ನಾಡಿನ ದೈವತ. ಗಿರಣಿಗಳಿಲ್ಲದಾಗ ನಮ್ಮ ನಾಡಿನ ನಾಗರಿಕರ ಮಾನವನ್ನು ಕಾಯುತ್ತಲಿತ್ತು. ಅದಕ್ಕಾಗಿ ರಾಟೆ ಪೂಜೆ ಪ್ರಚಾರದಲ್ಲಿ ಬಂದಿತು. ಅದಕ್ಕಾಗಿ ಒಂದು ವಿಶಿಷ್ಟ ದಿನವನ್ನು ಗೊತ್ತು ಮಾಡಲಾಯಿತು. ಭಾದ್ರಪದ ಶುದ್ಧ ಅಷ್ಟಮಿಗೆ ದಾರದ ಅಷ್ಟಮಿ ಎಂದು ಹೆಸರಿಸಲಾಯಿತು. ಅಂದು ಒಕ್ಕಲು ಮಕ್ಕಳ ಮನೆಯಲ್ಲಿ ರಾಟೆಪೂಜೆ ನಡೆಯುವುದು ಹೆಣ್ಮಕ್ಕಳು ದಾರವನ್ನು ಪೂಜಿಸಿ ಕೊರಳಲ್ಲಿ ಧರಿಸುವುದುಂಟು. ಗಿರಣಿಗಳು ಬಂದು ರಾಟೆಗಳು ಅಟ್ಟಕ್ಕೇರಿದವು. ಅವುಗಳ ಧೂಳು ಜಾಡಿಸಿ ತಂದು ಪೂಜಿಸುವ ಪರಿಪಾಠ ಮಾತ್ರ ಈಗ ಉಳಿದಿದೆ. ಆದರೂ ಮಹಾತ್ಮಾಜೀಯವರ ಪರಿಶ್ರಮದಿಂದ ರಾಟೆಗಳು ಕಳೆದುಕೊಂಡ ಮಹತ್ವವನ್ನು ಮತ್ತೆ ಮರಳಿ ಪಡೆಯಲಾರಂಭಿಸಿವೆ.

ನಮ್ಮ ನಾಡಿನವರಿಗೆ ಹತ್ತಿ ಗೊತ್ತಾಗುವದಕ್ಕಿಂತ ಮೊದಲು ಉಣ್ಣೆ; ಅದಕ್ಕಿಂತಲೂ ಮೊದಲು ನಾರುಬಟ್ಟೆಗಳು. ನಾರು ಬಟ್ಟೆಗಳನ್ನು ಮರದ ತೊಗಟೆಗಳಿಂದ ಮಾಡುತ್ತಿದ್ದರು. ಅವುಗಳೇ ವಲ್ಕಲಗಳು (ಜಾಡಿ) ಗಳು. ಜಾಡಿಗಳನ್ನು ತಯಾರಿಸುವವರೇ ಜಾಡರು. ಅವರ ಆರಾಧ್ಯ ದೈವತವು ಬನದಮ್ಮ ಬನದೇವತೆ. ಆ ಬನದೇವತೆಯೇ ಇಂದಿನ ಬದಾಮಿಯ ಬನಶಂಕರಿ

ಕೆರೆಗೆ ಹಾರಕೊಡುವದು ನಮ್ಮಲ್ಲಿ ಬಹು ಹಿಂದಿನಿಂದಲೂ ನಡೆದುಬಂದ ರೂಢಿ. ಕೆರೆಗೆ ನೀರು ಬೀಳಲಿಲ್ಲವೆಂದರೆ, ಆ ಊರ ಗೌಡನ ಮಗಳನ್ನೋ ಸೊಸೆಯನ್ನೋ ಕೆರೆಗೆ ಹಾರಕೊಡಬೇಕು. ಅವಳು ನಗುನಗುತ್ತ ಜನತೆಯ ಹಿತಕ್ಕಾಗಿ ಸಾವನ್ನೊಪ್ಪಿಕೊಳ್ಳಬೇಕು. ಹಿಂದಕ್ಕೆ ಹಂಪಿ ವಿರೂಪಾಕ್ಷ ದೇವಾಲಯದ ಮುಂದಿನ ಗೋಪುರವನ್ನು ಕಟ್ಟುವಾಗ್ಗೆ ಅದು ಮತ್ತೆಮತ್ತೆ ಕಡಿದುಕೊಂಡು ಬೀಳುತ್ತಿದ್ದಿತಂತೆ. ಆಗ ಒಬ್ಬ ಗೃಹಸ್ಥರಿಗೆ ಸ್ವಪ್ನವಾಗಿ ಅವರ ಮಗಳನ್ನು ಆ. ಕಟ್ಟಡದಲ್ಲಿರಿಸಿ ಕಟ್ಟಿದರಂತೆ. ಅದು ಗಟ್ಟಿಗೊಂಡು ನಿಂತಿತಂತೆ! ಇಂತಹದೇ ಒಂದು ಉದಾಹರಣೆ ಮುಂಬ

ಯಿಯ ಕೆರೆಯನ್ನು ಕಟ್ಟುವಾಗ್ಗೆ ಕೆರೆಗೆ ಗೌಡನ ಮಗಳನ್ನು ಆಹಾರವಾಗಿ ಕೊಡಬೇಕಾಯಿತೆಂದು ಉಲ್ಲೇಖವಿದೆ.

ಮೀಸೆಗೆ ನಮ್ಮ ನಾಡಿನಲ್ಲಿ ಎಂದಿನಿಂದಲೂ ಪ್ರಶಸ್ತ್ಯವಿದೆ. ಮೀಸೆಯನ್ನು ನಮ್ಮ ಹಿಂದಿನ ಕವಿಗಳು ನಾನಾತರನಾಗಿ ವರ್ಣಿಸಿದ್ದಾರೆ. ಪಂಪನು ದ್ರೋಣಾಚಾರ್ಯರಿಂದ- ನಿನ್ನಂ ಕಟ್ಟಿ ತರೆದೊಟ್ಟದಿದ್ದರೆ, ನಾಂ ಮೀಸೆ ಪೊತ್ತುದೇಕೆ? ಎಂದು ಹೇಳಿಸಿದ್ದಾನೆ. ಹುಲಿಯ ಬೇಟೆಯನ್ನಾಡಬಲ್ಲವನೇ ಗಲ್ಲಮೀಸೆ (ಕಲ್ಲಿಮೀಸೆ) ಗಳನ್ನಿಟ್ಟುಕೊಳ್ಳಬೇಕೆಂದು ಈಗಲೂ ಕೊಡಗಿನಲ್ಲಿ ಪ್ರತೀತಿಯುಂಟು.

ಶಾರದಾ ಕಾನೂನಿನಿಂದ ೧೪ ವರ್ಷಕ್ಕಿಂತ ಚಿಕ್ಕ ಹೆಣ್ಣುಕ್ಕಳ ಮದುವೆ ಮಾಡಿ ವರೆ ಸೆರೆಮನೆಸೇರಬೇಕಾಗುವುದು. ಆದರೆ ಇಂದಿನ ಮದುವೆ ಮಂಟಪದಲ್ಲಿ ವಧುವು ೧೪ರಿಂದ ಎಷ್ಟೋ ಹೆಚ್ಚಿನ ವಯಸ್ಸಿನದಿದ್ದರೂ ಭಟ್ಟರು "ಅಷ್ಟ ವರ್ಷ ಭವೇತ್ ಕನ್ಯಾ" ಎಂಬ ತಮ್ಮಮಂತ್ರದಲ್ಲಿ ಮಾರ್ಪಾಟು ಮಾಡಿಕೊಂಡಿಲ್ಲ.

ಲಿಂಗಕ್ಕೂ ಶಿವನಿಗೂ ಸಂಬಂಧವಿಲ್ಲ. ರುದ್ರಾಧ್ಯಾಯದಲ್ಲಿ ರುದ್ರ—ಶಿವನಿಗೆ ಲಿಂಗವೆಂದು ಎಲ್ಲಿಯೂ ವರ್ಣಿಸಿಲ್ಲ. ಆದರೂ ಇಂದು ಲಿಂಗವೇ ಶಿವನೆಂಬ ಕಲ್ಪನೆಯೇ ಇಂದು ರೂಢವಾಗಿ ಬಿಟ್ಟಿದೆ. ಶಿವನು ದ್ರಾವಿಡರ ದೇವತೆ! ಲಿಂಗವು ಆಸ್ಟ್ರೋ-ಏಶಿಯಾಟಿಕ್‌ದವರ ಮಾತು. ಆದರೆ ಆರ್ಯತನದ ಅಭಿಮಾನಿಗಳೆಲ್ಲರೂ ಶಿವ—ಲಿಂಗವನ್ನು ಅಭಿಮಾನದಿಂದ ಅರ್ಚಿಸುತ್ತಿರುವುದು ಕಂಡುಬರುತ್ತಿದೆ.

ಒಟ್ಟಿನ ಮೇಲೆ ರೂಢಿಯ ದಾಸರಾಗದೆ ಸಂಪ್ರದಾಯ ಶರಣರಾಗದೆ, ಅಂದಿನ ಇಂದಿನ ಜೀವನದೊಡನೆ ಸಮರಸವಾಗಿ ಹೊಂದಿಕೊಂಡು ಹೋಗುವುದೊಳಿತು. ಹಳೆಯದೆಲ್ಲ ಹೊನ್ನು ಎಂದು ಹೇಳುವವರು ಇದ್ದಾರೆ. ಹಳೆಯದೆಲ್ಲ ಹೊಲ್ಲ—ಹೇಸಿ ಎಂದು ಅತಿರೇಕವಾಗಿ ಮಾತನಾಡುವವರ ತಲೆತೂಕ ತಪ್ಪಿರಬೇಕು.

ವೀರಶೈವ ಸಂಸ್ಕೃತಿ, ಜೈನ ಸಂಸ್ಕೃತಿ, ಬ್ರಾಹ್ಮಣ ಸಂಸ್ಕೃತಿ ಎಂದು ನಮ್ಮ ಸಂಸ್ಕೃತಿಯನ್ನು ಪಂಗಡ ಪಂಗಡಗಳು ವಿಂಗಡಿಸಿ ನಮ್ಮ ಸಮಾಜವು ಹೆಚ್ಚು, ನಮ್ಮ ಧರ್ಮ ಹೆಚ್ಚು ಎಂಬ ಸಂಕುಚಿತ ಭಾವನೆಯು ನಮ್ಮಲ್ಲಿಂದ ತೊಲಗಬೇಕು. ಅದುವೆ ಮಾನವ ಸಂಸ್ಕೃತಿ ನಮ್ಮ ನಾಡಿಗನುಗುಣವಾಗಿ ನಾವು ಕಾರ್ಯ ಮಾಡಬೇಕು. ಅದುವೇ ನಮ್ಮ ಗುರಿ.

—: ಶ್ರೀ :—

# ಕರ್ನಾಟಕ ಸಾಹಿತ್ಯ ಪ್ರಪಂಚ



ಶ್ರೀಶವಿರಚಿತವಾದ ಈ ಚರಾಚರಾತ್ಮಕ ಶೃಷ್ಟಿ–ಪ್ರಪಂಚದಲ್ಲಿ, ಮನುಷ್ಯ ಪ್ರಾಣಿಯು ಅಗ್ರಸ್ಥಾನವನ್ನು ಅಂಗೀಕರಿಸಿರುವದು ಸರ್ವರಿಗೂ, ಗೊತ್ತಿದ್ದ ಸಂಗತಿಯಾಗಿದೆ. ಈ ಅಗ್ರಗಣ್ಯತೆಯು, ಸಿಕ್ಕದ್ದು, ಕೇವಲ ಸುಸಂಸ್ಕೃತ ಬುದ್ಧಿ ಸಾಮರ್ಥ್ಯದಿಂದ. ಮೂಲಬುದ್ಧಿಯನ್ನು ಸುಸಂಸ್ಕೃತವಾಗಿ ಮಾಡುವ ಸಾಧನವೇ ವಾಂಙ್ಮಯವು.

ಇನ್ನು ಈ ವಾಂಙ್ಮಯದಲ್ಲಿ ಶಾಸ್ತ್ರೀಯವಾಂಙ್ಮಯ, ಸಾಹಿತ್ಯವಾಂಙ್ಮಯ ವೆಂದು ಎರಡು ಬಗೆಯಾಗಿ ವಿಂಗಡಿಸಿ, ವೇದ, ಶ್ರುತಿ, ಉಪನಿಷದಾದಿಗಳನ್ನು ಶಾಸ್ತ್ರೀಯ ವಾಂಙ್ಮಯಕ್ಕೂ, ಪದ, ಪದ್ಯ; ಜನಪದಸಾಹಿತ್ಯ, ವಚನ, ಪ್ರವಚನಗ ಳನ್ನು ಸಾಹಿತ್ಯ ವಾಂಙ್ಮಯಕ್ಕೂ ಸೇರಿಸಬಹುದು. ಇವುಗಳಂತೆ ನಮ್ಮ ಕನ್ನಡ ದಲ್ಲಿಯಾದರೂ, ಧಾರ್ಮಿಕ ಮತ್ತು ಲಾಕ್ಷಣಿಕ ಗ್ರಂಥಗಳನ್ನು ಶಾಸ್ತ್ರೀಯ ವಾಂಙ್ಮ ಯಕ್ಕೆ ಬಿಟ್ಟು ಪ್ರಸ್ತುತ ವಿಷಯವಾದ ಸಾಹಿತ್ಯ ವಾಂಙ್ಮಯದ ಕಡೆಗೆ ಸಾಗುವ.

ಮಾನವ ಪ್ರಪಂಚವು ಹೇಗೆ ಪಂಚಭೂತಾತ್ಮಕವಾಗಿರುವದೊ, ಹಾಗೆಯೆ ಸಾಹಿತ್ಯ ಪ್ರಪಂಚವಾದರೂ ಪದ, ಪದ್ಯ, ಜನಪದ ಸಾಹಿತ್ಯ, ವಚನ, ಪ್ರವಚನ ಗಳೆಂಬ ಪಂಚಮುಖಗಳಿಂದ ಜನಜೀವನವನ್ನು ವಿಕಾಶಗೊಳಿಸುತ್ತಿರುವದು. ಸಾಹಿತ್ಯವೆಂದರೆ, ಕೆಲವರು ಛಂದೋಬದ್ಧವಾದ ಕಾವ್ಯ ಗ್ರಂಥಗಳೆಂದೂ, ಬೇರೆ ಕೆಲವರು ಭಾಷೆಯೇ ಸಾಹಿತ್ಯವೆಂದೂ ಅಭಿಪ್ರಾಯ ಪಡುವರು. ಈ ಉಭಯ ಅಭಿಪ್ರಾಯುಗಳನ್ನೂ ಸಂಯೋಗಿಸಿ, ಸವಿನುಡಿಯೇ ಸಾಹಿತ್ಯವೆಂದು ಕರೆಯು ವದು ಹೆಚ್ಚು ಸಮಂಜಸವಾಗಿ ತೋರುವದು.

ಕಾವ್ಯ ಮತ್ತು ಕವಿ:— ಸಾಹಿತ್ಯವು ಪಂಚವಿಧವಾಗಿ ಪರಿಣಯಿಸಿರುವ ದೆಂದು ಮೇಲೆ ಉಲ್ಲೇಖಿಸಿದೆ. ಆ ಪಂಚವಿಧದಲ್ಲಿ ಇಂಥದೇ ಶ್ರೇಷ್ಠವೆಂದೆಣಿಸಿ ಡರೆ, ಉಳಿದ ಸಾಹಿತ್ಯಾಂಗಗಳನ್ನು ಅಲ್ಲಗಳೆದಂತಾಯಿತೆಂದು ಮಾತ್ರ ಊಹಿಸಲಾ

ಗದು. ಒಂದುಬಗೆಯ ಗ್ರಂಥದಿಂದ ಮನಸ್ಸಿಗೆ ಆನಂದವಾದರೆ, ಮತ್ತೊಂದು ಬಗೆಯ ಗ್ರಂಥದಿಂದ ಮನಸ್ಸಿಗೂ, ಕಿವಿಗೂ ಒಂದೇ ಕಾಲಕ್ಕೆ ಆನಂದವಾಗುವದು ಅಂದ ಮೇಲೆ ಒಂದಕ್ಕಿಂತ ಎರಡು ಇಂದ್ರಿಯಗಳನ್ನು ಆನಂದಗೊಳಿಸುವ ಗ್ರಂಥವು ಹೆಚ್ಚಿನದೆಂದು ಅಂದಲ್ಲಿ ತಪ್ಪಾಗಲಿಕ್ಕಿಲ್ಲ. ಇದರಂತೆ ಸಾಹಿತ್ಯ ಪಂಚಾಂಗಗಳಲ್ಲಿಯೂ, ಕೆಲವು ಕೇವಲ ಮನಸ್ಸಿಗೂ, ಕೆಲವು ಮನಸ್ಸಿಗೂ ಕರ್ಣಕ್ಕೂ ಒಂದೇ ಸಮಯಕ್ಕೆ ಆನಂದವನ್ನೀಯುವ ಗ್ರಂಥಗಳು ಅಡಕವಾಗಿವೆ. ಕರ್ಣಾನಂದವು ಲಭಿಸಬೇಕಾದರೆ, ಅದರಲ್ಲಿ ಗಾಯನಾಂಶವು ಮಿಶ್ರವಾಗಿರಬೇಕೆಂದು ಸಹಜವಿದೆ.

ಈ ಮೇರೆಗೆ ಸಾಹಿತ್ಯ ಪಂಚಾಂಗಗಳಲ್ಲಿ ಗಾಯನಮಿಶ್ರಿತ ಸಾಹಿತ್ಯವೆಂದೂ, ವಾಚಕ ಸಾಹಿತ್ಯವೆಂದೂ ವಿಂಗಡಿಸಿ, ಮೊದಲಿನ ಮೂರು ( ಪದ, ಪದ್ಯ, ಜನಪದ ಸಾಹಿತ್ಯ ) ಬಗೆಯ ಸಾಹಿತ್ಯಗಳನ್ನು ಗಾಯನಮಿಶ್ರಿತ ಸಾಹಿತ್ಯಕ್ಕೂ, ಉಳಿದ ವಚನ ಪ್ರವಚನಗಳನ್ನು ವಾಚಕ ಸಾಹಿತ್ಯಕ್ಕೂ ಸೇರಿಸೋಣ. ಆ ಗಾಯನ ಮಿಶ್ರಿತ ಸಾಹಿತ್ಯವೇ ಕಾವ್ಯವೆಂದೂ, ಅದರ ಕರ್ತೃವೇ ಕವಿ ಎಂದೂ, ಸಾಮಾನ್ಯವಾಗಿ ವ್ಯಾಖ್ಯೆಯನ್ನು ಕಟ್ಟಬಹುದು.

ಇಷ್ಟರಿಂದಲೇ ಕಾವ್ಯ ಮತ್ತು ಕವಿಯ ಸ್ಪಷ್ಟೀಕರಣವು ಮುಗಿದಂತಾಗಲಿಲ್ಲ. ಆ ಗಾಯನ ಮಿಶ್ರಿತವಾದ ( ಕಾವ್ಯ ) ಸಾಹಿತ್ಯವೆಂದರೆ ಆವುದು? ಅದರ ಪರಿಮಿತಿ ಏನು? ಸಾಹಿತ್ಯಾನ್ವರ್ಥಕವಾದ ಸವಿನುಡಿಯಾವದು? ನುಡಿಗೆ ಸವಿಯುಂಟಾಗಬೇಕಾದರೆ, ಶಬ್ದ ಯೋಜನೆ ಹೇಗೆ? ಇವೆಲ್ಲ ನಮ್ಮ ಸಂಶಯಕ್ಕೆ ಪೂರ್ವಜರ ಆಧಾರವೇನಾದರೂ ಸಿಕ್ಕುವದೋ? ಅಥವಾ ನಾವೇ ಶೋಧಿಸಬೇಕೋ ಎಂಬ ಅನೇಕ ವಿಧವಾದ ಪ್ರಶ್ನಗಳು ನನ್ನಂತೆ ವಾಚಕರನ್ನೂ ಕೆಣಕಬಹುದು. ಇದಕ್ಕೆ ನಮ್ಮ ಸಾಹಿತ್ಯದ ಪೂರ್ವೇತಿಹಾಸದ ಕಡೆಗೆ ಕಣ್ದೆರೆದು ನೋಡಬೇಕಲ್ಲದೆ ಅನ್ಯ ಗತಿಯಿಲ್ಲ.

## ಪ್ರಾಚೀನ ಕಾವ್ಯಗಳು

೧. **ಪದ ಸಾಹಿತ್ಯ:—** ಇದು ಕನಕದಾಸ, ಪುರಂದರದಾಸ ಮೊದಲಾದ ಭಗವದ್ಭಕ್ತರಿಂದ ಲಯಗಾಯನವನ್ನನುಸರಿಸಿ ರಚಿಸಲ್ಪಟ್ಟು ಇಂದಿಗೂ ಜನಜೀವನವನ್ನು ವಿಕಾಸಗೊಳಿಸುತ್ತಿರುವದು. ಒಂದು ಬಗೆಯ ಉದಾತ್ತ ಭಾವನೆ ಕೇಳುವವರ ಕಣ್ಮನಗಳನ್ನು ಸೆಳೆಯುವ ನಯವಾದ ಕೋಮಲಸ್ವರ, ನಿಯಮಿತತ್ವ ಪರಂಪರಾನುಗತವಾದ ಆದಿಪ್ರಸಾದ ಸಹಜತೆ, ಮೊದಲಾದವುಗಳು ಈ ಪದಸಾಹಿತ್ಯದಲ್ಲಿ ತುಂಬುತುಳುಕುತ್ತಿರುವವು.

೩. ಪದ್ಯ ಸಾಹಿತ್ಯ:— ಇದರ ಪೂರ್ವೇತಿಹಾಸವನ್ನು ಪರಿಶೀಲಿಸಿದರೆ ಕನ್ನಡ ಪದ್ಯಸಾಹಿತ್ಯವು ದ್ರವಿಡ ಭಾಷೆಯ ಆಧಾರದಿಂದ ವಿಕಚಿತವಾದುದೆಂದು ಕಂಡುಬರುವದು. ತದನಂತರ ಉತ್ತರದಲ್ಲಿದ್ದ ಆರ್ಯರ ಸಂಸರ್ಗದಿಂದ ಇದರಲ್ಲಿ ಸಂಸ್ಕೃತ ಛಂದಸ್ಸುಗಳು ಮಿಶ್ರವಾಗಿ ದ್ರವಿಡ ಭಾಷಾ ಸಂಸ್ಕೃತಿಯು ಕಡಿಮೆಯಾಯಿತು. ಮುಂದೆ ಆಗಿನ ಸ್ಥಿತಿಗತಿಗನುಸಾರವಾಗಿ ನೃಪತುಂಗನು (ಕ್ರಿ. ಶ. ೯ನೇ ಶತಮಾನ) ಕವಿರಾಜ ಮಾರ್ಗವೆಂಬ, ಲಾಕ್ಷಣಿಕ ಗ್ರಂಥವನ್ನು ಬರೆದನು, ನಂತರ ನಾಗವರ್ಮ (ಕ್ರಿ. ಶ. ೧೨ನೇ ಶತಮಾನ) ಮಾಧವ (ಕ್ರಿ. ಶ. ೧೫ನೇ ಶತಮಾನ) ಮೊದಲಾದ ಕವಿಗಳು ಸಂಸ್ಕೃತ ಛಂದಸ್ಸಿನ ಆಧಾರದಿಂದ ಕನ್ನಡ ಕಾವ್ಯಗಳ ಲಾಕ್ಷಣಿಕ ಗ್ರಂಥಗಳನ್ನು ರಚಿಸಿದರು. ಇಷ್ಟರಲ್ಲಿಯೇ ಹರಿಹರ ರಾಘವಾಂಕರಿಂದ ( ಕ್ರಿ. ಶ. ೧೩ನೇ ಶತಮಾನ ) ಕನ್ನಡ ಛಂದಸ್ಸಿನಲ್ಲಿ ಷಟ್ಪದಿಗಳೆಂಬ ಹೊಸ ಮಾತ್ರಾ ವೃತ್ತಗಳು ಸೇರಿಸಲ್ಪಟ್ಟವು. ಮುಂದೆ ಈ ಷಟ್ಪದಿಗಳಲ್ಲಿಯಾದರು ಅನೇಕ ಬ್ರಾಹ್ಮಣ ವೀರಶೈವಾದಿ ಕವಿಗಳು ಅನೇಕ ಗ್ರಂಥಗಳನ್ನು ರಚಿಸಿ ಕನ್ನಡಮಾತೆಯನ್ನು ತಣಿಸಿದರು. ಆದರೆ ಸಂಸ್ಕೃತ ಛಂದಸ್ಸಿನ ಅಕ್ಷರ ವೃತ್ತಗಳ ಕನ್ನಡ ಕಾವ್ಯವಾದಿಗಳು ಕಡಿಮೆಯಾಗದೆ ತಮತಮಗೆ ರುಚಿಸಿದಂತೆ ಉಭಯ ಪದ್ಧತಿಯಲ್ಲಿಯೂ ಕಾವ್ಯಗಳು ರಚಿತವಾಗುತ್ತ ೧೯ನೇ ಶತಮಾನದ ವರೆಗೂ ಅಂದರೆ ಸಮಾರು ೧,೦೦೦ ವರ್ಷಗಳ ವರೆಗೂ ಪೌಢಾವಸ್ಥೆಯಲ್ಲಿದ್ದವೆಂದು ಹೇಳಬಹುದು.

ಈ ಎಲ್ಲ ವಿವರಣೆಯಿಂದ ಸುಮಾರು ೯ನೇ ಶತಮಾನದಿಂದ ೧೯ನೇ ಶತಮಾನದ ವರೆಗಿನ ಸಹಸ್ರವರ್ಷಾವಧಿಯಲ್ಲಿ ಕನ್ನಡ ಛಂದಸ್ಸು ದ್ರವಿಡ ಛಂದಸ್ಸಿನಿಂದಲೂ, ಸಂಸ್ಕೃತ ಛಂದಸ್ಸಿನಿಂದಲೂ ರೂಪಾಂತರ ಹೊಂದಿದ್ದಲ್ಲದೆ ಹರಿಹರ ರಾಘವಾಂಕರಿಂದ ಮತ್ತೆ ಬಿನ್ನ ರೂಪವನ್ನು ಹೊಂದಿತೆಂದಂತಾಯಿತು. ಅಂತೂ ಕನ್ನಡ ಪದ್ಯ ಛಂದಸ್ಸು ೧೯ ನೇ ಶತಮಾನದ ಅವಧಿಯಲ್ಲಿ ೩ ಸಲ ಕ್ರಾಂತಿಗತವಾದಂತಾಯಿತು.

ಕ್ರಾಂತಿಕಾರರು ಕಾಯ್ದ ಕನ್ನಡದ ವೈಶಿಷ್ಟ್ಯ:— ಕನ್ನಡದ ವೈಶಿಷ್ಟ್ಯವಾದುದೆಂಬುದನ್ನು ನಿರ್ಣಯಿಸುವದೊಂದು ಇಲ್ಲಿ ಮಹತ್ತರವಾದ ಕೆಲಸವು ಉಳಿದಿದೆ. ಸದ್ಯ:ಕಾಲವಾದರೂ ಭಾಷಾಕ್ರಾಂತಿಯದಿದ್ದುದರಿಂದ ಇದನ್ನು ನಿರ್ಣಯಿಸುವದು ಎಷ್ಟು ಅವಶ್ಯವಿದೆಯೋ ಅಷ್ಟೇ ಕಠಿಣವೂ ಅದೆ. ಕನ್ನಡವು ದ್ರವಿಡ ಛಂದಸ್ಸಿನಿಂದ ಸಂಸ್ಕೃತ ಛಂದಸ್ಸಿಗೆ ರೂಪಾಂತರ ಹೊಂದಿತೆಂದು ಹಿಂದೆ ಹೇಳಿದೆ. ಸಂಸ್ಕೃತ ಕವಿಗಳೂ ಉಪಮಾದ್ಯಾಲಂಕಾರಗಳನ್ನು ಛಂದೋಬದ್ಧತೆಯನ್ನೂ ಅನುಸರಿಸಿರುವರೇ ವಿನಾ ಪ್ರಾಸದ ಪ್ರಾಮುಖ್ಯತೆಯು ಅವರ ಕೃತಿಯಲ್ಲಿ ಕಂಡುಬರುವ

ದಿಲ್ಲ. ಅದರಂತೆ ಸಂಸ್ಕೃತದಿಂದ ಕನ್ನಡದಲ್ಲಿ ತೆಗೆದುಕೊಂಡ ಅಕ್ಷರವೃತ್ತಾದಿಗಳಿಗಾದರೂ ಆದಿ ಪ್ರಸಾದ ಪದ್ಧತಿಯನ್ನು ನೃಪತುಂಗ ನಾಗವರ್ಮಾದಿ ಲಾಕ್ಷಣಿಕರು ತೆಗೆದುಬಿಡಬಹುದಾಗಿತ್ತು. ಆದರೆ ಹಾಗೆ ಮಾಡದೆ ಆದಿ ಪ್ರಾಸವನ್ನು ಪಾಲಿಸಿರುವರಲ್ಲದೆ ಕನ್ನಡಕ್ಕೆ ಆದಿ ಪ್ರಾಸವೇ ಮುಖ್ಯವಾದದ್ದೆಂದು ಹೇಳಿರುವರು. ಇದರಂತೆ ೩ನೇ, ಸಲದ ಕ್ರಾಂತಿಕಾರರಾದ ಹರಿಹರ ರಾಘವಾಂಕರು ಸಹ ಆದಿ ಪ್ರಾಸವೇ ಕನ್ನಡದ ವೈಶಿಷ್ಟ್ಯವೆಂದು ಅದನ್ನು ಕಾಯ್ದುಕೊಂಡೇ ಚರಣಾದಿಗಳಲ್ಲಿ ಹೆಚ್ಚುಕಡಿಮೆ ಮಾಡಿಕೊಂಡರು. ಇತ್ತೀಚಿಗೆ ಮಹಾರಾಷ್ಟ್ರರ ಪ್ರಾಬಲ್ಯವಿದ್ದ ೧೭-೧೮ನೇ ಶತಮಾನಗಳಲ್ಲಿ ಮರಾಠಿಯ ಛಂದಸ್ಸಿನ ಸಾಂಕಿ, ದಿಂಡಿ, ಆರ್ಯ ಮೊದಲಾದ ವೃತ್ತಗಳನ್ನು ಸಹ ನಮ್ಮ ಕನ್ನಡದಲ್ಲಿ ಅಲ್ಪಸ್ವಲ್ಪ ಬೆರಸಿದರು. ಅವರಾದರೂ ಆದಿ ಪ್ರಾಸದ ಪದ್ಧತಿಗೆ ಕೊಂಕು ತರಲಿಲ್ಲ. ಅಂದಮೇಲೆ ೧೯ನೇ ಶತಮಾನದ ಹಿಂದಿನ ಕವಿಗಳೆಲ್ಲರು ಆದಿ ಪ್ರಾಸವೇ ಕನ್ನಡದ ವೈಶಿಷ್ಟ್ಯವೆಂದು ತಿಳಿದುಕೊಂಡಿದ್ದರೆಂದಂತಾಯಿತು.

ಸದ್ಯದ ೨೦ನೇ ಶತಮಾನದ ಕವಿಗಳು ಮತ್ತು ಕ್ರಾಂತಿಕಾರರು ಪೂರ್ವಿಕರ ಈ ವೈಶಿಷ್ಟ್ಯಕ್ಕೆ ಅಷ್ಟೊಂದು ಮಹತ್ವವನ್ನು ಕೊಟ್ಟಂತೆ ಕಂಡುಬರುವದಿಲ್ಲ. ಅದೇಕೋ ತಿಳಿಯದು. ಪ್ರಾಸದ ತೊಂದರೆಯಿಂದ ಉಕ್ಕಿಬರುವ ಭಾವನೆಗಳು ನಾಶವೇನಾದರು ಆಗುವವೋ? ಹೀಗಿದ್ದರೆ ಪ್ರಾಚೀನಕಾಲದ ಕ್ರಾಂತಿಕಾರರೂ ಮಹಮಹಾನ್ ಕವಿಗಳೂ ಕೇಶಿರಾಜ, ನಾಗವರ್ಮಾದಿ ಲಾಕ್ಷಣಿಕ ಕಾವ್ಯಕರ್ತರೂ, ಈ ತೊಂದರೆಯನ್ನು ಯಾಕೆ ತೆಗೆದಿರಲಿಕ್ಕಿಲ್ಲ. ಅವರಿಗೆ ಪ್ರಾಸಾಕ್ಷರದ ಶಬ್ದಗಳು ಸಿಗುವದೆಂದರೆ ಕಠಿಣವೆನಿಸದಿರುವದೇ ಕಾರಣವಲ್ಲಿದೆ ಬೇರೊಂದಿಲ್ಲ. ಆದರೆ ಸದ್ಯಕ್ಕೆ ಚಿಕ್ಕಂದಿನಿಂದಲೂ ಆಂಗ್ಲ ಭಾಷಾಭ್ಯಾಸದೊಳಗಿದ್ದ ಈಗಿನ ನಮ್ಮ ಸ್ಥಿತಿಯು ಮಾತೃಭಾಷೆಯ ಸೇವೆಗೆ ತೊಂದರೆಯನ್ನು ಕೊಡಹತ್ತಿದೆ. ಇಂತಹ ತೊಂದರೆಯಲ್ಲಿ ನಾವು ಅದನ್ನು ಏಕೆ ತೆಗೆದುಹಾಕಬಾರದು. ಆದಿ ಪ್ರಾಸವಿಲ್ಲದ ಪರ ಭಾಷೆಗಳು ಎಷ್ಟು ಊರ್ಜಿತ ಸ್ಥಿತಿಯಲ್ಲಿವೆ. ಪ್ರಾಸದಿಂದ ಪದ್ಯಕ್ಕೆ ಬರುವ ಹೆಚ್ಚಳವಾದರೂ ಏನು? ಎಂಬ ಅನೇಕ ಸಂಶಯಗಳು ನಮ್ಮಲ್ಲಿ ಹುಟ್ಟಹತ್ತಿವೆ. ಪರ ಭಾಷೆಯ ವ್ಯಾಸಂಗದಿಂದ ನಮ್ಮಲ್ಲಿಯ ಶಬ್ದ ಭಾಂಡಾರವು ಕಡಿಮೆಯಾಗಿದ್ದಾಗ ಹೀಗೆ ನಮಗೆ ಆದಿ ಪ್ರಾಸವು ದುಸ್ತರವೆನಿಸುವುದು ಆಶ್ಚರ್ಯವಲ್ಲ. ಕಠಿಣವೆನಿಸಿದ್ದನ್ನು ಪ್ರಯತ್ನಪೂರ್ವಕ ಸಾಧಿಸಿದರೇನೇ ನಮ್ಮಲ್ಲಿಯ ಶಬ್ದಸಂಗ್ರಹವು ಹೆಚ್ಚುವದಲ್ಲದೆ ಬಿಟ್ಟರೆ ಮತ್ತಿಷ್ಟು ಕಡಿಮೆಯಾಗುವದು.

**ಆದಿ ಪ್ರಾಸದ ಉಪಯುಕ್ತತೆ:—** ಆದಿ ಪ್ರಾಸವು ನಮ್ಮ ಕನ್ನಡದಲ್ಲೊಂದೇ ಕಂಡುಬರುವದಲ್ಲದೆ, ಬೇರೆ ಯಾವ ಭಾಷೆಯಲ್ಲಿಯೂ ಕಾಣುವದಿಲ್ಲ. ಅಂದ

ಮೇಲೆ ಇದರ ವಿಶಿಷ್ಟತೆ ಏನಿದೆ? ಇದರಿಂದ ಉಪಯುಕ್ತವಾದರೂ ಏನು. ಎಂಬ ಪ್ರಶ್ನೆಗಳು ಇಲ್ಲಿ ಉತ್ಪನ್ನವಾಗುವವು. ಆದಿ ಪ್ರಾಸದಿಂದ ನಮ್ಮಲ್ಲಿಯ ಶಬ್ದಸಂಗ್ರಹವು ಹೆಚ್ಚುತ್ತದೆ; ಪದ್ಯಕ್ಕೆ ಸೌಂದರ್ಯವು ಉಂಟಾಗುತ್ತದೆ; ಕಿವಿಗೆ ಇಂಪಾಗುತ್ತದೆ ನೆನಪಿನಲ್ಲಿಡಲು ಹೆಚ್ಚು ಅನುಕೂಲವಾಗುತ್ತದೆ. ಯಾವ ಭಾಷೆಯಲ್ಲಿಯೂ ಇಲ್ಲದ್ದೊಂದು ನಮ್ಮ ಭಾಷೆಯಲ್ಲಿದೆ ಎಂಬ ಹೆಚ್ಚಳವು ನಮ್ಮ ಭಾಷೆಗೆ ದೊರೆಯುತ್ತದೆ. ಹೀಗಿರುವಲ್ಲಿ ನಾವು ಅದನ್ನು ದೂರೀಕರಿಸುವದು ಯುಕ್ತವಾಗಿ ತೋರುವದಿಲ್ಲ ಇರಲಿ

೧೯ನೇ ಶತಮಾನದ ಪೂರ್ವಿಕರೆಲ್ಲರು ಆದಿಪ್ರಾಸವೇ ಕನ್ನಡದ ವೈಶಿಷ್ಟ್ಯವೆಂದು ತಿಳಿದು ಅದನ್ನು ಪಾಲಿಸುತ್ತಲೇ ಅನೇಕ ಪದ್ಯಸಾಹಿತ್ಯವನ್ನು ರಚಿಸಿ ಕನ್ನಡ ಮಾತೆಯನ್ನು ಬಗೆಬಗೆಯ ಕಾವ್ಯಮಾಲಿಕೆಗಳಿಂದ ಅಲಂಕರಿಸಿದರು.

೩. ಜನಪದಸಾಹಿತ್ಯ:— ಓದು ಬರೆಹವಿಲ್ಲದ ಅಥವಾ ಅಲ್ಪಸ್ವಲ್ಪ ಬರುವ ಕೋಮಲ ಹೃದಯದ ಬಂಧು ಭಗಿನಿಯರಲ್ಲಿ ಆನಂದ ಶೋಕ ಕರುಣಾದಿ ನವರಸಗಳು ಉಕ್ಕಿದಾಗ ಹೊರಬಿದ್ದ ಇನಿನಾದವಿದು. ಹಳ್ಳಿಗರ ಲಾವಣಿಗಳೂ, ಬೀಸುವಾಗಿನ ಹಾಡುಗಳೂ, ಹೋಳಿಯ ಪದಗಳೂ ಬಾಲಕರನ್ನು ಮಲಗಿಸುವಾಗ ಅನ್ನುವ ಹಾಡುಗಳೇ ಮೊದಲಾದವು ಈ ವರ್ಗಕ್ಕೆ ಸೇರಿದವುಗಳು. ಇವುಗಳಲ್ಲಾದರೂ ಆದಿ ಪ್ರಾಸವನ್ನು ಬಿಟ್ಟಿರುವದಿಲ್ಲ. ಉದಾಹರಣಾರ್ಥವಾಗಿ ಹುಡುಗರನ್ನು ಮಲಗಿಸುವಾಗಿನ ಒಂದು ಪದವನ್ನು ಇಲ್ಲಿ ಕೊಟ್ಟಿರುತ್ತೇನೆ.

ಕಂದ ಕಾಡುವನವ್ವ ।
ಕೆಂದಾಕಲ್ಹಾಲಿಗೆ ।
ನಂದದೀವಿಗಿ ಬೆಳಕಿಗೆ ।
ನಂದದೀವಿಗಿ ಬೆಳಕಿಗೆ ಕಂದೌನ ।
ಬಿಂದ್ಲಿ ಕಂಡವರು ಕೊಡಿರವ್ವ ॥

ಈ ತೆರದ ಪೂರ್ವಿಕರ ಜನಪದ ಸಾಹಿತ್ಯದಲ್ಲಾದರೂ ಒಂದು ಬಗೆಯ ಸ್ವಾರಸ್ಯವಿದೆ. ಪದಲಾಲಿತ್ಯವಿದೆ. ಪ್ರಾಸವಿದೆ. ಕಟ್ಟುಯಿದೆ. ಈ ಸಾಹಿತ್ಯದಿಂದಾದರೂ ಸಮಾಜದ ಉನ್ನತಿಗೆ ಸಹಾಯವಾಗುವದರಲ್ಲಿ ಸಂಶಯವಿಲ್ಲ.

೪-೫. ವಾಚಕಸಾಹಿತ್ಯ:— ಜಗತ್ತೆಲ್ಲವೂ ಕಾವ್ಯಮಯವಾಗಿ ಸರ್ವರೂ ಕವಿಗಳಾಗಬೇಕಾದರೆ ಸಾಧ್ಯವಿಲ್ಲ. ಒಬ್ಬನಿಗೆ ಸಿಹಿಯು ಹೆಚ್ಚಾಗಿ ಸೇರುತ್ತಿದ್ದರೆ

ಮತ್ತೊಬ್ಬನಿಗೆ ಹುಳಿ, ಉಪ್ಪು, ಖಾರ ಮೊದಲಾದವು ಹೆಚ್ಚಾಗಿ ರುಚಿಸುತ್ತವೆ. ಅದರಂತೆ ಸಾಹಿತ್ಯದಲ್ಲಿಯಾದರೂ ಕೆಲವರಿಗೆ ಕಾವ್ಯವು ಹೆಚ್ಚಾಗಿ ರುಚಿಸುವದು. ಬೇರೆ ಕೆಲವರಿಗೆ ವಚನ ಸಾಹಿತ್ಯವು ಪ್ರೀಯವೆನಿಸುವದು. ಇಂಥವರು ಜನರ ಮನರಂಜನವಾಗುವಂತೆಯೂ ಅರ್ಥವು ಸುಲಭವಾಗುವಂತೆಯೂ ವಚನ ರೂಪದಲ್ಲಿ ತಮ್ಮ ಅಭಿಪ್ರಾಯವನ್ನು ಪ್ರಕಟಿಸುವರು. ನಾಟಕ, ಕಾದಂಬರಿ, ಗದ್ಯ ಮೊದಲಾದವು ಈ ಸಾಹಿತ್ಯಕ್ಕೆ ಸೇರಿದವುಗಳು ಸದ್ಯದ ಶತಮಾನದಲ್ಲಿ ಈ ತರದ ವಾಚಕ ಸಾಹಿತ್ಯವೇ ಪ್ರಬಲವಿದೆ ಎಂದು ಹೇಳಬಹುದು. ಇದರಲ್ಲಿಯಾದರೂ ಒಂದು ತೆರದ ಸೌಂದರ್ಯವಿದೆ. ಕುಶಲತೆಯಿದೆ. ರಸಾಘಾತದಿಂದ ಕೇಳುವವರನ್ನು ಮೈಮರೆಸುವಷ್ಟು ತ್ರಾಣವು ಈ ಸಾಹಿತ್ಯದಲ್ಲಿಯೂ ಅದೆ. ಅಂದ ಮೇಲೆ ಆರಿಗೆ ಆದಿ ಪ್ರಾಸವು ಕಠಿಣವೆನಿಸುವದೋ? ಅವರು ಈ ವಾಚಕ ಸಾಹಿತ್ಯದಲ್ಲಿ ತಮ್ಮ ಅಭಿಪ್ರಾಯವನ್ನು ಹೇಳಬಹುದು. ಇರಲಿ,

ಈ ಮೇರೆಗೆ ಸಾಹಿತ್ಯ ಪಂಚಾಂಗಗಳಲ್ಲಿಯೂ ಪೂರ್ವಿಕರು ಅನೇಕ ಬಗೆಯಿಂದ ಶ್ರಮಬಟ್ಟು ಅಜರಾಮರವಾಗಿರುವಂಥ ಗ್ರಂಥಗಳನ್ನು ರಚಿಸಿರುವರು.

**ಆಧುನಿಕ ಸಾಹಿತ್ಯ ಕ್ರಾಂತಿ:—** ಸದ್ಯಕ್ಕೆ ವಿಪರೀತ ಕಾಲವಿದೆ. ಮುಂಚಿನ ನಡೆನುಡಿಗಳೂ, ಆಹಾರ ವಿಹಾರಗಳೂ, ಉಡುಪು ತೊಡುಪುಗಳೂ, ಆಟ ನೋಟಗಳೂ ಈಗಿರುವದಿಲ್ಲ. ಅಂದಮೇಲೆ ಭಾಷಾ ಪ್ರಪಂಚದಲ್ಲಿಯಾದರೂ ಹೆಚ್ಚುಕಡಿಮೆಯು ಏಕೆ ಆಗಬಾರದು. ಹೊತ್ತು ಬಂದಂತೆ ಕೊಡೆಹಿಡಿಯಬೇಕು. ಎಂದು ಅಧುನಿಕರು ಪ್ರತಿಪಾದಿಸುವದು ನಿಜವಿದೆ. ಈ ತೆರದ ಬದಲಾವಣೆಯ ಕಾಲವು ಹಿಂದಾದರೂ ಬಂದಿದೆ, ಮುಂದಾದರೂ ಬರುತ್ತದೆ. ಕಾಲವು ಬದಲಾಯಿಸಿದಂತೆ ಆ ಕಾಲಕ್ಕೆ ಅನುಸರಿಸಿ ಬದಲಾವಣೆಯಿನ್ನು ಮಾಡಿಕೊಳ್ಳುವದಾದರೂ ಯುಕ್ತವದೆ. ಹಿಂದೆ ಸಂಸ್ಕೃತದ ಪ್ರಾಬಲ್ಯವಿದ್ದಾಗ ಅದರ ಛಂದಸ್ಸನ್ನು ತೆಗೆದುಕೊಂಡಂತೆ ಇಂದು ಆಂಗ್ಲಭಾಷೆಯದಾಗಲಿ ಮತ್ತಾವ ಭಾಷೆಯ ಛಂದಸ್ಸನ್ನೇ ಆಗಲಿ ನಮ್ಮ ಭಾಷೆಯಲ್ಲಿ ಬೆರಿಸಿಕೊಳ್ಳಬಹುದು. ಆದರೆ ಆ ಬದಲಾವಣೆಯಲ್ಲಿ ಉಪಯುಕ್ತವಾದ ಮತ್ತು ಪರಂಪರಾನುಗತವಾದ ವಿಶಿಷ್ಟತೆಯೊಂದನ್ನು ಕಾಯ್ದುಕೊಳ್ಳುವದು ಕ್ರಾಂತಿಕಾರರ ಕರ್ತವ್ಯವಾಗಿದೆ.

ಅಧುನಿಕ ಕವಿಗಳ ಕೃತಿಗಳಲ್ಲಿಯಾದರೂ ಕೆಲವೆಡೆಯಲ್ಲಿ ಪ್ರಾಚೀನ ಕನ್ನಡ ಕಾವ್ಯಗಳ ವೈಶಿಷ್ಟ್ಯವಾದ ಆದಿ ಪ್ರಾಸವು ಕಂಡುಬರಹತ್ತಿದೆ. ಆದರೆ ಅದನ್ನು ಪಾಲಿಸಲೇಬೇಕೆಂಬ ನಿಯಮವು ಮಾತ್ರ ಕಾಣುವದಿಲ್ಲ. ಸಾವಿರಾರು ವರ್ಷಗ

ಳಿಂದ ಬೇರುಗೊಂಡು ಶಿಶುತನದ ಲಾಲನೆಯಿಂದಾರಂಭಿಸಿ ಪ್ರೌಢಾವಸ್ಥೆಯ ಶಿಕ್ಷಣದಲ್ಲಿಯೂ ಸಹ ಆದಿ ಪ್ರಾಸ ಬದ್ಧವಾದ ಕವಿತೆಗಳನ್ನು ಕೇಳಿ ಪಠಿಸಿ, ಮನನವಾಗಿದ್ದ ಕಾವ್ಯಝರಿಯನ್ನು ಒಮ್ಮೆಲೇ ತೆಗೆಯಲು ಸಾಧ್ಯವಿಲ್ಲಾ.

ಸಾಹಿತ್ಯವು ಸಮಾಜೋನ್ನತಿಯ ಪ್ರಬಲ ಸಾಧನವಾದುದರಿಂದ ಸಮಾಜವು ಒಪ್ಪುವಂತೆ ಆಧುನಿಕ ಸಾಹಿತಿಗಳು ಪ್ರಾಚೀನ ಪದ್ಧತಿಯ ಸಾಹಿತಿಗಳೂ ಕೂಡಿಯೇ ಒಂದು ಮಾರ್ಗವನ್ನು ನಿರ್ಧರಿಸಬೇಕು. ಅದರಂತೆ ಒಂದು ಲಾಕ್ಷಣಿಕ ಗ್ರಂಥವನ್ನಾದರೂ ನಿರ್ಮಿಸಿ ಪ್ರಸಿದ್ಧಿಸಬೇಕು ಅಂದರೆ ನಮ್ಮ ಕನ್ನಡ ನಾಡಿಯು ನಿಜವಾಗಿಯೂ ಮುಂದಡಿ ಇಡುವದರಲ್ಲಿ ಸಂಶಯಲ್ಲಾ. ೧೯-೨೦ನೇ ಶತಮಾನಗಳಲ್ಲಿ ಅಂದರೆ ಈಗಿನ ನೂರಾರು ವರುಷದೊಳಗೆ ನಮ್ಮ ಭಾಷೆಯು ಯಾವ ಬಗೆಯಿಂದಲೂ ಮುಂದುವರಿದಿಲ್ಲ. ಆದರೆ ಇತ್ತೀಚಿನ ೧೦-೧೫ ವರುಷಗಳಿಂದ ಮಾತ್ರ ಕನ್ನಡಿಗರಲ್ಲಿ ಒಂದು ಬಗೆಯ ಜಾಗ್ರತಿಯುಂಟಾಗಿದೆ. ಈ ಜಾಗ್ರತಿಯ ಕಾಲದಲ್ಲಿ ಎಲ್ಲ ಕನ್ನಡಿಗರಿಗೂ ಒಮ್ಮನಸ್ಸಿನಿಂದ ಮುಂದಡಿಯಿಡಲು ಸುಬುದ್ಧಿಯನ್ನು ಕೊಡಲೆಂದು ಪರಮಾತ್ಮನಲ್ಲಿ ನನ್ನ ಬೇಡಿಕೆಯಿದೆ.

— ಕವಿಕಿಂಕರ

# ಹೇ
# ದು ಗ
# ಇ ೮ ದೆ?

ವಾರ್ಧಿಕ ಷಟ್ಪದಿಗಳು

ಅಸ್ಥಿರದ ಸುಖಕಾಗಿ ಮೆಚ್ಚಿನೀ ಕೆಡಬೇಡ,
ಶಾಶ್ವತದ ಸುಖ ಪಡೆಯೆ, ಈಶ್ವರನ ಕೃಪೆ ಬೇಡು;
ಸ್ವಸ್ಥ ತಿಳಿಸ್ವಪ್ನಸುಖವೆಷ್ಟು ಮಾತ್ರಕೆ ಸ್ಥಿರವು! ನಶವರ್ಗಕಾಂಬುದಿಲ್ಲೇ ?
ಕಸ್ತೂರಿ ಕೇಶರಗಳೊಟ್ಟಾಗಿ ಪರಿಮಳವ,
ಶಿಸ್ತಿನಿಂ ಬೀರುತಿರೆ ಮಸ್ತಕದ ಒಣಶೂಲಿ;
ಕಿತ್ತುಹೋಗುವ ತೆರದೆ ಕ್ಷಣಮಾತ್ರ ಸೌಖ್ಯವಂ ಬೀರುವುದು
ಇಹಸುಖವಿದು ||೧||

ಹೊಸದಾಗಿ ಬೆಳೆದರಳಿ ವಾಸನೆಯ ಬೀರುತಿಹ,
ಹೊಸಪುಷ್ಪಗಳ ಬಾಳು ನಶಿಸದೇ ಇಹುದೇನು ?
ಹೊಸದಿದ್ದು ಹಳದಾಗಿ ನಶಿಪ ಅಂಗಕೆ ಸೌಖ್ಯ ಪುಸಿಯೆಂದು ಬುಧ-ಮಾನ್ಯರು
ಉಸುರಿದುದು ದಿಟವಲ್ಲೆ, ಹೊಸತರುಣಿ ಬಾಳಿನೊಳು,
ಶಶಿವರ್ಣ ತಳೆದು ಜನ-ಮನವ ಸೆಳೆಯುತೆ ತನ್ನ-
ಪಸಿವು ಹಿಂಗಿಪುದೇನು ಲೋಕದೊಳು ಶಾಶ್ವತದ ವಾರ್ತೆ ||೨||

"ಸುಖದ ಬಾಳೇಕ್ಷಣವು ದುಃಖವೇ ಮಿಗಿಲಿಹುದು,
ಸುಖಮೊದಲು ಕೊಳ್ಳುತಿರೆ ದುಃಖಬೆನ್ನಟ್ಟಿಹುದು;
ಸುಖಕಾಗಿ ಮೋಹಿಸದೆ, ದುಃಖದಿಂಸುಖಕೊಳ್ಳು ಎಂದೆಂಬರೀ ಲೋಕದಿ ||
ಸಕಲ ಸೃಷ್ಟಿತ್ರಯದಿ ಅಕಳಂಕ ಕೀರ್ತಿಯಂ,
ಸುಖವಾಗಿ ಕೊಂಡಿರುವ ಮಹಿಮಾತ್ಮ ಶಾಲಿಗಳು,
ಈಕಾಡು ಭವದಲ್ಲಿ ದುಃಖವನೆ ಬಯಸಿದರು ಸುಖಬಯಸಲಿಲ್ಲ" ||೩||

— ಸುಭದ್ರಾತನಯ

# " ಉತ್ತರಣಿ "

ನಮಃ ಪ್ರತರಣಾಯಚೋತ್ತರಣಾಯ ಚ ।

( ಶ್ರೀ ರುದ್ರ )

ಲೇಖಕ:- ಶ್ರೀಶಿವ

ಉತ್ತರಣೆಯು ವೇದ ಮಂತ್ರದಂತೆ ನಿಜವಾಗಿ ಉತ್ತರಣ ರೂಪವೇ ಸರಿ. ರುದ್ರನಿಗೆ ವೇದ ಮಂತ್ರವು ಭವತಾರಕನೆಂಬ ಅಭಿಪ್ರಾಯದಲ್ಲಿ ಉತ್ತರಣ ಶಬ್ದವನ್ನು ಉಪಯೋಗಿಸಿಕೊಂಡಿರುವುದೂ, ರೋಗ ತಾರಕವೆಂಬ ಅಭಿಪ್ರಾಯದಲ್ಲಿ ಕನ್ನಡಿಗರು ಈ ವನಸ್ಪತಿಗೆ ಉತ್ತರಣ ( ಉತ್ತರಣೆ ) ಎಂಬ ಶಬ್ದವನ್ನು ಉಪಯೋಗಿಸಿಕೊಂಡಿರುವುದೂ ಸ್ವಾರ್ಥಕವಾಗಿದೆ.

ಈ ಉತ್ತರಣೆಗೆ ಸಂಸ್ಕೃತದಲ್ಲಿ ಅಪಾಮಾರ್ಗವೆಂದು ಹೇಳುವರು ಕನ್ನಡಿಗರು ಹಳ್ಳಿಯ ಭಾಷೆಯಲ್ಲಿ ಉತ್ರಾಣಿ ಎಂದು ಹೇಳುವರು. ಇದು ಕೆಂಪು ನೆಲದಲ್ಲಿ ಹೆಚ್ಚಾಗಿ ಬೆಳೆಯುವದು. ಇದರಲ್ಲಿ ಕೆಂಪು—ಬಿಳಿಯದೆಂದು ಎರಡು ಜಾತಿಯುಂಟು, ಈ ಎರಡು ಜಾತಿಯನ್ನು ಸುಲಭವಾಗಿ ತಿಳಿದುಕೊಳ್ಳಬಹುದು. ಬಿಳಿಯ ಉತ್ತರಣೆಯು ಬುಡದಿಂದ ತುದಿಯವರೆಗೂ ಎಲೆ-ಹೂ ಮೊದಲಾದುದೆಲ್ಲವೂ ಬಿಳಿಪಾಗಿಯೇ ಇರುವುದು. ಕೆಂಪು ಉತ್ತರಣೆಯು ಕೆಂಪಾಗಿಯೇ ಇರುವುದು. ಗುಣದಲ್ಲಿ ಸ್ವಲ್ಪ ಹೆಚ್ಚುಕಡಿಮೆ ಎರಡೂ ಒಂದೆ. ಹೊಳೆ-ಹಳ್ಳ-ಕೆರೆ ಮುಂತಾದ ಸ್ವಲ್ಪ ತಂಪಾದ ಭೂಮಿಯಲ್ಲಿ ಸುಖವಾಗಿ ಬೆಳೆಯುವದು. ಇದು ಹೆಚ್ಚಾಗಿ ಬೆಳೆದರೆ ೩-೪ ಮೊಳ ಎತ್ತರವಾಗಿರುವುದುಂಟು. ನೀರಿಲ್ಲದ ಸ್ಥಳದಲ್ಲಿ ಸಣ್ಣಸಣ್ಣ ಕಂಟಿಯಾಗಿರುವುದು. ಶಿವರಾತ್ರಿಯ ಕಾಲದಲ್ಲಿ ಹಳ್ಳಿ-ಪಟ್ಟಣಿಗರೆಲ್ಲರೂ ಒಣಗಿದ ಇದರ ಕಡ್ಡಿಗಳನ್ನು ತಂದು ಅರಳೆಯನ್ನು ಸುತ್ತಿ ಕಡ್ಡಿಬತ್ತಿಗಳನ್ನು ಮಾಡಿ ತುಪ್ಪದಲ್ಲಿ ಅದ್ದಿ ದೇವರಿಗೆ ಬೆಳಗುವರು. ಈ ಗಿಡದ ಕಡ್ಡಿಗಳು ಒಣಗಿದಾಗ ಸಮೀಪದಲ್ಲಿ ತಿರುಗಾಡಿದರೆ ಪಂಜೆಗಳಿಗೆ ಅದರ ಬೀಜಗಳು ಬಲವಾಗಿ ಅಂಟಿಕೊಳ್ಳುತ್ತವೆ. ಒಮ್ಮೊಮ್ಮೆ ಕೈಕಾಲುಗಳಿಗೂ ಅಂಟಿಕೊಳ್ಳುವುದುಂಟು. ಇದು ಭರತಖಂಡದ ಎಲ್ಲಾ ಭಾಗಗಳಲ್ಲಿಯೂ ಅಧಿಕವಾಗಿ ಬೆಳೆಯುತ್ತದೆ.

ಇದರ ಬೇರು-ಎಲೆ-ಟೊಂಗೆ-ಬೀಜ ಇವೆಲ್ಲವೂ ಔಷಧಿಗಾಗಿ ಬೇಕಾಗು ವವು. ಅನುಪಾನ ಭೇದದಿಂದ ಇದು ಕಫ-ವಾತ-ಮೂಲವ್ಯಾಧಿ-ಕಜ್ಜಿ-ಉದರ ರೋಗ ಇವೆಲ್ಲವನ್ನೂ ಗುಣಪಡಿಸುವುದು. ಇದರಿಂದ ಸಿದ್ಧವಾದ ನಶ್ಯವು ಮಸ್ತಕ ಪೀಡೆ (ತಲೆನೋವು) ಯನ್ನು ಕಳೆವುದು. ರಕ್ತಾತಿಸಾರವನ್ನು ಬಂದು ಮಾಡು ವುದರಲ್ಲಿಯೂ, ವಾಂತಿಯನ್ನು ಮಾಡಿಸುವುದರಲ್ಲಿಯೂ ಇದು ಹೆಸರುವಾಸಿಯಾ ಗಿದೆ. ಇದು ಸ್ವಾಭಾವಿಕವಾಗಿ ತೀಕ್ಷ್ಣವಾದರೂ ಭೇದಿಯನ್ನು ಮಾಡಿಸುತ್ತ ವಾಯುವನ್ನು ಕಳೆಯಬಲ್ಲುದು. ಮುಖದ ಮೇಲಿನ ಬೊಕ್ಕೆ-ಕರಿಯ ಚಿಬ್ಬ-ಬಂಗು ಮೊದಲಾದ ವಿಕಾರವಾದ ಕಲೆಗಳನ್ನು ದೂರಮಾಡಿ ವಿಶೇಷ ಕಾಂತಿಯು ನ್ನುಂಟುಮಾಡುವ ವನೌಷಧಿಗಳಲ್ಲಿ ಇದು ಮೊದಲನೆಯದು. ಇದರ ಲೇಪವು ಕುರು-ಗಂಡಮಾಲೆಗಳನ್ನು ಗುಣಪಡಿಸುವುದಲ್ಲದೆ ಅಂತ್ರವ್ಯಾಧಿ (ಅಂಡವಾಯುವಿನ ಒಂದು ರೋಗ) ಯನ್ನು ನಿರ್ಮೂಲಗೊಳಿಸುವುದು.

ಇದರ ಬೇರನ್ನು ಹಲ್ಲುಗಳಿಗೆ ಉಜ್ಜುವುದರಿಂದ ಬಾಯಿಯ ದುರ್ವಾಸನೆಯು ಬಹು ಬೇಗನೆ ಕಳೆಯುವದಲ್ಲದೆ ನಾಲಿಗೆಯ ದೋಷವೂ ಶಮನವಾಗುವದು. ಈ ಮಯೂರ ಶಿಖೆ (ಉತ್ತರಣೆ) ಯ ಬೇರು, ಟೊಂಗೆ, ಎಲೆ, ಹೂ, ಮತ್ತು ಶತಾವರಿ ಬೇರು, ಅಡ್ಡಸರ, (ಅಡಸಾಲ್) ದ ಎಲೆ, ಇವೆಲ್ಲವನ್ನೂ ಸಮಭಾಗ ತೆಗೆದುಕೊಂ ಡು ನೀರಿನಲ್ಲಿ ಕಷಾಯಮಾಡಿ ಏಕಚತುರ್ಥಾಂಶಕ್ಕೆ ಬತ್ತಿಸಿಕೊಂಡು ಆರಿಸಿ ಕುಡಿ ಯಲು ರಕ್ತಮೂಲವ್ಯಾಧಿಯು ಖಂಡಿತವಾಗಿ ಗುಣವಾಗುವುದು.

ಉತ್ತರಣೆಯ ಬೇರು, ಪುನರ್ನವಾದ ಬೇರು ಈ ಎರಡನ್ನೂ ಬಿಸಿನೀರಲ್ಲಿ ತೇದು ಆ ಗಂಧವನ್ನು ನವಪ್ರಸೂತ (ಆಗಲೇ ಹಡೆದವ) ರ ಜನನೇಂದ್ರಿಯದ ಒಳಗಡೆ ಲೇಪಿಸುವುದರಿಂದ ಪ್ರಸೂತ-ವ್ಯಾಧಿ-ಶೂಲಾದಿಗಳೂ ನಂಜುಗಳೂ ಖಂ ಡಿತವಾಗಿ ಮಾಯವಾಗುವವು.

ಇದರ ಎಲೆಗಳನ್ನು ಸಣ್ಣಾಗಿ ಅರೆದು ಆಯುಧಾದಿಗಳಿಂದುಂಟಾದ ಗಾಯ ಗಳಿಗೆ ಹಾಕಿ ಅರುವೆಯನ್ನು ಕಟ್ಟಲು ಆಕ್ಷಣವೇ ಹರಿಯುತ್ತಿದ್ದ ರಕ್ತವು ನಿಂತು ಬಿಡುವುದು.

ಉತ್ತರಣೆಯ ಬೇರು ೧ ತೊಲೆ, ಸೈಂಧಲವಣ ೪ ಗುಂಜಿ, ಜೇನುತುಪ್ಪ ೧ ತೊಲೆ ಇವೆಲ್ಲವನ್ನು ಮೊದಲು ಒರಳಲ್ಲಿ ಕುಟ್ಟಿ ಆ ಮೇಲೆ ಒಂದು ತಾಮ್ರದ ಪಾತ್ರೆ ಯಲ್ಲಿ ತಾಮ್ರದ ತಂಬಿಗೆಯಿಂದ ಕಿವುಚಿ ಕರ್‍ರಗಾಗುವವರೆಗೂ ತಿಕ್ಕಿ ಗುಂಜುಗ

ಳನ್ನು ತೆಗೆದು ಸ್ವಚ್ಛಮಾಡಿ ಒಂದು ಕಾಜಿನ ಭರಣಿಗೆ ಹಾಕಿಡುವುದು. ಕಣ್ಣು ನೋವನ್ನು ಕಳೆಯುವದರಲ್ಲಿ ಇದು ಪ್ರಸಿದ್ಧವಾದ ಔಷಧಿಯು.

ಈ ಉತ್ತರಣೆಯ ಕಲ್ಕದೊಡನೆ ಬೇಯಿಸಿದ ಎಳ್ಳೆಣ್ಣೆಯಿಂದ ಶಸ್ತ್ರದಿಂದುಂಟಾದ ಗಾಯಗಳು ಶೀಘ್ರವಾಗಿ ಮಾಯುವವು. ಆಗಲೆ ಉಂಟಾದ ಗಾಯಕ್ಕೆ ಲೇಪಿಸಿದರೆ ಹರಿಯಿುತ್ತಿದ್ದ ರಕ್ತವನ್ನು ಆಗಲೇ ನಿಲ್ಲಿಸುವುದು. ಕೊನೆಯ ಪಕ್ಷ ಇಷ್ಟು ಶ್ರಮಪಡಲು ಸಾಧ್ಯವಿಲ್ಲದಿದ್ದರೆ ಇದರ ತೊಪ್ಪಲದ ರಸವನ್ನಾದರೂ ಹಚ್ಚಬಹುದು. ಇದರಿಂದಲೂ ಗಾಯವು ಮಾಯುವುದು. ರಕ್ತವೂ ಬಂದಾಗುವುದು.

ಇದರ ಬೇರು ೧ ತೊಲೆ, ೬ ಮೆಣಸು ಇವನ್ನು ೫ ತೊಲೆ ತಣ್ಣೀರಿನಲ್ಲಿ ಅರೆದು ಸೋಸಿ ಕುಡಿಸಲು ರಕ್ತಪ್ರದರವು ಬಂದಾಗುವುದು. ಇದೇ ಬೇರನ್ನೇ ಆಕಳ ಹಸಿ ಹಾಲಲ್ಲಿ ಅರೆದು ಸೋಸಿ ಕುಡಿಯಲು ಕಟ್ಟುವುಚ್ಚೆ (ಮೂತ್ರಕೃಚ್ಛ್ರ) ಗುಣವಾಗುವುದು. ಇದೇ ಗಿಡದ ಬೀಜವನ್ನು ಆಕ್ಕಿ ಕಟ್ಟನಲ್ಲಿ ಅರೆದು ಸೇವಿಸಿದರೆ ರಕ್ತಮೂಲವ್ಯಾಧಿಯು ಗುಣವಾಗುವುದು.

ಈ ಗಿಡದ ಬೇರನ್ನು ಕರೆಯ ಅರಿವೆಯಲ್ಲಿ ಕಟ್ಟಿ ಕೊರಳಲ್ಲಿ ಕಟ್ಟಿದರೆ ಆಯಾಸವಿಲ್ಲದೆ ಹಡೆಯುವರು. ಇದೇ ಬೇರನ್ನೇ ತಲೆಯ ಕೂದಲಿಗೆ ಕಟ್ಟಿದರೂ ಇದೇ ಗುಣವುಂಟಾಗುವುದು. ಈ ಬೇರಿನ ಕ್ವಾಥವನ್ನು ಬೆಲ್ಲದಲ್ಲಿ ಮಿಶ್ರಮಾಡಿ ಕುಡಿಯಲು, ಸುಖ ಪ್ರಸವವಾಗುವುದು. ಇದರ ಬೇರನ್ನು ನೀರಿನಲ್ಲಿ ತೇದು ಹೊಕ್ಕಳು, ಹೊಕ್ಕುಳ ಕೆಳಭಾಗ (ಕಿರಿಹೊಟ್ಟೆ) ಮತ್ತು ಜನನೇಂದ್ರಿಯಗಳಿಗೆ ಇದರ ಗಂಧವನ್ನು ಲೇಪಿಸಿದರೆ ಶೀಘ್ರವಾಗಿ ಜನನವಾಗುವುದು. ಅಥವಾ ಇದೇ ಬೇರನ್ನೇ ಸೊಂಟದಲ್ಲಾದಹೂ ಕಟ್ಟಬಹುದು. ಪ್ರಸವಪೀಡೆ (ಬೇನೆ) ಯುಂಟಾಗುತ್ತಿದ್ದರೂ ಶೀಘ್ರವಾಗಿ ಜನನವಾಗದಿದ್ದರೆ ೧ ತೊಲೆ ಉತ್ತರಣೆಬೇರು ೨ ತೊಲೆ ಹಳೆ ಬೆಲ್ಲ ಇವೆರಡನ್ನೂ ನೀರಿನೊಡನೆ ಕಷಾಯ ಮಾಡಿ ಕುಡಿಸಲು ತಡವಿಲ್ಲದೆ ಕೂಸು ಹೊರಬೀಳುವುದು. ಕೆಳಗೆ ನೋಡಿರಿ!

**ಸೂಚನೆ:—** ಇದರ ಬೇರಿನ ಉಪಯೋಗದಿಂದ ಜನನವು ಶೀಘ್ರವಾಗುವುದೇನೋ ನಿಜ, ಆದರೆ ಮೇಲೆ ಹೇಳಿದಂತೆ ಯಾವ ಪ್ರಯೋಗವನ್ನು ಮಾಡಿದ್ದರೂ ಎಲ್ಲೆಲ್ಲಿ ಲೇಪವೆಂದು ಹೇಳಿದೆಯೋ ಆ ಲೇಪಗಳನ್ನು ಹಡೆದ ಕೂಡಲೆ ನೀರಿನಿಂದ ಅಥವಾ ಒದ್ದೆ ಬಟ್ಟೆಯಿಂದ ಒರೆಸಿಕೊಳ್ಳಬೇಕು. ಹಾಗೆಯೇ ಬಿಟ್ಟರೆ ಗರ್ಭ

ಕೋಶವೇ ಹೊರಬೀಳುವ ಭಯವುಂಟು. ಜ್ಞಾಪಕದಿಂದ ಚಿಕಿತ್ಸೆ ನಡೆಸಬೇಕು. ತಲೆ ಮುಂತಾದ ಕಡೆ ಕಟ್ಟಿದ ಬೇರನ್ನು ಕೂಡಲೇ ಬಿಚ್ಚಬೇಕು.

ಹಡೆದು ಕೆಲವು ದಿನಗಳಾದರೂ ಕೆಲ ಹೆಣ್ಣುಮಕ್ಕಳಿಗೆ ಮೊಲೆಗೆ ಹಾಲೇ ಬಿದ್ದಿರುವುದಿಲ್ಲ. ಕೆಲವರಿಗೆ ಬಿದ್ದಿದ್ದರೂ ಬಹಳ ಕಡಿಮೆ ಇರುವುದುಂಟು. ಇಂತಹ ಸಂದರ್ಭದಲ್ಲಿ ಉತ್ತರಣೆ ಬೇರಿನ ಗಂಧವನ್ನು ಕೆಲ ದಿನ ಮೊಲೆಗಳಿಗೆ ತಿಕ್ಕುತ್ತ ಬಂದರೆ ಹಾಲು ಹೆಚ್ಚಾಗಿ ಬೀಳುವುದು

ಚೇಳು ಕಡಿದಿದ್ದರೆ:— ಇದರ ಬೇರಿನ ಗಂಧವನ್ನು ಆ ಸ್ಥಳದಲ್ಲಿ ಲೇಪಿಸಿ ಆರುವ ವರೆಗೆ ಬೆಂಕಿ ಕಾಯಿಸಲು ಮತ್ತು ಅದೇ ಗಂಧವನ್ನೇ ನೀರಿನಲ್ಲಿ ಕಲಿಸಿ ೨-೩ ಸಾರೆ ಕುಡಿಯಲು, ಬೇಗನೇ ವಿಷವಿಳಿಯುವುದು.

ಹುಚ್ಚನಾಯಿ ಕಡಿದಿದ್ದರೆ:— ಇದರ ಬೇರಿನ ಪುಡಿಯನ್ನು ಜೇನುತುಪ್ಪದೊಡನೆ ಸೇವಿಸಬೇಕು. ಎಲೆಯ ರಸವನ್ನು ಕಡಿದ ಸ್ಥಳದಲ್ಲಿ ಲೇಪಿಸಬೇಕು.

ಇಲಿಕಡಿದಿದ್ದರೆ:— ಇದರ ಎಲೆ ರಸವನ್ನು ಸ್ವಲ್ಪ ಜೇನುತುಪ್ಪವನ್ನೂ ಸೇರಿಸಿ ನೆಕ್ಕಬೇಕು. ೭ ದಿನದಲ್ಲಿ ಗುಣವಾಗುವುದು. ಇದರ ಬೀಜ ೧|| ಮಾಸೆ, ಸ್ವಲ್ಪ ಜೇನುತುಪ್ಪ, ಎರಡನ್ನೂ ಸೇರಿಸಿ ನೆಕ್ಕಲು ಮೇಲಿನಂತೆಯೇ ಗುಣವಾಗುವುದು.

ಜರಿ, ಜೇನುನೊಣ ಮುಂತಾದವು ಕಡಿದರೂ ಮೇಲಿನಂತೆಯೇ ಮಾಡಬೇಕು.

ಹಾವು ಕಡಿದಿದ್ದರೆ:— ಇದರ ಎಲೆಗಳನ್ನು ಜಗಿದು ತಿನ್ನುತ್ತ ಎಲ್ಲಿಗೆ ಬಾಯಿಗೆ ವಿಷಹತ್ತಿದಂತಾಗಿ ಎಲೆಯೂ ವಿಷವೆನಿಸುವುದೋ ಅಲ್ಲಿಗೆ ಬಿಡಬೇಕು. ಅಲ್ಲಿಗೆ ವಿಷವಿಳಿಯುವುದು.

ಹೊಟ್ಟೆಯೊಳಗೆ ವಿಷಪ್ರಯೋಗವಾಗಿದ್ದರೆ: — ಇದರ ಬೇರನ್ನು ತುಪ್ಪದಲ್ಲಿ ಅರೆದು ಸೇವಿಸಬೇಕು.

ಕರ್ಣರೋಗಗಳ ಮೇಲೆ:— ಇದರ ಎಲೆ ರಸವನ್ನು ಕಿವಿಗೆ ಹಿಂಡಿದರೆ ಕಿವಿ ನೋವು ಕಳೆವುದು. ಇದರ ಎಲೆರಸವನ್ನು ಎಣ್ಣೆಯಲ್ಲಿ ಕಾಯಿಸಿ ಕಿವಿಗೆ ಬಿಟ್ಟರೂ ಕಿವಿನೋವು ಗುಣವಾಗುವುದು.

ದಮ್ಮಿನ ಮೇಲೆ:— ಇದರ ಎಲೆಗಳನ್ನು ಚಿಲಮಿಯಲ್ಲಿ ಹಾಕಿ ಸೇದಬೇಕು. ಅಥವಾ ೧೦ ಮಾಸೆ ಬಿಳಿಯ ಉತ್ತರಣೆ ಬೇರನ್ನು ೩ ಮೆಣಸಿನ ಕಾಳಿನೊಡನೆ ಸಂಣಾಗಿ ಅರೆದು ನೀರಿನೊಡನೆ ಸೇವಿಸಬೇಕು. ಎದೆ-ಕುತ್ತಿಗೆಗಳಿಗೆ ಆಕಳ ತುಪ್ಪವನ್ನು ತಿಕ್ಕಿಕೊಳ್ಳುವುದು. ರಾತ್ರಿ ಗೋದೀರೋಟ್ಟಿ, ಹಾಲು ಉಣ್ಣಬೇಕು. ಹಗಲು ಅನ್ನ ಆಕಳಹಾಲು ಉಣ್ಣಬೇಕು. ಒಂದುವಾರ ಹೀಗೆ ಮಾಡಿದಲ್ಲಿ ೨ವರ್ಷಗಳ ಹಳೆಯ ದಮ್ಮೂ ಗುಣವಾಗುವುದು.

ಕೆಮ್ಮಿನ ಮೇಲೆ:–ಉತ್ತರಣೆಯ ಸಮೂಲವನ್ನು ನೆರಳಲ್ಲಿ ಒಣಗಿಸಿ ಸುಟ್ಟು ಭಸ್ಮಮಾಡಿ ೨ ಮಾಸೆ ಈ ಭಸ್ಮವನ್ನು ಜೇನುತುಪ್ಪದೊಡನೆ ಸೇವಿಸಬೇಕು. ಸಣ್ಣ ಹುಡುಗರಿಗೆ ೧-೨ ಗುಂಜಿಯಷ್ಟು ಕೊಡಬಹುದು. ಕೆಮ್ಮು ಕಳೆವುದು.

ಮೂಲವ್ಯಾಧಿಯ ಮೇಲೆ:– ೧ ತೊಲೆ ಉತ್ತರಣೆ ಬೀಜವನ್ನು ಅಕ್ಕಿ ಕಟ್ಟಿನಲ್ಲಿ ಅರೆದು ೩-೪ ದಿನ ಸೇವಿಸಲು ರಕ್ತ ಮೂಲವ್ಯಾಧಿ, ಆಮಾತಿಸಾರ ಕಳೆವವು. ಅಥವಾ ಇದರ ಬೇರು ಅದೇ ತೂಕ ಮೆಣಸು ಎರಡನ್ನೂ ಅರೆದು ಕ್ವಾಥಮಾಡಿ ೩ ದಿನ ಕುಡಿಯಲು ರಕ್ತ ಬೀಳುವುದು ಬಂದಾಗುವುದಲ್ಲದೆ ಮೊಳೆಗಳು ಕತ್ತರಿಸಿ ಬೀಳುವವು.

ಮೂತ್ರರೋಗದ ಮೇಲೆ:– ಇದರ ಪಂಚಾಂಗವನ್ನು ಕ್ವಾಥಮಾಡಿ ಕುಡಿಯಲು ಮೂತ್ರವೃದ್ಧಿಯಾಗಿ ಮೂತ್ರಕೃಚ್ಛ್ರ (ಮೂತ್ರದ ತಡೆ) ವು ಗುಣವಾಗುವುದು. ಇದರ ಒಣಗಿದ ಎಲೆಗಳನ್ನು ಪುಡಿಮಾಡಿ ಸೇವಿಸಿದರೂ ಇದೇ ಗುಣವೇ ತೋರುವುದು

ತಲೆ ನೋವಿನ ಮೇಲೆ:– ಇದರ ಬೀಜದಿಂದ ನಸ್ಯವನ್ನು ಮಾಡಿಕೊಂಡು ಉಪಯೋಗಿಸಲು ಮೂಗಿನಿಂದ ನೀರು ಸೋರಿ ತಲೆನೋವು ಕಡಿಮೆಯಾಗುವುದು.

ಬಾಯಿಂದ ರಕ್ತ ಬೀಳುತ್ತಿದ್ದರೆ:— ಇದರ ಬೇರಿನ ಗಂಧವನ್ನು ಅಂಗೈ-ಅಂಗಾಲುಗಳಿಗೆ ಲೇಪಿಸಬೇಕು.

ಅತಿಸಾರದ ಮೇಲೆ:-.. ಇದರ ಬೇರಿನ ಚೂರ್ಣದಲ್ಲಿ ಮೆಣಸಿನ ಕಾಳು ಪುಡಿಯನ್ನು ಮಿಶ್ರಮಾಡಿ ಆಕಳ ಮೊಸರಿನಲ್ಲಿ ಸೇವಿಸುತ್ತ ಬಂದರೆ ಹಳೆಯ ಅತಿಸಾರ, ಸಂಗ್ರಹಿಣಿ, ವಾತಜನ್ಯವಾದ ಮೂಲವ್ಯಾದಿ ಇವು ಗುಣವಾಗುವವು.

ಅರ್ಧಾಂಗ ವಾಯುವಿನ ಮೇಲೆ:— ಪಾರ್ಶ್ವ ರೋಗವು ಉಂಟಾಗು

ತ್ರಲೇ ಆಕಳ ತುಪ್ಪ ಅಥವಾ ಔಡಲ ಎಣ್ಣೆಯಲ್ಲಿ ಇವರ ಬೇರಸ್ನು ತೇಮು ಅದಸ್ನು ಎರಡೂ ಮೂಗಿಗೆ ಹಿಂಡಬೇಕು.

ಹೀಗೆ ಈ ಉತ್ತರಣೆಯು ಇನ್ನೂ ಅನೇಕ ರೋಗಗಳನ್ನು ಕಳೆಯುವುದು. ಆಯುರ್ವೇದ ಶಾಸ್ತ್ರದಲ್ಲಿ ವನಸ್ಪತಿ ಪ್ರಕರಣದಲ್ಲಿ ಉಕ್ತವಾಗಿದೆ. ಇವರಲ್ಲಿ ಈ ಹಿಂದೆ ಮಾತ್ರಾ ನಿರ್ಮಾಣ, ಕ್ವಾಥ. ಕಷಾಯ ಮುಂತಾದವುಗಳ ಪ್ರಮಾಣವೆಷ್ಟೆಂಬುದು ಉಕ್ತವಾಗಿಲ್ಲ. ಪ್ರಸಿದ್ಧ ವೈದ್ಯರಿಂದ ಅದೆಲ್ಲವನ್ನೂ ತಿಳಿದು ಅನುಭವಕ್ಕೆ ತಂದುಕೊಳ್ಳುವುದು ಉತ್ತಮವು.

---

॥ ಶ್ರೀ ಜಗದ್ಗುರು ಸಿದ್ಧಲಿಂಗ ಮಹಾಸ್ವಾಮಿ ॥

# ಸಮಸ್ತ ಜನಗಳಲ್ಲಿ ವಿನಂತಿ.

ಮಹಾಶಯರೇ,

ಈ ಮೊದಲು ನಾನು ಶ್ರೀಮದುಜ್ಜಯಿನಿ ಮಹಾಸಂಸ್ಥಾನದಲ್ಲಿದ್ದು, ಶ್ರೀ॥ ॥ ಗಳವರ ಅಪ್ಪಣೆ ಪ್ರಕಾರ ಗ್ರಾಮಾನು ಗ್ರಾಮಗಳಲ್ಲಿ ಸಂಚರಿಸಿ, ಶಿವಕೀರ್ತನ ಮೂಲಕ ಶ್ರೀ. ರೇಣುಕಾದಿ ಜಗದಾಚಾರ್ಯರ ಮಹಿಮೆಗಳನ್ನೂ, ಶಿವಶರಣರ ಲೀಲೆಗಳನ್ನೂ ಬೋಧಿಸಲು ಪ್ರಾರಂಭಮಾಡಿರುತ್ತೇನೆ. ಆದ್ದರಿಂದ ನಿಮ್ಮ ಸ್ಥಳಗಳಲ್ಲಿ ಜರಗುವ ವಿವಾಹ, ದೀಕ್ಷಾ, ಶುಭಶೋಭನಾದಿ ಕಾರ್ಯಗಳಲ್ಲಿಯೂ, ಶ್ರಾವಣ, ನವರಾತ್ರಿ, ಶಿವರಾತ್ರಿ, ಜಯಂತಿ, ವರ್ಧಂತಿ, ಜಾತ್ರೆ, ಸಪ್ತಾಹ, ಮಹೋತ್ಸವಾದಿ ಆನಂದ ಕಾಲಗಳಲ್ಲಿಯೂ ಕರೆಯಿಸಿಕೊಂಡು ಶಿವಕಥೆಗಳನ್ನು ಹೇಳಿಸಿ ಉತ್ತೇಜನ ಕೊಡುವದಲ್ಲದೆ, ಸ್ತ್ರೀಪುರುಷರ ನಡತೆಗಳನ್ನು ಸತ್ಯ, ಸದಾಚಾರ, ಗುರುಭಕ್ತಿ, ಪಾಪ, ಪುಣ್ಯ ವಿಚಾರಗಳನ್ನು ತಿಳಿದು ಅದರಂತೆ ಆಚರಿಸಿ ಧನ್ಯರಾಗಬೇಕು. ಮತ್ತು ಪುರಾಣ, ಪ್ರವಚನ, ವೈದಿಕ ಕಾರ್ಯಗಳನ್ನು ನೆರವೇರಿಸುವದಿದ್ದರೆ, ನಮ್ಮ ಕಡೆಗೆ ಸೂಚನೆ ತಿಳಿಸಬೇಕು.

ಕೀರ್ತನಕಾರ
ವೇ॥ ಪುರಾಣಿಕಮಠದ ವಿರುಪಾಕ್ಷಶಾಸ್ತ್ರಿಗಳು,
ಸಾ॥ ಹಿರೇಹಡಗಲಿ. ಡಿ. ಬಳ್ಳಾರಿ.

# ವಿವಾಹ ಸಮಾರಂಭ
# ಕೊಟ್ಟೂರು

ಬಳ್ಳಾರಿ ಜಿಲ್ಲಾ ಕೊಟ್ಟೂರಲ್ಲಿರುವ ಶ್ರೀಮಾನ್ ಕಡಲೆ ರುದ್ರಪ್ಪನವರ ಸುಪುತ್ರಿ ಚಿ|| ಕೊಟ್ಟೂರು ಬಸಪ್ಪನಿಗೂ ಹರಪನಹಳ್ಳಿ ತಾಲೂಕು ಮಾನ್ಸರ ಮಸಲ ವಾಡದ ಹನಕ್ನಳ್ಳಿ ಶ್ರೀಮಾನ್ ಕೊಟ್ಟೂರ ಬಸಪ್ಪನವರ ಸುಪುತ್ರಿ ಹಂ|| ಕಂ|| ಶೋ|| ಚಿ|| ರುದ್ರಮ್ಮನಿಗೂ ಪಾಣಿಗ್ರಹಣ ಮಹೋತ್ಸವವು ಇದೇ ಪ್ರಮಾಥಿ ಸಂವತ್ಸರ ಜ್ಯೇಷ್ಠ ಬ|| ೩ ಸೋಮವಾರ ದಿನ ಸಾಂಗೋಪಾಂಗವಾಗಿ ನಡೆಯಿತು. ವಿವಾಹದಲ್ಲಿ ವೈದಿಕಾಂಗವಾಗಿ ಪಂಚಕಲಶ ಸ್ಥಾಪನಾಪೂರ್ವಕವಾಗಿ ಪೌರೋಹಿತ್ಯವನ್ನು ಇಲ್ಲಿಯ ಪ್ರಭು ಒಡೆಯರ ಮಠದ ವೇ|| ಮರುಳಾರಾಧ್ಯರು ನಡೆಯಿಸಿದರು.

ಈ ಮಹೋತ್ಸವ ಕಾಲದಲ್ಲಿ ಕೊಟ್ಟೂರ ಕೆಂಭಾವಿ ಮಠದ “ ಗಾನವಾದನ ವಿದ್ವಾನ್ ” ವೇ|| ಚೆನ್ನಬಸವಶಾಸ್ತ್ರಿಗಳವರು ಸಂಗೀತ ಕಛೇರಿಯನ್ನು ನಡೆಯಿಸಿದರು. ಅದೇ ಕಾಲದಲ್ಲಿ “ ಶ್ರೀ ಜಗದ್ಗುರು ಪಂಚಾಚಾರ್ಯರೂ–ವೀರಶೈವ ಮತವೂ ” ಎಂಬ ವಿಷಯದ ಮೇಲೆಯೂ, “ ಪಂಚಕಲಶ ಸ್ಥಾಪನಾ ” ವಿಷಯದ ಮೇಲೆಯೂ ವ್ಯಾಖ್ಯಾನಗಳು ನಡೆದವು. ಈ ಮಹೋತ್ಸವದಲ್ಲಿ ಯೂನಿಯನ್ ಬೋರ್ಡು ಪ್ರೆಸಿಡೆಂಟರಾದ ವೇ|| ಯಂ. ಯಂ. ಜೆ. ಚೆನ್ನಬಸವಯ್ಯನವರು, ವೈಸ್ ಪ್ರೆಸಿಡೆಂಟರಾದ ಮ|| ರಾ|| ಕಡಲೆ, ಕೆ. ಕೆ. ಕೊಟ್ಟೂರಪ್ಪನವರು, ಬೋರ್ಡ ಮೆಂಬರರು, ಕಟ್ಟಿಮನೆಶೆಟ್ಟರು, ಮ|| ರಾ|| ಬಿ. ಸಣ್ಣರುದ್ರಪ್ಪನವರು, ಮ|| ರಾ|| ಕೂಡಲಿಗಿ, ಜಿ. ಭೋಜನಗೌಡರು, ಮ|| ರಾ|| ಜಿ. ಸಣ್ಣಬಸನಗೌಡರು, ಮ|| ರಾ|| ಸ್ವಾಗಿ ದೊಡ್ಡಬಸಣ್ಣನವರು, ಮ|| ರಾ|| ನಂದಿಹಳ್ಳಿ ವೀರಭದ್ರಗೌಡರು, ಮ|| ರಾ|| ಹರಿಣೀ ರುದ್ರಪ್ಪನವರು, ಮ|| ರಾ|| ಕಂಠೀ ವೀರಭದ್ರಗಾಡರು ಇವರೇ ಮೊದಲಾದ ಇನ್ನೂ ಅನೇಕ ಪುರಪ್ರಮುಖರು ಭಾಗಿಗಳಾಗಿದ್ದರು. ಕೊನೆಗೆ ಪಂಚಾಚಾರ್ಯ ಜಗದ್ಗುರುಗಳ ಜಯಘೋಷದೊಡನೆ ಕಾರ್ಯವು ಕೊನೆಗಂಡಿತು. ಈ ಸಮಯದಲ್ಲಿ ಕೇವಲ ಕರ್ನಾಟಕ ಸಾಹಿತ್ಯಸೇವೆಗಾಗಿ ಪ್ರಯತ್ನಿಸುತ್ತ ಪಕ್ಷಪಾರ್ಟಿಗಳನ್ನು ಸದೆಬಡಿಯಲು ಆವಿರ್ಭವಿಸಿರುವ “ ಧರ್ಮರಾಜ್ಯ ” ಮಾಸಪತ್ರಿಕೆಯ ಪೋಷಣೆಗಾಗಿ ೨ ರೂಪಾಯಿಗಳು ಸಮರ್ಪಿಸಲ್ಪಟ್ಟವು.

ಓರ್ವ ಪ್ರತ್ಯಕ್ಷದರ್ಶಿ,
ಉತ್ಸವಭಾಗಿ
ಕೊಟ್ಟೂರು.

# ಕಲಾದಗಿ ಶ್ರೀ. ಮ. ಷ. ಬ್ರಹ್ಮ.
# ಗುರಲಿಂಗೇಶ್ವರ ಸ್ವಾಮಿಗಳ
# ಸ್ಮಾರಕೋತ್ಸವ

ಸಮಾಜಬಂಧುಗಳೇ:- ವಿಜಾಪುರ ಜಿಲ್ಹೆ ಪೈಕಿ ಕಲಾದಗಿ ಬೃಹನ್ಮಠದ ಶ್ರೀ. ಗುರಲಿಂಗೇಶ್ವರ ಶಿವಾಚಾರ್ಯ ಮಹಾಸ್ವಾಮಿಗಳವರು ಅನುಷ್ಠಾನ ಕೋವಿದರೂ ಬ್ರಹ್ಮಚರ್ಯ ನಿಷ್ಠಾಗರಿಷ್ಠರೂ ಆಗಿಹೋಗಿರುವ ವಿಷಯ ಜಗತ್‌ಪ್ರಸಿದ್ಧವೇ ಆದೆ. ಪುರಾಣಪ್ರವಚನಪಟುಗಳಾದ ಶ್ರೀ. ವೇ. ಪಂ. ಸಿದ್ಧಲಿಂಗದೇವರು ಬೃಹನ್ಮಠ ಹಿರೇಹರಕುಣಿ ಇವರು ಆಗಮಿಸಿ ಇದೇ ಆಷಾಢ ಬ|| ೫ ಯಲ್ಲು ಶ್ರೀಜಗದ್ಗುರು ರೇಣುಕಾಚಾರ್ಯರ ಪುರಾಣವು ಸದರಿ ಮಠದ ಸ್ವಾಮಿಗಳ ಅಧ್ಯಕ್ಷತೆಯಲ್ಲಿ ನಡೆಯಿತು. ಹಿರೇಹರಕುಣಿ ಪ್ರವಚನ ಧುರೀಣರಾದ ಶ್ರೀಗಳು ಬಹು ಉತ್ತಮವಾಗಿ ಸಂಗೀತ ಸಾಹಿತ್ಯದೊಡನೆ ಬಹು ರಹಸ್ಯವಾಗಿ ಪುರಾಣವನ್ನು ಕೇಳಿ ಹೋದ ಬಳಿಕ ಸಮಸ್ತರು ತಮ್ಮ ವೋಣಿಗಳಲ್ಲಿ ಬಹು ಉತ್ತಮವಾಗಿ ಪುರಾಣವನ್ನು ಹೇಳುತ್ತಾರೆಂಬ ಸುರುಮಳಿ ಸುಗ್ಗಿಯನ್ನು ಕೇಳಿ ಸರ್ವಮತೀಯ ಭಕ್ತ ಸ್ತ್ರೀಪುರುಷರು ತಂಡೋಪತಂಡವಾಗಿ ಬರುತ್ತಿದ್ದರು. ಶ್ರೀಮನ್ ಬಶೆಟ್ಟೆಪ್ಪನವರು ಮೆಣಸಗಿ ಸಾಕೀನ ಜಕ್ಕಲಿ ಇವರ ಸಂಗೀತವಂತೂ ಜನಗಳಿಗೆ ಆನಂದವನ್ನುಂಟುಮಾಡುತ್ತಿದ್ದಿತು. ಇದಲ್ಲದೆ ರೋಣತಾಲೂಕ ಪೈಕಿ ಚಿಕ್ಕಮಣ್ಣೂರು ಬೃಹನ್ಮಠ ಶ್ರೀ. ಮ. ಷ. ಬ್ರಹ್ಮ. ರೇವಣಸಿದ್ಧ ಶಿವಾಚಾರ್ಯ ಪಟ್ಟದಸ್ವಾಮಿಗಳವರು ಆಗಾಗ್ಗೆ ಧಾರ್ಮಿಕ ಸಮಂಧವಾಗಿ ಅನೇಕಮಾದರಿಕೊಟ್ಟು ವ್ಯಾಖ್ಯಾನವನ್ನು ಮಾಡುತ್ತಿದ್ದರು. ಇವರಂತೆ ೯, ೧೦ ದಿನಗಳವರೆಗೆ ನಡೆದು ಪುಣ್ಯ ತಿಥಿ ಆರಾಧನೆಯು ಇದೇ ಆಷಾಢ ಬ|| ೧ಳ ರಲ್ಲು ತಾ. ೧೫—೭—೩೯ನೇ ಶನಿವಾರ ೧೦, ೧೨ ಸಾವಿರ ಭಕ್ತಮಹೇಶ್ವರರು ಈ ಆರಾಧನೆಗೆ ಆಗಮಿಸಿದ್ದರು. ಶ್ರೀಗುರು ಪಟ್ಟದ ಚರಾಧಿಕಾರಿಗಳಾದ ಸೂಡಿ, ಚಿಕ್ಕಮಣ್ಣೂರು, ಸತ್ತೀಗೇರಿ, ರಾಮದುರ್ಗ, ಲೋಕಾಪೂರ, ಮುಧೋಳ ಮೊದಲಾದ ಶ್ರೀಗಳು ದಯಮಾಡಿಸಿದಲ್ಲಿ ಬಹು ಶೋಭಾಯಮಾನವಾಗಿತ್ತು. ಪುರಾಣನಡೆದನಂತರ ಕೀರ್ತನ ಕೇಸರಿ ವೇ|| ವೀರಯ್ಯ ಶಾಸ್ತ್ರಿಗಳು ಕನಕಗಿರಿ ಹಿರೇಹಾಳ ಇವರು ಶಿವಕೀರ್ತನವನ್ನು ಬಹು ಸ್ವಾರಸ್ಯವಾಗಿ ಹೇಳಿದರು. ಗುರುಭಕ್ತಿಯುತರಾದ ಶ್ರೀಮನ್ ಮಹದೇವಪ್ಪ ಮಾಸ್ತರ ನೂಲವಿ ಇವರು ಧರ್ಮದ ವಿಷಯವಾಗಿ ವ್ಯಾಖ್ಯಾನವನ್ನು ಚನ್ನಾಗಿಮಾಡಿದರು. ಶ್ರೀ ಪಟ್ಟಾಧ್ಯಕ್ಷ ಸ್ವಾಮಿಗಳು ರಾಮದುರ್ಗ ಇವರನ್ನು ಪಾಲಕಿಯಲ್ಲಿ ಕೂಡ್ರಿಸಿ ಹಾಗೂ ಜಗದಾಚಾ

ರ್ಯರ ಪುರಾಣದ ಕಲಾದಗಿ ಬೃಹನ್ಮಠದ ಶ್ರೀಗುರು ಲಿಂಗೇಶ್ವರ ಸ್ವಾಮಿಗಳವರ ಭಾವಪೊಟೊ ಸಹಿತ ಇಟ್ಟು ಮಹೋತ್ಸವವು ಬಹು ವಿಜೃಂಭಣೆಯಿಂದ ನಡೆಯಿತು. ಬಾಜಾ ಬಜೆಂತ್ರಿ ಬ್ಯಾಂಡ ಡೊಳ್ಳು ಹಾಗು ಜಗದಾಚಾರ್ಯರ ಭಜನಾಸಂಘ ಘೋರ ಗಡಿಯುತ್ತಿದ್ದವು. ಸುಮಂಗಲೆಯರು ಆರತಿಯನ್ನು ಬೆಳಗುತ್ತ ಮಂಗಳ ಸ್ತೋತ್ರ ಗಳನ್ನು ಪಾಡುತ್ತಿದ್ದರು. ಭಕ್ತಸಮೂಹಕ್ಕೆ ಒಂದು ತರಹದ ಭಕ್ತಿ ಉತ್ಪನ್ನ ವಾಗಿ ಒಳ್ಳೇಹುರುಪಿನಿಂದ ಅಲ್ಲಲ್ಲಿಗೆ ಜಯಘೋಷವನ್ನು ಮಾಡುತ್ತ ತಮ್ಮ ಆಸ್ತಿಕ್ಯ ಭಕ್ತಿ ಭಕ್ತಿಯನ್ನು ಹೊರಚಲ್ಲುತ್ತಿದ್ದರು. ಉತ್ಸವದಲ್ಲಿ ಶ್ರೀಮನ್, ಚಟ್ಟಿ ಪಿನಷೀ ನರ ಮಾಮಲೇದಾರ ಸಾಹೇಬರು ಆಗಮಿಸಿದ್ದರು. ಗೌರ್ಮೆಂಟ ಶ್ರೀಮನ್ ಹವಾ ಲದಾರ ಸಾಹೇಬರು ಯಾವತರಹ ಗದ್ದಲವಾಗದಂತೆ ಉತ್ಸವದಲ್ಲಿ ಒಳ್ಳೇ ಮುತ ವರ್ಜಿಯಿಂದ ಕಾರ್ಯಮಾಡಿದರು. ದೇವಲೋಕದಲ್ಲಿ ಮತಾಭಿಮಾನಗಳಿಲ್ಲದಂತೆ ಈ ಕಲಾದಗಿಯಲ್ಲಿ ಸಮಸ್ತ ಧರ್ಮದವರು ಶ್ರೀ ಗುರುಲಿಂಗೇಶ್ವರ ಮಹತಪಸ್ವಿ ಗಳ ಸೇವೆಗೆ ಪಾತ್ರರಾಗಿ ಆರಾಧನೆ ಮಹೋತ್ಸವ ಪುರಾಣ ಶ್ರವಣ ನಡಿಸಬೇಕಾದರೆ ಈ ಗುರುಮಠದ ಸ್ವಾಮಿಗಳು ಧಾರ್ಮಿಕ ದೃಷ್ಟಿಯುವರು ಇರುವದರಿಂದ ಇಷ್ಟು ಮಹತ್ತರ ಕಾರ್ಯ ನಡೆಯುತ್ತವೆಂದು ಬರೆಯಲಿಕ್ಕೆ ಸಂದೇಹವಿಲ್ಲ. ಪ್ರಾಚೀನ ದಿಂದ ಈ ಆರಾಧನೆಯು ಪುಣ್ಯತಿಥಿ ಸಮಾರಂಭ ನಡೆಯುತ್ತಿರುವದು ಬಹು ಸ್ತುತ್ಯ ವಾದ ವಿಷಯವಾಗಿದೆಂದು ತಿಳಿಸುವ,

ಜಿ. ಆರ್. ಕಲಾದಗಿ

---

# ಲಿಂಗಧಾರಣಕ್ಕರ್ಹರು ಯಾರು ?

[ಲೇಖಕ:—ಪುಟ್ಟಯ್ಯ ಕಳ್ಮಠ ತೆಲಗಿ]

'ಜಗತ್‌ಕರ್ತನಾದ ಪರಮಾತ್ಮನು ಈ ಸೃಷ್ಟಿಯಲ್ಲಿ ಅನೇಕ ಪದಾರ್ಥಗ ಳನ್ನು ನಿರ್ಮಾಣ ಮಾಡಿದ್ದಾನೆ. ಅವುಗಳಲ್ಲಿ ಸಾಮಾನ್ಯವಾಗಿ (೧) ಪ್ರಾಣಿಗಳು (೨) ಖನಿಜಗಳು (೩) ವನಸ್ಪತಿಗಳು ಹೀಗೆ ಮೂರು ಭಾಗಗಳನ್ನು ಮಾಡಬಹುದು. ಪ್ರಾಣಿಭಾಗದಲ್ಲಿಯೂ ಮುಖ್ಯವಾಗಿ ಮನುಷ್ಯಪ್ರಾಣಿಯು ಶ್ರೇಷ್ಠತರಗತಿಯದು ಎಂದು ಹೇಳಲು ಯಾವಬಾಧಕವೂಇಲ್ಲ. ಈ ಮನುಷ್ಯ ಪ್ರಾಣಿಯು ಇಹ ಪರಗಳೆ ರಡರಲ್ಲಿಯೂ ಪರಮೇಶ್ವರನ ಅನುಗ್ರಹಕ್ಕೆ ಪಾತ್ರವಾಗಬೇಕಾದರೆ ಅನೇಕ

ಸತ್ಕರ್ಮಗಳೂ, ಸದಾಚಾರಗಳೂ, ಹೀಗೆ ಅನೇಕ ಸದ್ವರ್ತನಗಳೂ ಬೇಕಾಗುವವು. ಮನುಷ್ಯ ಪ್ರಾಣಿಯು ತಾಯಿಯ ಗರ್ಭದಿಂದ ಅವನಿಯಲ್ಲಿ ಅವತರಿಸಿದೊಡನೆಯೇ ಅವನ ಪ್ರಾಣಕ್ಕಿಂತಲೂ ಹೆಚ್ಚು, ಶ್ರೇಷ್ಠವಾದ ಲಿಂಗವು ಅವಶ್ಯವಾಗಿ ಧರಿಸಲ್ಪಡ ಬೇಕಾಗುವದು. ಅಂಥ ಮಹತ್ತರವಾದ, ಶ್ರೇಷ್ಟವಾದ ಪ್ರಾಣಲಿಂಗವು ಯಾರಿಗೆ ಅವ ಶ್ಯವದೆ? ಅದನ್ನು ನಾವು ಯಾರಿಗೆ ದಯಪಾಲಿಸುವದು ಯೋಗ್ಯವದೆ? ಎಂಬದನು ಸ್ವಲ್ಪ ವಿಚಾರಿಸುವಾ!

ನಮ್ಮೀ ಪವಿತ್ರವಾದ ಕನ್ನಡನಾಡಿನ ಪ್ರಾಚೀನ ನಿವಾಸಿಗಳಾದ ಆರ್ಯರು ಮನುಷ್ಯಪ್ರಾಣಿಯಲ್ಲಿ ೪ ವಿಭಾಗಗಳನ್ನುಮಾಡಿ (೧) ಬ್ರಾಹ್ಮಣ (೨) ಕ್ಷತ್ರಿಯ (೩) ವೈಶ್ಯ (೪) ಶೂದ್ರರೆಂದು ಹೆಸರಿಟ್ಟಿರುವರು. ಈ ಭಾಗಗಳನ್ನು ಕೇವಲ ಅವರ ಉಪಜೀವನ ಹಾಗೂ ಸಮಾಜ ಸುಧಾರಣೆ ಇವುಗಳಸಲುವಾಗಿ ಮಾಡಿರುವರು. ಈ ನಾಲ್ಕುವರ್ಣಗಳಲ್ಲಿ ಯಾವ ಬಗೆಯಾದ ಭಿನ್ನಭಾವಗಳು ಇಲ್ಲವೆಂದು ಪಾರಮೇ ಶ್ವರಾಗಮದಲ್ಲಿ ಉಕ್ತವಾಗಿದೆ. :—

"ಸ್ತ್ರೀಯೋ ಬಾಲಾಸ್ತಥಾವೃದ್ಧಾಃ ಖಂಜಾಃ ಕುಬ್ಜಾಂಧ ಪಂಗವಃ |
ಮಲ್ಲಿಂಗಧಾರಣಾದೇವ ಮದ್ರೂಪಾಃ ಏವತೆ ಶಿವೇ ||
ನ ಸ್ಪೃಷ್ಟಿರ್ನರಜೋದೋಷೋ ನ ಸ್ತ್ರೀಬಾಲಾದಿ ಕಲ್ಪನಾ |
ನ ಜನ್ಮಮರಣಾ ಶೌಚಂ ನ ಸ್ನಾನಾದಿ ವಿಧಿರ್ಯತಃ ||
ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ಶೂದ್ರಾಯೇಚಾನ್ಯ ಜಾತಯಃ |
ಲಿಂಗಧಾರಣ ಮಾತ್ರೇಣ ಶಿವ ಏವ ನ ಸಂಶಯಃ ||
ಯಶ್ಯಾಸ್ತಿ ಭಕ್ತಿರೀಶಾನಿ ವೀರಶೈವ ಮತಾಶ್ರಯೇ |
ಭಕ್ತಿಮಾತ್ರ ಪವಿತ್ರಾಹಿ ಸರ್ವ ಏವಾಧಿಕಾರಿಣಃ ||

ಈವಿಧವಾದ ಸಂಸರ್ಗವು ಇಂದಿನದಲ್ಲ. ನಿನ್ನಿನದಲ್ಲ ರಾಮಾಯಣ ಮಹಾಭಾ ರತಾದಿ ಕಾಲದಿಂದಲೂ ಬಂದಿರುವದೆಂದು ಧರ್ಮಶಾಸ್ತ್ರಗಳಿಂದ ಕಂಡುಬರುವದು ಈಗೀಗ ಲಿಂಗವೆಂದರೇನು? ಅದರ ಮಹತ್ವವೇನು? ನಾವು ಅದನ್ನು ಏಕೆ ಧರಿಸ ಬೇಕು? ಈ ಎಲ್ಲಾಪ್ರಶ್ನೆಗಳನ್ನು ಮೂಲೆಗೆ ದೂಡಿ ತಮ್ಮ ಮನಸ್ಸಿನ ಒಲವಿನಂತೆ ಆಚರಣೆಗಳು ಬಳಿಕೆಯಲ್ಲಿ ಬಂದಿವೆ. ಇವು ಬಂದಿರುವದಕ್ಕೆ ಒಂದು ಕಾರಣವಿರು ವದು. ಅದು ಯಾವದೆಂದರೆ, ಅಜ್ಞಾನ ಮತ್ತಾವುದೂ ಅಲ್ಲ. ಯಾವದಾದರೊಂದು ಕರ್ಮದ ಅತಿರೇಕವಾದರೆ ಅದರಲ್ಲಿ ಅನಾದರವೂ, ದುರಾಚಾರಗಳೂ, ದುಷ್ಕೃತ್ಯ ಗಳೂ ಉಂಟಾಗಿ ಮನುಷ್ಯನಿಗೆ ಒಮ್ಮೆಲೇ ಯಾವಕೃತ್ಯವನ್ನೂ ಮಾಡಲಿಕ್ಕಾಗುವ ದಿಲ್ಲ. ಅದರಂತೆ ಈಗ ಅಜ್ಞಾನಮಯ ಆಚಾರಗಳು ರೂಢವಾಗಿ

ಧರ್ಮಾಚಾರಗಳನ್ನು ಹೇಗೆ ಹಿಡಿಯಬೇಕೆಂಬದು ಹಿಂದೆ ಬಿದ್ದಿದೆ. ಯಾವುದಾದರೊಂದು ಕೃತ್ಯವು ಅಥವಾ ಆಚಾರವು ಮುಳುಗುವ ದುರ್ದೈವಕ್ಕೆ ದುಷ್ಕೃತ್ಯ—ಅನಾಚಾರಗಳ ಅತಿರೇಕವೇ ಮುಖ್ಯಕಾರಣ. ಇದರಂತೆ ಈಗ ಧರ್ಮಾಚರಣೆಗಳಲ್ಲಿ ಲೋಪ ಬಂದಿದೆ. ಇದನ್ನು ಒಮ್ಮೆಲೇ ನೀಗಿಸುವದು ಧರ್ಮರಾಯನಿಗೆ ತನ್ನ ಸತ್ತತಮ್ಮನ ಹುಚ್ಚು ಬಿಡುವದಕ್ಕೆ ಹೇಗೆ ಅಸಾಧ್ಯವಾಯಿತೋ ಹಾಗೆಯೇ ಸರಿ. ಕಾರಣ ಧರ್ಮಾಭಿರುಚಿಯುಳ್ಳ ಪ್ರತಿಯೊಬ್ಬ ವ್ಯಕ್ತಿಯು ಧರ್ಮದ ಮೇಲೆ ಮಮತೆ, ಅಭಿಮಾನ, ಹೀಗೆ ಇನ್ನೂ ಅನೇಕ ಸದ್ಗುಣಗಳುಳ್ಳವನಾಗಬೇಕು. ಯಾವವರ್ಣದ ಮನುಷ್ಯ ಪ್ರಾಣಿಗಾದರೂ ಲಿಂಗಧಾರಣ ಮಾಡಲಿಕ್ಕೆ ಏನೂ ಪ್ರತಿಬಂಧವಿಲ್ಲವೆಂಬ ಮಾತನ್ನು ಸಾರಿ ಸಾರಿ ಹೇಳುವ ಅನೇಕ ಸ್ಮೃತಿ ಶ್ಲೋಕಾಭಿಪ್ರಾಯದಂತೆ ವರ್ತಿಸಿದರೆ ನಮ್ಮ ಧರ್ಮವೂ ರಾಷ್ಟ್ರವೂ ಉರ್ಜಿತಸ್ಥಿತಿ ಹೊಂದುವದರಲ್ಲಿ ಏನೂ ಸಂದೇಹವಿಲ್ಲ.

ಸರ್ವೇ ಜನಾಃ ಸುಖಿನೋಭವಂತು

---

## ಸಮಸ್ತ ಜನಗಳಲ್ಲಿ ವಿನಂತಿ ಪತ್ರಿಕೆ—

ಶ್ರೀಮತ್ಪರಶಿವನ ಪರಾವತಾರಿಗಳೂ ತಪೋನಿಧಿಗಳೂ ಶಾಪಾನುಗ್ರಹ ಸಮರ್ಥರೂ ಮಹಿಮಾಶಾಲಿಗಳೂ ವೀರಶೈವ ಮತಪ್ರಭಾಕರೂ ಆದಂಥ ಶ್ರೀಮದುಜ್ಜಯಿನೀ ಸದ್ಧರ್ಮ ಸಿಂಹಾಸನಾಧೀಶ್ವರ (ಲಿಂಗೈಕ್ಯರಾದ) ಶ್ರೀಮಜ್ಜಗದ್ಗುರು ಸಿದ್ಧಲಿಂಗ ಶಿವಾಚಾರ್ಯ ಮಹಾಸ್ವಾಮಿಗಳವರು ಜಗತ್ತಿನಲ್ಲಿ ಅನಂತಾನಂತ ಮಹಿಮಾತಿಶಯಗಳನ್ನು ತೋರ್ಪಡಿಸಿರುವದು ಸುಪ್ರಸಿದ್ಧವೇ ಅದೆ.

ಆದರೆ ಈ ಮಹಾನುಭಾವರು ಜನನಾರಭ್ಯ ಅಂತ್ಯದವರೆಗೂ ನಡೆಯಿಸಿರುವ ಲೀಲಾವಳಿ ಮಹತ್ಕಾರ್ಯ ಮುಂತಾದವುಗಳನ್ನು ಸಂಗ್ರಹಿಸಿ ಗದ್ಯ (ವಚನ) ರೂಪದಿಂದ ಲಿಖಿಸಿ ಶ್ರೀ. ಸಿದ್ಧಲಿಂಗೇಶ ವಿಜಯ,, ವೆಂಬ ಪವಿತ್ರಾಭಿಧಾನದಿಂದ ಮುದ್ರಣಗೊಳಿಸಿ ಸರ್ವರ ಕರಕಮಲಗಳಲ್ಲಿ ವಿರಾಜಿಸುವಂತೆ ಮಾಡಲು ಯತ್ನಿಸಿರುತ್ತೇವೆ. ಆದುದರಿಂದ ಆ ಮಹಿಮರು ದೇಶಮಧ್ಯ ಅಲ್ಲಲ್ಲಿ ನಡೆಯಿಸಿದ ಮಹತ್ಕಾತಿಶಯಗಳನ್ನು (ಪ್ರತ್ಯಕ್ಷ ನೋಡಿದವರೂ ಕೇಳಿದವರೂ) ಬರೆದು ಕೆಳಗಿನ ವಿಳಾಸಕ್ಕೆ ದಯವಿಟ್ಟು ಕಳುಹಿಸಿ ಕೊಡಬೇಕೆಂದು ಬಯಸುತೇವೆ.

ಪುರಾಣಿಕ ಮಠದ ವೇ|| ವಿರೂಪಾಕ್ಷ ಶಾಸ್ತ್ರಿಗಳು
ಸಾ|| ಹೀರೇಹಡಗಲಿ— ಜಿ|| ಬಳ್ಳಾರಿ

ಶ್ರೀಜಗದ್ಗುರು ಏಕೋರಾಮಾರಾಧ್ಯಃ ಪ್ರಸೀದತು—



ಶ್ರೀಮದ್ವೇದಾಗಮೋಪನಿಷದಾದಿ ಸಕಲ ಶಾಸ್ತ್ರ ಪ್ರಸಿದ್ಧ ವೀರಶೈವ ಮಹಾ ಮತಸ್ಥಾಪನಾಚಾರ್ಯ-ಶ್ರೀ-ಹಿಮವತ್ಕೇದಾರ ಮಹಾಕ್ಷೇತ್ರಮಧ್ಯನಿದ್ಯೋತಮಾನ ರಾಮನಾಥಲಿಂಗ ಗರ್ಭಾವಿರ್ಭೂತ ಜಗದ್ಗುರು ಏಕೋರಾಮಾರಾಧ್ಯ ಭಗವತ್ಪಾದಾಚಾರ್ಯ ಪರಂಪರಾಗತ ವೈರಾಗ್ಯ ಸಿಂಹಾಸನಾಧೀಶ್ವರ ಚರಪಟ್ಟಾಧ್ಯಕ್ಷ ಶ್ರೀ ೧೦೮ ಜಗದ್ಗುರು ಚಿದ್ಘನಲಿಂಗ ಶಿವಾಚಾರ್ಯ ಮಹಾಸ್ವಾಮಿನಾಂ ಸನ್ನಿಧಾನೇನ.

ಶ್ರೀಜಗದ್ಗುರು ಪದನಖಚಂದ್ರಸಾಂದ್ರ ರುಚಿರುಂದ್ರ ಚಂದ್ರಿಕಾಚಂಚಚ್ಚಕೋರಾಯಮಾನ ಕೇವತಾಸ್ಮದೀಯ ಕಾರುಣ್ಯಾಮೃತ ಸರಸೀಮರಾಲೋಪಮಾನರಾದಂಥ ಬಳ್ಳಾರಿ ಜಿಲ್ಲಾ ಹುವ್ವಿನ ಹಡಗಲಿ ತಾಲೂಕ ಹಿರೇಹಡಗಲಿ ಪುರಾಣಿಕ ಮಠದ ಗುರುಶಾಂತಾಚಾರ್ಯರ ಪುತ್ರ ವೇ|| ವಿರೂಪಾಕ್ಷಶಾಸ್ತ್ರಿಗಳಿಗೆ ಬರೆಯಿಸಿದ ಹುಕುಂ.

ನೀವು ತಾರೀಖು ೫-೭-೧೯೩೭-ರಲ್ಲು-ಒಪ್ಪಿಸಿದ ಅರ್ಜಿಯನ್ನು ಪರಾಂಬರಿಸೋಣವಾಯಿತು. ಪ್ರಾಚೀನ ಕಾಲದಿಂದಲೂ ನಿಮ್ಮ ಮಠನ ವಂಶಜರು ವಿದ್ವಾಂಸರಾಗಿಯೂ ಗೌರವಶಾಲಿಗಳಾಗಿಯೂ ಮತ್ತು ಹರಪುರಿ (ಹರಪನಹಳ್ಳಿ) ಸೋಮಶೇಖರ ಮಹಾರಾಜರಿಂದ ಇನಾಂ ಜಮೀನು ಮುಂತಾದವುಗಳನ್ನು ಪಡೆದು ಸನ್ಮಾನಿತವಾದ ಶಾಸನಗಳುಳ್ಳವರಾದ್ದರಿಂದಲೂ ನಿಮ್ಮ ಗ್ರಾಮದಲ್ಲಿ ಮಠಸಂಬಂಧವಾದ ಆಚಾರ ಬಾಬುಗಳನ್ನು ವಿಚಾರ ಮಾಡುತ್ತಾ ಸಿಂಹಾಸನಾಧಿಪತಿಗಳಿಗೆ ಅರಿಕೆ ಮಾಡಿಕೊಳ್ಳುವದಕ್ಕೂ ಅಲ್ಲಿಂದ ಬಂದ ಹುಕುಮುಗಳನ್ನು ಜಾರಿ ಮಾಡುವದಕ್ಕೂ ಮತ್ತು ಶಿವಭಕ್ತಿಯಿಂದ ನಡೆಯುಲೊಪ್ಪುವ ಹಾಲುಮತ ಮುಂತಾದ ಜನರಿಗೆ ಲಿಂಗಧಾರಣ ಮಾಡುವದಕ್ಕೂ ನಿಮಗೆ ಹುಕುಂ ಕೊಡೋಣವಾಗಿರುತ್ತದೆ.

ನಿಮ್ಮ ಶಿಷ್ಯಾರ್ಜನೆಗೆ ಹೊರಟ ಕಾಲದಲ್ಲಿಯೂ ಹಾಗು ಇತರ ಮಹೋತ್ಸವಾದಿ ಕಾರ್ಯಗಳಲ್ಲಿಯೂ ಉಪಯೋಗಿಸಲು ಗೌರವಾರ್ಥವಾಗಿ ನಮ್ಮ ಸಂಸ್ಥಾನದಿಂದ (೨) ಜನಾನಬಿಲ್ಲೆ ಹುಕುಂ ದಯಪಾಲಿಸೋಣವಾಗಿರುತ್ತದೆ. ನಿಮ್ಮ ವಂಶಪಾರಂಪರ ಉಪಯೋಗಿಸಿಕೊಳ್ಳತಕ್ಕದ್ದು.

ಮುಕ್ಕಾಂ - ನೀಲಗುಂದ
ತಾಲೂಕ - ಹರಪನಹಳ್ಳಿ
ಜಿಲ್ಲಾ - ಬಳ್ಳಾರಿ
ತಾರೀಖು ೮-೭-೧೯೩೭

(ಇಲ್ಲಿ ಬಾಲಬೋಧಾಕ್ಷರಗಳಿಂದ)
( ಶ್ರೀಗಳವರ ಸಹಿ ಅದೆ )

ಪುಷ್ಟವೂ ರೋಗರಹಿತವೂ ಆಗಿರಲು ಸಾಧ್ಯವಿಲ್ಲ. ಶಾಸ್ತ್ರವು ನಿಷೇಧ ಮಾಡಿರುವ ಅನ್ನವನ್ನು ತಿನ್ನುವುದರಿಂದ ಶರೀರವು ಕೆಡುವುದಲ್ಲದೆ ಆಯುಷ್ಯವೂ ಕಡಿಮೆಯಾಗುವುದು ಸತ್ಯ. ಆದುದರಿಂದ ಹಿಂದೂಶಾಸ್ತ್ರದ ಹಾಗೂ ಹಿಂದೂ ಸಮಾಜದ ವಿಧಿ ನಿಷೇಧಗಳನ್ನೊಪ್ಪಿಕೊಂಡು ಉಣ್ಣುವ ಪದಾರ್ಥ, ಎರಡನೆಯವರ ಎಂಜಲ, ಪಾತ್ರೆ, ಜಾತಿ ಮುಂತಾದವು ಕಡೆಗೆ ವಿಶೇಷದೃಷ್ಟಿಯಿಟ್ಟು ನಡೆಯುವುದು ಉಚಿತವಾಗಿದೆ.

ಪ್ರತಿಯೊಂದು ಜನಾಂಗದಿಂದ ಸಿದ್ಧಗೊಳಿಸಲ್ಪಟ್ಟ ಅನ್ನವನ್ನು ಪ್ರತಿಯೊಂದು ಜನಾಂಗದೊಡನೆ ಬೆರೆತು ಅಥವಾ ಪ್ರತಿಯೊಂದು ಸ್ಥಾನದಲ್ಲಿ ಕುಳಿತು ಉಣ್ಣುವುದು ಎಂದಿಗೂ ಯೋಗ್ಯವಲ್ಲ. ನಾವು ಹೀಗೆ ಹೇಳುವುದು ಯಾವುದೊಂದು ಜಾತಿ ಅಥವಾ ಜನಾಂಗದೊಡನೆ ದ್ವೇಷಮಾಡಬೇಕೆಂದಲ್ಲ. ಒಂದುವೇಳೆ ದ್ವೇಷವೆಂದೇ ತಿಳಿದುಕೊಂಡರೆ—ಬ್ರಾಹ್ಮಣರೂ ಕೂಡ ಊಟಮಾಡುವಾಗ ಹೆಂಡರು ಮಕ್ಕಳೇ ಮುಂತಾದವರನ್ನು ಮುಟ್ಟಬಾರದೆಂತಲೂ, ಮುಟ್ಟಿಕೊಂಡರೆ ಅಷ್ಟಕ್ಕೇ ಊಟವನ್ನು ಮುಗಿಸಬೇಕೆಂತಲೂ ಹೀಗೆಯೇ ಬ್ರಾಹ್ಮಣನು ಊಟಮಾಡುವಾಗ ಶೂದ್ರಸ್ಪರ್ಶದಿಂದ ಭೋಜನವಸ್ತುವು ಸ್ವೀಕಾರಕ್ಕೆ ಅಯೋಗ್ಯವಾಗುವುದೆಂತಲೂ ಶಾಸ್ತ್ರವು ಹೇಳುತ್ತಿದೆ. ಎಂದಮೇಲೆ ಇದನ್ನೂ ದ್ವೇಷವೆಂದೇ ತಿಳಿಯಬೇಕಾದೀತು. ಯಥಾರ್ಥವಿಷಯವು ಹೀಗಿದ್ದರೂ ದುಷ್ಟಬುದ್ಧಿಯುಳ್ಳ ಜನರು ಇದನ್ನೇ ವಿಪರೀತವಾಗಿ ತಿಳಿದುಕೊಂಡು, ಜಾತಿಜಾತಿಗಳಲ್ಲಿ ವಿರೋಧವನ್ನುಂಟುಮಾಡುವುದು ತರವಲ್ಲ. ಶಾಸ್ತ್ರದೃಷ್ಟಿಯು ಬಹು ಸೂಕ್ಷ್ಮವಾದದು, ಅಂತೆಯೇ ಮನುಷ್ಯನು ಅಸಮರ್ಥನಾಗಿದ್ದರೆ ತನ್ನ ವರ್ಗದವರು ಮಾಡಿದುದನ್ನು ಊಟಮಾಡುವ ಮಾತುಬೇರೆ, ಆದರೆ ತನ್ನಸಲುವಾಗಿ ಅಡಿಗೆಯನ್ನು ತಾನೇ ಮಾಡಿಕೊಳ್ಳುವುದುತ್ತಮವೆಂದು ಹೇಳುವುದಕ್ಕೂ ಧರ್ಮಶಾಸ್ತ್ರವು ಹಿಂದೆಸರಿದಿಲ್ಲ; ಆದುದರಿಂದ ಯಾರು ದುರಾಚಾರವುಳ್ಳವರೋ, ಯಾರು ತಮೋಗುಣವುಳ್ಳವರೋ! ಯಾರು ನಾನಾಪ್ರಕಾರವಾದ ದೂಷಿತ ವ್ಯಾಧಿಯುಳ್ಳವರೋ ಅಂತಹ ಜನರು ಮಾಡಿದ ಅಥವಾ ಮುಟ್ಟಿದ ಅನ್ನವನ್ನು ಊಟಮಾಡಬಾರದು; ಮಾಡಿದರೆ ಆ ಕೂಡಲೇ ದೂಷಿತ ಪರಮಾಣುಗಳು ಹುಟ್ಟಿ ಊಟಮಾಡುವವನ ಶರೀರದಲ್ಲಿ ಹೊಕ್ಕು ಸ್ವಾಸ್ಥ್ಯವನ್ನು ಕೆಡಿಸಿಬಿಡುವವು. ಈ ಸಂಸಾರದಲ್ಲಿ ಒಳ್ಳೆಯವರಾರು ಕೆಟ್ಟವರಾರೆಂಬದನ್ನು ನಿಶ್ಚಯಮಾಡುವುದು ಬಹು ಕಠಿಣವಾದಕೆಲಸ, ಒಂದುವೇಳೆ ಬ್ರಾಹ್ಮಣನು ಬ್ರಾಹ್ಮಣನಲ್ಲವೆಂತಲೂ, ಚಾಂಡಾಲನು ಚಾಂಡಾಲನಲ್ಲವೆಂತಲೂ ಹೇಳಿಸಿಕೊಳ್ಳಬಹುದು, ಆದರೆ ಹೊರಗಿನ ಆಚಾರ ವಿಚಾರಗಳಿಂದ ಅಥವಾ ಆಕಾರ ಸ್ವಭಾವಗಳಿಂದ ಬ್ರಾಹ್ಮಣನನ್ನು ಚಾಂಡಲನನ್ನಾಗಿಯೂ, ಚಾಂಡಾಲನನ್ನು ಬ್ರಾಹ್ಮಣನನ್ನಾಗಿಯೂ ಯಾರೂ ಸಾಧಿಸಲಿಕ್ಕಾಗುವ

ದಿಲ್ಲ. ಸಣ್ಣದೊಡ್ಡ ಎಲ್ಲಾ ವರ್ಣಗಳಲ್ಲಿಯೂ ಪವಿತ್ರ ಚಿತ್ತವುಳ್ಳ, ಒಳ್ಳೆಯ ಅಭಿಪ್ರಾಯವುಳ್ಳ, ಜಿತೇಂದ್ರಿಯರಾದ ಸಜ್ಜನರು ಇದ್ದೇ ಇರುವರು. ಅವರೂ ಬ್ರಾಹ್ಮಣನಾದವನು ಈತನು ಸತ್ವಗುಣಸಂಪನ್ನನೆಂದು ತಿಳಿದು ಚಾಂಡಾಲನು ಬೇಯಿಸಿದ ಅಥವಾ ಮುಟ್ಟಿದ ಅನ್ನವನ್ನು ಊಟಮಾಡಲಪೇಕ್ಷಿಸುವುದು ಮಹಾಪರಾಧವು.

ಮಾತೃ ಪಿತೃಕುಲವು ಯಾವುದಾದರೂ ಆಯಾ ವರ್ಣದವರಿಗೆ ಅದು ಪವಿತ್ರವಾದುದೇ ಸರಿ! ಇದನ್ನರಿಯದ ಜನರೂ ನಿಮ್ಮ ವರ್ಣವಾವುದೆಂದು ಯಾರಾದರೂ ಕೇಳಿದರೆ ಅವರಮೇಲೆ ಕೋಪಗೊಂಡು ಯಾವ ವರ್ಣದಲ್ಲೇನಿದೆ, ನಾನೂ ಬ್ರಾಹ್ಮಣನೇ ಎಂದು ಉತ್ತರಕೊಡುತ್ತಿರವುದು ಇದೀಗ ಎಲ್ಲೆಲ್ಲಿಯೂ ಕಂಡುಬರುತ್ತಿದೆ; ತಾವು ಹುಟ್ಟಿದ ಕುಲ ಕೆಟ್ಟದೆಂದು ತಿಳಿದುಕೊಂಡಿರುವುದೇ ಹೀಗೆ ಉತ್ತರಕೊಡುವುದಕ್ಕೆ ಮೂಲಕಾರಣವಾಗಿದೆ. ಆದುದರಿಂದ ಯಾರೂ ಹಾಗೆ ತಿಳಿದುಕೊಳ್ಳದೆ ಧರ್ಮಶಾಸ್ತ್ರ ರೀತ್ಯಾ ಪೂರ್ವಪರಂಪರಾಗತವಾದ ತಮ್ಮ ತಮ್ಮ ಜಾತಿ ಅಥವಾ ಜಾತಿರೂಪವಾದ ಮೇರೆಯೊಳಗಿರುವುದು ಎಲ್ಲಾ ರೀತಿಯಿಂದಲೂ ಸುಖಪ್ರದವಾಗಿದೆ. ಹಾಗೆಯೇ ವ್ಯಭಿಚಾರಿ, ಮದ್ಯಸಕ್ತಮುಂತಾದ ಸ್ವಜಾತೀಯ ಜನಗಳ ಅನ್ನವನ್ನು ಗ್ರಹಿಸುವುದೂ ಪಾಪಕರವಾಗಿದೆ.

ಇನ್ನು ಪಾಶ್ಚಾತ್ಯ ಪಂಡಿತ ಸಮುದಾಯವೂ, ಆ ದೇಶದ ನಡವಳಿಕೆಗೆ ಮೆಚ್ಚಿ ಅವರನ್ನನುಕರಿಸುತ್ತಿರುವ ನಮ್ಮ ಭಾರತ ದೇಶದ ವಿದ್ವಾಂಸರ ಸಮುದಾಯವೂ, ಬ್ರಾಹ್ಮಣ ಮತ್ತು ಚಾಂಡಾಲರ ಅನ್ನದಲ್ಲಿ ಸ್ವಲ್ಪವೂ ಭೇದವನ್ನು ಕಾಣುತ್ತಿರಲಿಕ್ಕಿಲ್ಲ. ಆದರೆ ದೀರ್ಘಾಯುಗಳೂ ತ್ರಿಕಾಲ ಜ್ಞಾನಿಗಳೂ ಆದ ನಮ್ಮ ಪೂರ್ವದ ಆಚಾರ್ಯರ ಮತ್ತು ಮಹರ್ಷಿಗಳ ಸಿದ್ಧಾಂತವು ಇದರಿಂದೇನೂ ಹುಸಿಯಾಗುವಂತಿಲ್ಲ ಹಿಂದೂ ಶಾಸ್ತ್ರವು ಇತರರು ಮುಟ್ಟಿದ ಇಲ್ಲವೆ ಬೇಯಿಸಿದ ಅನ್ನವನ್ನು ಗ್ರಹಿಸುವದು ದೋಷಯುಕ್ತವಾದುದೆಂದು ಹೇಳಿ ಯಾವ ಸತ್ಯಸಿದ್ಧಾಂತವನ್ನು ಪ್ರಚಾರಮಾಡಿದೆಯೋ ಅದು ಅಕ್ಷರಶಃ ಯಥಾರ್ಥವಾಗಿದೆ. ಒಂದೇ ಹಾಸಿಗೆಯಲ್ಲಿ ನಿದ್ರೆಮಾಡುವುದನ್ನೂ, ಒಂದೇ ಪಂಕ್ತಿಯಲ್ಲಿ ಊಟಮಾಡುವುದನ್ನೂ, ಒಂದೇ ಆಸನದಲ್ಲಿ ಕೂಡ್ರುವುದನ್ನೂ, ಪಾತ್ರಮಿಶ್ರಣ ಪಕ್ವಾನ್ನ ಮಿಶ್ರಣಗಳನ್ನೂ, ಪುರೋಹಿತ ಕೃತ್ಯವನ್ನು, ಓದಿಸುವುದನ್ನೂ, ಶರೀರಸಂಬಧವನ್ನು, ಕೂಡಿಉಣ್ಣುವುದನ್ನೂ ಪತಿತ (ಜಾತಿಹೀನ) ರೊಡನೆ ಮಾಡಬಾರದೆಂತಲೂ, ಮಾಡಿದರೆ ಮನುಷ್ಯರಿಗೆ ಪಾಪವು ಅಂಟಿಕೊಳ್ಳುವದೆಂತಲೂ ವ್ಯಾಸಮಹರ್ಷಿಗಳು ಕೂರ್ಮಪುರಾಣದ ಆಚಾರಾಧ್ಯಾಯದಲ್ಲಿ—

ಏಕ ಶಯ್ಯಾಽಽಸನಂ ಪಂಕ್ತಿರ್ಭಾಂಡ ಪಕ್ವಾನ್ನ ಮಿಶ್ರಣಂ |
ಯಜನಾಧ್ಯಾಪನೇ ಯೋನಿಸ್ತ ಥೈವ ಸಹಭೋಜನಂ ||
ನವಧಾ ಸಂಕರಃ ಪ್ರೋಕ್ತೋ ನ ಕರ್ತವ್ಯೋಽಧಮೈಸ್ಸಹ |
ಸಮೀಪೇ ಚಾಪ್ಯವ ಸ್ಥಾನಾತ್ಪಾಪಂ ಸಂಕ್ರಮತೇ ನೃಣಾಂ ||
ತಸ್ಮಾತ್ ಸರ್ವ ಪ್ರಯತ್ನೇನ ಸಂಕರಂ ವರ್ಜಯೇದ್ಬುಧಃ

ಎಂತಲೂ ಹೀಗೆಯೇ ಪರಾಶರ ಮಹರ್ಷಿಗಳು —

ಆಸನಾಚ್ಛಯ ನಾದ್ಯಾನಾದ್ಭಾಷಣಾತ್ ಸಹಭೋಜನಾತ್ |
ಸಂಕ್ರಾಮಂತಿ ಹಿ ಪಾಪಾನಿ ತೈಲಬಿಂದುರಿವಾಂಭಸಿ ||

ಎಂತಲೂ ಹೇಳಿರುವರು. ಹಿಂದೂ ಶಾಸ್ತ್ರವು ಇದೇ ಅರ್ಥವುಳ್ಳದಾದುದರಿಂದ ಆದು ಭೋಜನ ವಿಷಯವಲ್ಲಿ ಹೇಳಿರುವ ವಿಧಿ ನಿಷೇಧಗಳನ್ನು ಎಲ್ಲರೂ ಒಪ್ಪಲೇಬೇಕು.

ಇಲ್ಲಿಯ ವರೆಗೆ ಪರಕೀಯರೊಡನೆ ಪಂಕ್ತಿ ಭೋಜನವು ನಿಷೇಧಿಸಲ್ಪಟ್ಟಿತು. ಇದು ದ್ವೇಷೋಕ್ತಿಯೆಂಬು ಯಾರೂ ತಿಳಿಯಕೂಡದು. ಶಾಸ್ತ್ರಕ್ಕೆ ಯಾರ ಮೇಲೂ ದ್ವೇಷವಿಲ್ಲ, ಸತ್ಯ ಸಿದ್ಧಾಂತವನ್ನು ಪ್ರತಿಪಾದಿಸುವದೇ ಅದರ ಕರ್ತವ್ಯವಾಗಿದೆ; ಅಂತೆಯೇ ಸ್ವಕೀಯರೊಡನೆ ಪಂಕ್ತಿ ಭೋಜನವನ್ನೂ —

ಅಷ್ಯೇಕ ಪಂಕ್ತೌ ನಾಶ್ನೀಯಾತ್ ಸಂವೃತಃ ಸ್ವಜನೈರಪಿ |
ಕೋಹಿ ಜಾನಾತಿ ಕಿಂತಸ್ಯ ಪ್ರಚ್ಛನ್ನಂ ಪಾತಕಂ ಮಹತ್ ||

ಎಂದು ನಿಷೇಧಮಾಡುತ್ತ ಗೃಹಸ್ಥ ಸಮಾಜದಲ್ಲಿ ಪಂಕ್ತಿಭೋಜನವು ನಡೆಯದಿದ್ದರೆ ಸಾಮಾಜಿಕ ನಿಯಮ ರಕ್ಷಣೆಯಾಗುವದಿಲ್ಲವೆಂದು ತಿಳಿದು ಅಂತಹ ಸಮಯದಲ್ಲಿ ಭಸ್ಮತೃಣಾದಿಗಳಿಂದ ಪಂಕ್ತಿಗಳನ್ನು ವಿಭಾಗ ಮಾಡಬೇಕೆಂದು "ಭಸ್ಮಸ್ತಂಭಜಲ ದ್ವಾರಮಾರ್ಗೈಃ ಪಂಕ್ತಿಂಚ ಭೇದಯೇತ್" ಮುಂತಾಗಿ ಹೇಳಿರುವುದು ಸ್ಪಷ್ಟವಾಗಿದೆ. ಅದುದರಿಂದ ಪ್ರತಿಯೊಬ್ಬರೂ ಪೂರ್ವ ಶಾಸ್ತ್ರ ಸಿದ್ಧಾಂತದಂತೆ ನಡೆದು ಆರೋಗ್ಯವನ್ನು ಸಂಪಾದಿಸಿ ಆನಂದದಿಂದಿರುವುದು ಉತ್ತಮವು.

ಇದೀಗ ಪ್ರಸಂಗಾನುಕೂಲವಾಗಿ ಆಹಾರ ವಸ್ತುಗಳ ಹಿತಾಹಿತ ವಿಷಯವನ್ನು ಸ್ಪಷ್ಟ—ಪ್ರತಿಪಾದಿಸೋಣ ಪ್ರಪಂಚದಲ್ಲಿ ಆಹಾರವು ಒಳ್ಳೆಯದೋ ಕೆಟ್ಟದೋ ಎಂದರಿತು ಊಟಮಾಡತಕ್ಕವರ ಸಂಖ್ಯೆ ಬಹಳ ಕಡಿಮೆ. ಅದರಿಂದ ಒಳ್ಳೆಯದರೊಡನೆ ಕೆಟ್ಟ

ಆಹಾರವು ಹೊಟ್ಟೆಯನ್ನು ಸೇರಲು ಅವಕಾಶವಾಗುವದು. ಎಲ್ಲರೂ ಈ ವಿಷಯವನ್ನು ತಿಳಿದುಕೊಂಡಿದ್ದರೆ ಪ್ರಕೃತಿಯು ವಿಕೃತವಾಗದಂತೆ ನೋಡಿಕೊಳ್ಳಬಹುದು. ಒಳ್ಳೆಯ ಆಹಾರಗಳಿಂದ ನಮ್ಮ ಶರೀರವು ಪುಷ್ಟವಾಗಿ, ಶಕ್ತಿಯುಳ್ಳದಾಗಿ, ಆರೋಗ್ಯವಾಗಿರುವುದೆಂಬುದೂ, ಹಾಗೆಯೇ ಕೆಟ್ಟ ಆಹಾರಗಳಿಂದ ತೇಜೋಹೀನವಾದುದಾಗಿ, ಆಲಸ್ಯವುಳ್ಳದಾಗಿ, ಕ್ಷೀಣವಾದುದಾಗಿ, ರೋಗಿಯಾಗಿರುವುದೆಂಬುದೂ ಸಾಮಾನ್ಯವಾಗಿ ಎಲ್ಲರಿಗೂ ಗೊತ್ತಾಗುವದು. ಇದೇ ವಿಷಯವನ್ನು ಆತ್ರೇಯ ಮಹರ್ಷಿಗಳು ತಮ್ಮ ಶಿಷ್ಯನಾದ ಅಗ್ನಿವೇಶನನ್ನು ಕುರಿತು --

" ಯದಾಹಾರಜಾತಮಗ್ನಿವೇಶ! ಸಮಾಂಶ್ಚೈವ ಶರೀರ ಧಾತೂನ್ ಪ್ರಕೃತಾಸ್ಥಾಪಯತಿ, ವಿಷಮಾಂಶ್ಚ ಸಮೀಕರೋತಿ, ಇತ್ಯೇತದ್ಧಿತಂ ವಿದ್ಧಿ; ಅಹಿತಂ ವಿಪರೀತಂ ಇತ್ಯೇತದ್ಧಿತಾಹಿತ ಲಕ್ಷಣಮನಪವಾದಂ ಭವತಿ " " ಯಾವ ಆಹಾರ ಸಮೂಹವು ಶರೀರದ ಸಮಧಾತುಗಳನ್ನು ಉತ್ತಮವಾಗಿ ಕಾಪಾಡುವದೋ, ಹಾಗೆಯೇ ವಿಷಮ ಧಾತುಗಳನ್ನು ಸರಿಪಡಿಸುವದೋ ಅದನ್ನೇ ಒಳ್ಳೆಯ ಆಹಾರವನ್ನಾಗಿಯೂ, ಇದಕ್ಕೆ ವಿರುದ್ಧವಾಗಿ ಫಲವೀಯುವುದನ್ನು ಕೆಟ್ಟ ಆಹಾರವನ್ನಾಗಿಯೂ ತಿಳಿ " ಎಂದು ಹೇಳಿದ್ದಾರೆ.

ಚರಕಸಂಹಿತೆಯನ್ನನುಸರಿಸಿ ನೋಡಿದರೆ ಸ್ವಲ್ಪ ಹೆಚ್ಚು ಕಡಿಮೆ ಕೆಂಪುಬಣ್ಣವುಳ್ಳ ಕಾಳು, ವಿಶೇಷವಾಗಿ ಹೆಸರು, ಸೈಂಧಲವಣ, ಹಸಿಯಶುಂಠಿ, ಬೀಜದ್ರಾಕ್ಷೆ, ಸಕ್ಕರೆ, ಎಳ್ಳೆಣ್ಣೆ, ಕಿರಕಸಾಲೆ ಮತ್ತು ಕಿರಿಹಾತೀ ಸೊಪ್ಪುಗಳು, ಆಕಳಹಾಲು, ತುಪ್ಪಗಳು ಸ್ವಾಭಾವಿಕವಾಗಿ ಹಿತವನ್ನುಂಟುಮಾಡತಕ್ಕವುಗಳೆಂದೂ, ಇವುಗಳನ್ನು ಯಾವಾಗ ಸೇವಿಸಿದರೂ ಯಾವ ವಿಧವಾದ ವಿಕಾರಗಳುಂಟಾಗವೆಂದೂ ತಿಳಿಯಬರುವದು. ಕಾಯಿಸೊಪ್ಪುಗಳು ಸುಲಭವಾದ ಬೆಲೆಗೆ ದೊರೆತರೂ ಅವುಗಳಲ್ಲೇ ಗುಣವು ಹೆಚ್ಚಾಗಿರುವದೆಂಬದನ್ನು ಎಲ್ಲರೂ ನೆನಪಿನಲ್ಲಿಡಬೇಕು. ಒಳ್ಳೆಯ ಆಹಾರಗಳಲ್ಲಿ ಜೀವದ್ರವ್ಯವು ವಿಶೇಷವಾಗಿರುವದರಿಂದ ಅಂಥವುಗಳ ಸೇವನೆಯಿಂದ ಮನುಷ್ಯನು ಬಲುಬೇಗನೆ ಶಕ್ತಿವಂತನಾಗುವನು. ವಿಶೇಷ ಶಕ್ತಿಯನ್ನುಂಟುಮಾಡುವ ಆಹಾರಗಳೆಂದರೆ— ಬಾದಾಮಿ, ಶೇವಾಹಣ್ಣು, ಅಂಜೂರದಹಣ್ಣು, ರಸಬಾಳೆಹಣ್ಣು, ದಾಳಿಂಬರಹಣ್ಣು, ಸಿಹಿಕಿತ್ತಲೆಹಣ್ಣು, ಅನಾನಸ, ಚಪ್ಪರಬದನೆಕಾಯಿ, ಗಜ್ಜರೆ, ಹಸಿಯದ್ರಾಕ್ಷೆ, ಟೆಂಗಿನಕಾಯಿ, ಉಳ್ಳೇಗಡ್ಡೆ, ಬೇಯಿಸಿ ಸಿಪ್ಪೆತೆಗೆದ ಆಲೂಗಡ್ಡೆ, ಗೋದಿ ಜೋಳ ಅಕ್ಕಿಗಳರೊಟ್ಟಿ, ಹಾಲಕೆನೆ, ಬೆಣ್ಣೆ, ಆಗಲೇ ಹಿಂಡಿದ ಹಾಲು ಮುಂತಾದವುಗಳು.

# ಧರ್ಮರಾಜ್ಯ



ಪ್ರಮಾಥಿ ಫಾಲ್ಗುಣ — ವಿಕ್ರಮ ಚೈತ್ರ

ಈ ಎರಡೂ ಸಂಚಿಕೆ ಸೇರಿವೆ.



ಕೃತದೊಳಾ ತ್ರೇತೆಯೊಳು ದ್ವಾಪಾರದೊಳುಂ ಕ್ರಮದೆ ।
ಮತಿಯುಕ್ತ " ನಲ-ರಾಮ-ಧರ್ಮ " ನೃಪರಿಂ ॥
ಅಳಿಯಶವನಾಂತು ಬಾಳಿದ ತೆರದೊಳೀ " ಕೃಷ್ಣ - ।
ಕ್ಷಿತಿಪಾಲನಿಂ " ಬಾಳು " ಧರ್ಮರಾಜ್ಯ " ! ॥

... ಪರ್ತಿ ಶ್ರೀನಾಗೇಶ.



ಅಜ್ಞಾತವಾಸದಲ್ಲಿದ್ದ 'ಧರ್ಮರಾಜ್ಯ'ವು ಅರಸೀಕೆರೆಯ ಶ್ರೀಮಾನ್ ಬಕ್ಕಪ್ಪನವರ ಮಹೋದಾರತೆಯಿಂದ ಪುನಃ ಉದಯ ಹೊಂದಿತು. ಸರ್ವರೂ ಧರ್ಮರಾಜ್ಯದ ಪ್ರಜೆಗಳಾಗಿ ಕಾಪಾಡಿರಿ !

## ವಿಷಯಾನುಕ್ರಮಣಿಕೆ.

# ಧರ್ಮರಾಜ್ಯ

ಮೈಸೂರು "ವೀರಶೈವ ಧರ್ಮಾಲಯ"ದಿಂದ
ಹೊರಡುವ ಮಾಸಪತ್ರಿಕೆ



ಸಂಪುಟ೧ ✦ ಪ್ರಮಾಧಿನಾಮ ಸಂವತ್ಸರ ಫಾಲ್ಗುಣ ✦ ಸಂಚಿಕೆ೧೨

## "ಧರ್ಮರಾಜ್ಯ"ದ ವಾಚಕರಲ್ಲಿ

**ಸಂಪಾದಕೀಯ:—**

ಮಾನನೀಯ ವಾಚಕವೃಂದವೇ! "ಧರ್ಮರಾಜ್ಯ" ಮಾಸಪತ್ರಿಕೆಯು ಹೊರಟು ಇಲ್ಲಿಗೆ ಒಂದು ವರ್ಷ ಪೂರ್ತಿಯಾಯಿತು. ತಾನೆಯ ವರ್ಷದ ೧ ನೆಯ ಸಂಚಿಕೆಯೂ ಇದರಲ್ಲಿಯೇ ಸೇರಿದೆ. ಹಳೆಯ ಚಂದಾದಾರರೆಲ್ಲರೂ ಆದಷ್ಟು ಶೀಘ್ರವಾಗಿ ಮುಂದಿನ ವರ್ಷದ ೧—೪—೦ ಚಂದಾಹಣವನ್ನು "ಮ್ಯಾನೇಜರ್ ಧರ್ಮರಾಜ್ಯ ಪ್ರೆಸ್" ಹರಿಹರ ಈ ವಿಳಾಸಕ್ಕೆ ಮನಿಯಾರ್ಡರ್ ಮಾಡಬೇಕು. ಈ ವರ್ಷದಿಂದ ಧರ್ಮರಾಜ್ಯವು ತನ್ನ ಧರ್ಮರಾಜ್ಯ ಪ್ರೆಸ್ಸಿನಲ್ಲಿ ಪ್ರಕಟವಾಗುವುದರಿಂದ ಯಾರಿಗೂ ವ್ಯತ್ಯಾಸವಿಲ್ಲದಂತೆ ಪ್ರತಿತಿಂಗಳೂ ಸರಿಯಾಗಿ ತಲುಪುವುದು. ಇನ್ನು ಮುಂದೆ ಯುಗಾದಿಯಿಂದ ಯುಗಾದಿಗೆ ವರ್ಷ ಪೂರ್ತಿಯಾಗುವುದು. ಹೊಸ-ಹಳೆಯ ಚಂದಾದಾರರು ಈ ವಿಷಯವನ್ನು ಗಮನಿಸಬೇಕು.

ಸುಪ್ರಸಿದ್ಧ ಲೇಖಕರೂ ಕವಿಗಳೂ ಆಗಿರುವ ಶ್ರೀ ವಾಗೀಶ ಶಿವಾಚಾರ್ಯರ ದಿವ್ಯ ಲೇಖನಗಳ ಕವನಗಳು ಇನ್ನು ಮುಂದೆ ಬಿಡದೆ ಪ್ರಕಟವಾಗುವವಾದುದರಿಂದ ವಾಚಕರು ಸ್ವಲ್ಪ ವ್ಯಯದಲ್ಲಿ ಮಹಾಲಾಭವನ್ನು ಕಳೆದುಕೊಳ್ಳಬಾರದು ತಾನೆ! ಇದೂ ಅಲ್ಲದೆ ನೂತನ ಕಾದಂಬರಿ, ನಾಟಕ, ಪ್ರಹಸನಗಳೂ ಇತಿಹಾಸ ವಿಚಾರಗಳೂ

ಇನ್ನು ಮುಂದೆ ಹೇರಳವಾಗಿ ಹೊರಬೀಳತಕ್ಕವುಗಳಿವೆ. ಹರಿಹರವು ಪ್ರಚಾರಕಾರ್ಯಾಲಯವಾದಬಳಿಕ ಪೋಸ್ಟಿನ ಅನಾನುಕೂಲವು ತಪ್ಪಿ ಪತ್ರವ್ಯವಹಾರಗಳಿಗೆ ಸೌಲಭ್ಯವಾಗಿದೆ.

ವೀರಶೈವ ಧರ್ಮಾಲಯವು ಇನ್ನೂ ಶೈಶವಾವಸ್ಥೆಯಲ್ಲಿರುವುದರಿಂದ ತನ್ನ ಸಂಕಲ್ಪಿತ ಕಾರ್ಯಗಳನ್ನು ಶೀಘ್ರವಾಗಿ ಮಾಡಿಕೊಳ್ಳುವಷ್ಟು ಇನ್ನೂ ಶಕ್ತಿಯನ್ನು ಸಂಪಾದಿಸಿಲ್ಲ- ಈ ಸಮಯದಲ್ಲಿ ಧನಿಕರೂ ದಾಪ್ರರೂ ಯಥಾಶಕ್ತಿ ಸಂಸ್ಥೆಯನ್ನು ಕಾಪಾಡುವುದು ಪ್ರಧಾನ ಕಾರ್ಯವಾಗಿದೆ.

ಧರ್ಮರಾಜ್ಯ ಪತ್ರಿಕೆಗೆ ಮೊದಲು ಬೆಂಬಲವಿತ್ತ ಉದಾರಿಗಳು ಬಳ್ಳಾರಿ ಜಿಲ್ಲೆಯವರು. ಅವರ ಬೆಂಬಲದಿಂದಲೇ ಇದುವರೆಗೆ ಧರ್ಮರಾಜ್ಯವು ಸಾಗುತ್ತಿದೆ. ನಮ್ಮ ಸಂಸ್ಥೆಯ ಅಧ್ಯಕ್ಷರೊಡನೆ ನಾನು ಬಳ್ಳಾರಿ ಜಿಲ್ಲೆಯಲ್ಲಿ ಸಂಚರಿಸುವಾಗ ಧರ್ಮರಾಜ್ಯಕ್ಕೆಂದು ವಾಗ್ದಾನ ಮಾಡಿದವರು ಕೆಲವರು ಪೂರ್ಣವಾಗಿ ಹಣವನ್ನು ಕಳುಹಿಸಿದ್ದಾರೆ ಆದರೆ ಇನ್ನೂ ಕೆಲವರು ವರ್ಷಗಟ್ಲೆ ಪತ್ರಿಕೆಗಳನ್ನು ಪಡೆದೂ ಸಹ ಚಂದಾಹಣವನ್ನು ಕಳುಹಿಸಲಿಲ್ಲ. ವ್ಯವಹಾರಿಕ ತೊಂದರೆಗಳು ಎಲ್ಲರಿಗೂ ಇರತಕ್ಕವುಗಳೇ. ಆದರೂ ವಾಗ್ದಾನವನ್ನು ಉಳಿಸುವುದು ಗುಣಿಗಳಿಗೆ ಭೂಷಣವಲ್ಲ.

ಇದುವರೆಗೆ ಧರ್ಮರಾಜ್ಯವನ್ನು ಧಾರವಾಡದಲ್ಲಿ ಬೇರೆಯವರ ಪ್ರೆಸ್ಸಿನಲ್ಲಿ ಬಾಡಿಗೆಯಂತೆ ಅಚ್ಚುಮಾಡಿಸುತ್ತಿದ್ದುದರಿಂದಲೂ, ಪತ್ರಿಕೆಯು ಸ್ಥಲಾಂತರವಾಗುವುದೆಂಬ ನಂಬಿಗೆಯಿಂದ ರಜಿಷ್ಟರಾಗದಿದ್ದುದರಿಂದಲೂ ಅಲ್ಲದೆ ಆರಂಭ ವರ್ಷವಾದುದರಿಂದಲೂ ಖರ್ಚು ಹೆಚ್ಚಾಗಿ ಬಂದಿತು. ಧರ್ಮರಾಜ್ಯದ ಬಾಕಿಯು ಇನ್ನೂ ೫೭೫ ರೂಪಾಯಿ ಬರತಕ್ಕದ್ದಿದೆ. ಈ ಬಾಕೀದಾರರಲ್ಲಿ ೫ ರೂಪಾಯಿನ ಸಹಾಯಕರೂ ೧೦ ರೂಪಾಯಿನ ಪೋಷಕರೂ ಹೆಚ್ಚಾಗಿದ್ದಾರೆ. ನಾವಾದರೂ ಸಹಾಯಕ ಪೋಷಕರ ಯೋಗ್ಯತೆಗಳನ್ನನುಸರಿಸಿ ಸಹಾಯವನ್ನು ಬೇಡಿರುವೆನೇ ಹೊರತು ಅಸಮರ್ಥರಾರಿಗೂ ಹಿಂಸೆಕೊಟ್ಟಿಲ್ಲ. ಆಗ್ರಹವನ್ನೂ ಮಾಡಿಲ್ಲ. ಇಲ್ಲಿಯವರೆಗೆ ಯಾರು ಯಾವಬಗೆಯಾಗಿ ಸಹಾಯಕರಾದರೂ ತಮ್ಮ ಪ್ರೇಮದಿಂದಲೇ ಆಗಿದ್ದಾರೆ. ಹೀಗಿದ್ದರೂ

ತಿರುಗಿ ೩ ನೆಯ ವರ್ಷವು ಆರಂಭವಾದರೂ ತಮ್ಮ ವಾಗ್ದಾನವನ್ನು ಪೂರ್ತೈಸಿಲ್ಲವೆಂದರೆ ಧರ್ಮರಾಜ್ಯವು ನಿಲ್ಲುವ ಬಗೆ ಹೇಗೆ? ಎಂಬುದನ್ನು ತಾವೇ ಯೋಚಿಸಿದರೆ ಸಾಕು.

ಧರ್ಮರಾಜ್ಯವು ಇದುವರೆಗೆ ಪ್ರಕಟವಾಗಿದ್ದರಲ್ಲಿ ಕರ್ನಾಟಕ ಸಾಹಿತ್ಯಾಭಿವೃದ್ಧಿಯ ಕಡೆಗೆ ಹೆಚ್ಚು ದೃಷ್ಟಿಯನ್ನು ಕೊಟ್ಟಿರುವುದೇ ಹೊರತು ಯಾವುದೊಂದು ಪಕ್ಷಪಾತವೃತ್ತಿಯನ್ನು ಅದು ಕೈಕೊಂಡಿಲ್ಲವೆಂಬದು ವಾಚಕರಿಗೆ ಪ್ರತ್ಯಕ್ಷವಾದ ವಿಷಯ. ಪತ್ರಿಕೆಯ ಧ್ಯೇಯವಾದರೋ:— ಶಾಂತಿಪಕ್ಷವನ್ನು ಸ್ಥಾಪಿಸಿ ತನ್ಮೂಲಕ ಸಕಲ ಜನಾಂಗದಲ್ಲಿ ಐಕ್ಯತೆಯನ್ನು ಬೆಳೆಸುವುದು ಇದೇ ಮೂಲವಾಗಿದೆ. ಯಾವ ಧರ್ಮದವರಾದರೂ ಧರ್ಮರಾಜ್ಯದಿಂದ ತಮ್ಮ ತಮ್ಮ ಸಾಹಿತ್ಯವನ್ನು ವೃದ್ಧಿಗೊಳಿಸಿಕೊಳ್ಳಬಹುದು ಮಾತ್ರ, ವ್ಯಕ್ತಿನಿಂದೆ ವೇದಾದಿನಿಂದೆ ಇವುಗಳನ್ನು ಹಿಡಿದು ಬರೆದ ಲೇಖನಗಳಿಗೆ ಈ ಧರ್ಮರಾಜ್ಯದಲ್ಲಿ ಎಂದಿಗೂ ಸ್ಥಲದೊರೆಯಲಾರದೆಂಬುದನ್ನು ವಾಚಕರು ಗಮನಿಸಬೇಕು.

ಈ ಧರ್ಮರಾಜ್ಯದ ಉದ್ಧಾರಕ್ಕಾಗಿ ೪ ತೆರನಾದ ಕ್ರಮವನ್ನೇರ್ಪಡಿಸಿದೆ:—

ಆಜೀವ ಪೋಷಕರು:—೫೦ ರೂಪಾಯಿ (ಒಮ್ಮೆ ಮಾತ್ರ)
ಪೋಷಕರು:—೧೦ ,, ( ,, )
ಸಹಾಯಕರು:—೫ ,, ( ,, )
ಚಂದಾದಾರರು:— ೧—೪—೦

ಆಜೀವ ಪೋಷಕರಾಗಿ ಒಮ್ಮೆ ಮಾತ್ರ ೫೦ ರೂ. ಕೊಟ್ಟವರಿಗೆ ಧರ್ಮರಾಜ್ಯವು ಅವರ ಮತ್ತು ಪತ್ರಿಕೆಯ ಜೀವಪರ್ಯಂತರವಾಗಿ ತಪ್ಪದೆ ದೊರೆಯುತ್ತಿರುವುದು. ಅಲ್ಲದೆ ವೀರಶೈವ ಧರ್ಮಾಲಯದಿಂದ ಪ್ರಕಟವಾಗುವ ಸಣ್ಣ ದೊಡ್ಡ ಬೆಲೆಯ ಪುಸ್ತಕಗಳೆಲ್ಲವೂ ಅವರಿಗೆ ಉಚಿತವಾಗಿಯೇ ದೊರೆಯುವವು. ಇವರು ಪ್ರತಿವರ್ಷ ಚಂದಾಹಣವನ್ನು ಕೊಡುವ ಕಾರಣವಿಲ್ಲ.

ಪೋಷಕರಾಗಿ ಒಮ್ಮೆ ಮಾತ್ರ ೧೦ ರೂ. ಕೊಟ್ಟವರಿಗೆ ಪ್ರತಿವರ್ಷವೂ ಧರ್ಮಾಲಯದಿಂದ ಹೊರಡುವ ಯಾವುದಾದರೊಂ-

ಗ್ರಂಥದ ಎರಡು ಕಾಪಿಗಳು ಉಚಿತವಾಗಿ ದೊರೆಯುವವು ಮಾತ್ರ. ಇವರು ಪ್ರತಿವರ್ಷ ಚಂದಾಹಣ ೧—೪—೦ ಮಾತ್ರ ಕೊಡಲೇ ಬೇಕಾಗುವುದು. ಎಂದರೆ ಮಾತ್ರ ಧರ್ಮರಾಜ್ಯ ಪತ್ರಿಕೆಯು ಪ್ರತಿ ತಿಂಗಳೂ ಕಳಿಸಲ್ಪಡುವುದು.

ಸಹಾಯಕರಾಗಿ ಒಮ್ಮೆ ಮಾತ್ರ ೫ ರೂ. ಕೊಟ್ಟವರಿಗೆ ಪ್ರತಿ ವರ್ಷವೂ ಸಂಸ್ಥೆಯಿಂದ ಪ್ರಕಟವಾಗುವ ಯಾವುದಾದರೊಂದು ಗ್ರಂಥದ ೧ ಕಾಪಿಯು ಮಾತ್ರ ದೊರೆಯುವುದು. ಇವರೂ ಕೂಡ ವಾರ್ಷಿಕ ಚಂದಾ ೧—೪—೦ ಕೊಡಲೇ ಬೇಕಾಗುವುದು. ಧರ್ಮರಾಜ್ಯದ ೧೨ ಸಂಚಿಕೆಗಳನ್ನು ಕಳುಹಿಸುವುದಾಗುದು.

ಚಂದಾದಾರು ೧—೪—೦ ಕೊಟ್ಟರೆ ಕೇವಲ ೧ ವರ್ಷದ ಮಟ್ಟಿಗೆ ಪತ್ರಿಕೆಗಳನ್ನು ಮಾತ್ರ ಪಡೆಯಬಹುದೇ ಹೊರತು ಇತರ ಗ್ರಂಥಗಳು ಇವರಿಗೆ ದೊರೆಯುವುದಿಲ್ಲ.

ಈ ಮೇಲ್ಕಂಡ ಕ್ರಮಗಳಂತೆ ಸರ್ವಮತದವರೂ ತಮ್ಮ ಶಕ್ತಿಯನ್ನನುಸರಿಸಿ ದೇಶ- ಧರ್ಮ- ಸಾಹಿತ್ಯಾಭಿಮಾನದಿಂದ ಸಹಾಯಕರಾಗಿ ಧರ್ಮರಾಜ್ಯವನ್ನು ಪೋಷಿಸುವಲ್ಲಿ ತತ್ಪರರಾಗಬೇಕಾಗಿಯೂ ಈ ಹಿಂದೆ ಬಾಕೀದಾರರಾಗಿರುವ ಪೋಷಕ ಸಹಾಯಕ ಚಂದಾದಾರರು ತಮ್ಮ ವಾಗ್ದಾನದ ಹಣವನ್ನು ತೀವ್ರವಾಗಿ ಕಳುಹಿಸಿ ಧರ್ಮರಾಜ್ಯವನ್ನು ಉಳಿಸಬೇಕಾಗಿಯೂ ವಿನಂಬ್ರತೆಯಿಂದ ಕೋರುತ್ತೇನೆ.

# “ಅದೂ - ಇದೂ ಒಂದೇನೆ? ”

—:★:—

★ ★ ಸಂಪಾದಕೀಯ ★ ★

ಜಗತ್ತಿನಲ್ಲಿ ಮಾನವ ಕೋಟಿಯ ಅಭ್ಯುದಯಕ್ಕೆ ಅನೇಕ ಸಾಧನೆಗಳಿವೆ. ಆ ಸಾಧನೆಗಳಲ್ಲಿ ತಮಗೆ ಬೇಕಾದವುಗಳನ್ನು ಆರಿಸಿಕೊಳ್ಳುವುದು ಐಚ್ಛಿಕವಾಗಿದೆ. ಒಂದಕ್ಕೆ ಒಮ್ಮೆ ನರವಧೆ ವಾಮ ಪಂಥಗಳೂ ಸಹ ಇಷ್ಟಾರ್ಥದಾಯಕಗಳೆಂದು ಆಚರಿಸಲ್ಪಟ್ಟಿವೆ. ವೈಜ್ಞಾನಿಕ ಯುಗದ ಈಗಿನ ಪಥವು ವಿಲಕ್ಷಣವಾಗಿದೆ. ನರಮಾಂಸ ಭಕ್ಷಕರ ಸಂಖ್ಯೆ ಕಡಿಮೆಯಾಗಿರುವುದಾದರೂ ಇತರ ಪ್ರಾಣಿವರ್ಗದ ಮಾಂಸಭಕ್ಷಣೆಯು ಹಿಂದಿನಕಾಲಕ್ಕಿಂತಲೂ ಇಂದು ಅಧಿಕವಾಗಿರಬೇಕೆಂದು ವಿಜ್ಞಾನವಾದಿಗಳು ಅಭಿಪ್ರಾಯ ಪಡುತ್ತಾರೆ. ಹಿಂದಿನವರಿಗಿಂತ ಇಂದಿನವರಾದ ನಾವು ಎಷ್ಟೋ ಮಾರ್ಗಗಳಲ್ಲಿ ಮುಂದರಿದಿರುವೆವೆಂದು ಸುಮ್ಮನೆ ಹೆಮ್ಮೆ ಪಡುವುದೇ ಹೊರತು ವಿಚಾರಿಸುತ್ತ ಹೋದರೆ ಆ ಹೊಲಸು ಮನಸ್ಸಿಗೆ ಬೇಸರವನ್ನುಂಟುಮಾಡದಿರದು. ನಾವು ನಮ್ಮ ಎಲ್ಲಾ ಕಾರ್ಯಗಳಲ್ಲಿಯೂ ಪಶುವೃತ್ತಿಗೆ ಶರಣುಹೊಡೆದಿದ್ದೇವೆ. ಹಿಂದಿನ ಋಷಿವರ್ಗಗಳ ವಿಧಿಯೇ ಬೇರೆಯಾದರೆ ಈಗಿನ ವಿಧಿಯು ಅದಕ್ಕೆ ತೀರಾ ವಿರೋಧವಾಗಿದೆ. ಹಿಂದಿನ ವಿಧಿಯು ವಿಶೇಷವಾಗಿ ಆಚರಣೆಯಲ್ಲಿದ್ದರೆ ಈಗ ಕೇವಲ ವಾಗಾಡಂಬರ, ಪತ್ರಾಡಂಬರಗಳಲ್ಲಿ ಮಾತ್ರ ಅಧಿಕವಾಗಿದೆ.

ದೇಶಾಚಾರ, ಮತಾಚಾರ, ಧರ್ಮಾಚಾರಗಳು ಸಂಕರವಾಗುತ್ತ ವರ್ಣಭೇದವೂ ನಾಮಮಾತ್ರದಲ್ಲಿ ಉಳಿದಿದೆ. ಇದಕ್ಕೆಲ್ಲಾ ಮೂಲಕಾರಣವೇನೆಂದು ನಾವು ಹುಡುಕ ಹೊರಟರೆ “ಸ್ವೇಚ್ಛಾವೃತ್ತಿಗೆ ಅಡ್ಡಿಯಿಲ್ಲದಿರುವಿಕೆ” ಯೊಂದೇ ನಮ್ಮ ಕಣ್ಣಿಗೆ ಒಡಮೂಡು

ವುದು. ಈ ಸ್ವೇಚ್ಛಾ ವೃತ್ತಿಗೆ ಅನೇಕ ಕಾರಣಗಳಿರಬಹುದಾದರೂ ನಮ್ಮಲ್ಲಿಯ ಒಂದು ಅನೈಕ್ಯಮತ್ಯವೇ ಪ್ರಧಾನ ಕಾರಣವೆಂದು ಹೇಳಬಹುದು. ಯಾವ ದೇಶ-ಮತ-ಧರ್ಮಗಳ ಮೂಲೋತ್ಪಾಟನವಾಗುವುವಕ್ಕೆ ಮೊದಲಿನಿಂದಲೂ ಈ ಅನೈಕಮತ್ಯವೇ ಕಾರಣವಾಗುತ್ತ ಬಂದಿರುವುದು ಪ್ರತ್ಯಕ್ಷವಾಗಿದೆ. ಪಾಶ್ಚಾತ್ಯ ದೇಶದ ಅಸಭ್ಯವರ್ತನೆಗಳು ನಮ್ಮೀ ಭಾರತ ಭೂಮಿಯಲ್ಲಿ ನೆಲೆಗೊಂಡುದೇ ನಮ್ಮ ಹ್ರಾಸಕ್ಕೆ ಕಾರಣವೆಂದು ಅನೇಕರು ಹೇಳುವುದು ಸತ್ಯವಾದರೂ ಆ ಅಸಭ್ಯವರ್ತನೆಗಳು ಇಲ್ಲಿ ಬೇರೂರಲು ಕಾರಣಗಳೇನೆಂಬುದನ್ನು ನಾವು ವಿಚಾರ ಮಾಡಬೇಕಲ್ಲವೆ ? ದೇಶಾಚಾರವು ಪರಿವರ್ತನಶೀಲವಾದುದೆಂದು ಹೇಳುವುದಕ್ಕಿಂತಲೂ ಅನುಕರಣಶೀಲವಾದುದೆಂದು ಹೇಳುವುದರಲ್ಲಿ ಸತ್ಯಾಂಶವಿದೆ. ಯಾವನೊಬ್ಬನಿಗೆ ಒಬ್ಬನ ವೇಷವನ್ನು ನೋಡಿ ಮನವು ಮೋಹಿಸಿದರೆ ಅವನಂತೆ ಅನುಕರಣ ಮಾಡುತ್ತ ಹೊರಡುವನು. ಈ ಅನುಕರಣದಿಂದಲೇ ಪಾಶ್ಚಾತ್ಯರ ಅಸಭ್ಯ ವರ್ತನೆಯು ದಿನೇ ದಿನೇ ನಮ್ಮಲ್ಲಿ ಹರಡಲನುವಾಯಿತು. ಮೊದಲಿನ ಕಾಲದಿಂದ ಇಲ್ಲಿಯವರೆಗೆ ವಿಚಾರಿಸಿದರೂ ಈ ನಮ್ಮ ಪರಿವರ್ತನೆಗೆ ಆಯಾಕಾಲದ ಪ್ರಭುತ್ವದವರ ಭಾಷೆ-ವೇಷ-ಆಚರಣೆಗಳೇ ಕಾರಣವಾಗಿರುವವೆಂದು ನಂಬಲೇಬೇಕಾಗಿದೆ. ಇಂತಾಗಿ ನಾವು ಪ್ರಪಂಚವೇ ಪರಿವರ್ತನಶೀಲವಾದುದೆಂದು ಹೇಳುತ್ತ ಹೊಂಟೆವು ಈ ಪರಿವರ್ತನೆಗೆ ಕಾರಣ ಮತ್ತು ಪರಿವರ್ತನೆಯಿಂದಾಗುವಲಾಭ ಇವುಗಳನ್ನು ಯೋಚಿಸುವುದಕ್ಕೆ ನಾವು ಸ್ವಲ್ಪ ಸಮಯವನ್ನು ಕೊಡಲಿಲ್ಲ. ಹೀಗೆ ನಾವು ಯೋಜನೆಯನ್ನು ಮಾಡದೆ ಪರಾನುಕರಣಕ್ಕೆ ಮನಸೋತೆವಾಗಿ ಆ ಅನುಕರಣದ ಜೊತೆಯಲ್ಲಿ ಅವರ ದುರ್ಗುಣಗಳೂ ನಮ್ಮಲ್ಲಿ ಸೇರಿಕೊಳ್ಳಬೇಕಾಯಿತು. ಹೀಗೆ ಭವ್ಯವಾದ ಪರಿವರ್ತನೆಯ ಪ್ರಚಾರದಿಂದ ದೋಷವೆಲ್ಲವೂ ಗುಣವಾಗಿ ಪರಿಣಮಿಸಿ ನಾವು ಮಾಡುವುದೆಲ್ಲವೂ ಒಳ್ಳೆಯದೆಂಬ ಭಾವನೆಯು ನಮ್ಮಲ್ಲಿ ಬೇರೂರಿ ನಿಂತಿತು. ಅಂದಿನಿಂದ ಇಂದಿನವರೆಗೂ ಸಣ್ಣವರೂ ದೊಡ್ಡವರೂ ಕಣ್ಣುಮುಚ್ಚಿ ಈ ಪರಿವರ್ತನೆಯನ್ನು ಅನುಸರಿಸಹತ್ತಿದ್ದಾರೆ. ಈ ಪರಿವರ್ತನೆಯಲ್ಲಿಯೂ ಭಿನ್ನಾಭಿಪ್ರಾಯಗಳುಂಟು. ಕೆಲವರಿಗೆ ಅರೆ

ಮೀಸೆಯನ್ನೂ ತಲೆಯಮೇಲೆ ಉಂಗುರಗೂದಲುಗಳನ್ನೂ ಬಿಟ್ಟುಕೊಂಡವರನ್ನು ಕಂಡರೆ ಆಗುವುದಿಲ್ಲ. ಅದರಂತೆ ಕೆಲವರಿಗೆ ಬೋಳಿಸಲೆಯವರನ್ನು ಕಂಡರೆ ಆಗುವುದಿಲ್ಲ. ಅದರಂತೆ ಕೆಲವರಿಗೆ ಜಂಡಿಕೆ ಬಿಟ್ಟು ಮೀಸೆಬೋಳಿಸಿದವರನ್ನು ಕಂಡರೆ ಆಗುವುದಿಲ್ಲ. ಹೆಣ್ಣುಮಕ್ಕಳ ಪರಿವರ್ತನೆಗಳಲ್ಲಿಯೂ ಹೀಗೆಯೇ ಭಿನ್ನಾಭಿಪ್ರಾಯಗಳೂ ವಿರೋಧಗಳೂ ಅವಶ್ಯವಾಗಿಯೂ ಇರಬಹುದು. ಹೀಗೆ ಜಗತ್ತಿನಲ್ಲಿ ಎಲ್ಲಿನೋಡಿದರೂ ಪರಿವರ್ತನೆಯು ಖಂಡನೆಯು ಎಂದಿನಿಂದಲೂ ಸಾಗಿಬರುತ್ತಲೇ ಇದೆ. ತಮಗೆ ಬೇಕಾದ ಪರಿವರ್ತನೆಯು ಅನುಕರಣವು ಸಾಗಿಯೇ ಇದೆ. ಹೀಗೆ ಎಷ್ಟು ಕಾಲದಿಂದ ವಿಚಾರಮಾಡಿದರೂ ಒಬ್ಬರಿಗೆ ಅತ್ಯಂತ ಆನಂದವನ್ನುಂಟುಮಾಡುವ ವಿಷಯವು ಇನ್ನೊಬ್ಬರಿಗೆ ವಿಷಾದ ಅಸೂಯೆಗಳಿಗೆ ಕಾರಣವಾಗಿರುವುದು ಪ್ರತ್ಯಕ್ಷವಾಗಿಯೇ ಇದೆ. ಇದೆಲ್ಲಾ ಹೀಗಾಗುವುದಕ್ಕೆ ಕಾರಣವೇನಿರಬೇಕೆಂದು ವಿಚಾರಿಸಬೇಕಾದುದು ಮಾನವನ ಆದ್ಯಕರ್ತವ್ಯವು. ಅದನ್ನು ವಿಚಾರಿಸುವುದು ಬಿಟ್ಟು ಏನೇನೋ ಕಾರ್ಯಮಾಡುವುದಕ್ಕೆ ತೊಡಗಿರುವುದು ಜಗತ್ತು. ಏಕಮತ್ಯದ ಅಭಾವವೇ ಜನಗಳಲ್ಲಿ ಭಿನ್ನತೆಯನ್ನೂ ವಿದ್ವೇಷವನ್ನೂ ಮುಂದುಮಾಡಿದೆಯೇ ಹೊರತು ಇದಕ್ಕೆ ಇನ್ನಾವ ಕಾರಣವು ಅಷ್ಟೊಂದು ಸಬಲವಲ್ಲ. ಈ ಅನೈಕ್ಯತೆಗಾದರೋ ಅಜ್ಞಾನವೇ ಮೂಲ. ಈ ಅಜ್ಞಾನವು ಅಶಾಂತಿಯಿಂದ ಮನಸ್ಸಿನಲ್ಲುಂಟಾಗುತ್ತದೆ. ಈ ಅಶಾಂತಿಗಾದರೋ ಸ್ವಕೀಯ - ಪರಕೀಯವೆಂಬ ಬುದ್ಧಿಯೇ ಕಾರಣವಾಗುವುದು. ಅಂತೆಯೇ ಶಾಸ್ತ್ರಕಾರರು ಪಂಡಿತನ ವಿಷಯವಾಗಿ ಈ ತೆರನಾಗಿ ಹೇಳಿದ್ದಾರೆ-

"ಆತ್ಮವತ್ ಸರ್ವಭೂತಾನಿ । ಯಃ ಪಶ್ಯತಿ ಸ ಪಂಡಿತಃ ॥"

ಎಂತಲೂ, ಇದನ್ನೇ ಸರ್ವಜ್ಞ ಕವೀಶ್ವರನು:—

"ತನ್ನಂತೆ ಪರರ ಬಗೆದೊಡೆ ಕೈಲಾಸ ಬಿನ್ನಣವಕ್ಕು ಸರ್ವಜ್ಞ"। ಎಂದು ಕನ್ನಡದಲ್ಲಿ ಬಿಚ್ಚಿ ಹೇಳಿದ್ದಾನೆ.

ಈ ಉಕ್ತಿಗಳಿಂದ ನಾವು ಪರರ ಕಷ್ಟ-ಸುಖ, ದುಃಖ ಅಭ್ಯುದಯ-ಅನಭ್ಯುದಯಗಳನ್ನು ತನ್ನವುಗಳನ್ನಾಗಿಯೇ ಭಾವಿಸಬೇ

ಕೆಂಬುದು ನಿಶ್ಚಯವಾಯಿತು. ಇವಕ್ಕೆನ್ನೇ ಸಮಾನುಭೂತಿ-ಸಹಕಾರವೆಂತಲೂ ಹೇಳುವರು. ನಾವೀಗ ಅಂತಹ ಯಾವುದೇ ಒಂದು ವಿಚಾರದಲ್ಲಿ ಕೈ ಹಾಕಿದರೂ ಸಮಾನುಭೂತಿ-ಸಹಕಾರಗಳ ಅಭಾವವೇ ಎದ್ದುಕಾಣುವುದು. ಇವುಗಳ ಅಭಾವದಿಂದ ನಾವು ನಮ್ಮ ಹಿರಿಯರ ತಪ್ಪುಗಳನ್ನು ಸಹ ಹೊರಗಿಟ್ಟು ಆಡಿಕೊಳ್ಳುವ ಪ್ರಸಂಗವುಂಟಾಗಿದೆ. ಅದೆಷ್ಟೋ ಪೂರ್ವಕಾಲದಲ್ಲಿ ನಮಗೆ ಧರ್ಮದ ತಿರುಳನ್ನು ತಿಳಿಸಿ ಕಾಪಾಡಿದ ಆಚಾರ್ಯ-ಋಷಿ-ಶರಣರ ವಿಷಯಗಳು ಇಂದಿಗೂ ನಮ್ಮ ಕಣ್ಮುಂದೆ ಕಟ್ಟಿದಂತಿವೆ. ಅವುಗಳಲ್ಲಿ ನಾವು ಅವರ ಮೇಲೆ ಭಕ್ತಿ-ವಿಶ್ವಾಸಗಳು ತಪ್ಪಿ, ಕೃತ್ರಿಮ ವಿಚಾರಗಳನ್ನು ಗ್ರಹಿಸುವುದೇ ಹೆಚ್ಚಾಗಿದೆ. ಇಂತಾಗಿ ಸರ್ವ ಪ್ರಪಂಚಕ್ಕೇ ವಂದ್ಯರಾದ ಆಚಾರ್ಯ ಶರಣರನ್ನು ನಮ್ಮ ಅವಿವೇಕಜನ್ಯವಾದ ಪಕ್ಷಕ್ಕೆ ಸೆಳೆದು ಇವರು ನಮ್ಮ ಆಚಾರ್ಯರು ಇವರು ನಮ್ಮ ಋಷಿಗಳು ಇವರು ನಮ್ಮ ಶರಣರು ಎಂದು ಅವರವರಿಗೆ ಪ್ರತ್ಯೇಕ ಸ್ಥಳಗಳನ್ನು ಕಲ್ಪಿಸಿ ಸಭೆಗಳಲ್ಲೋ ಇತರ ಕಡೆಗಳಲ್ಲೋ ಬಲವಾಗಿ ಜಗ್ಗಾಡುತ್ತಿದ್ದೇವೆ. ಈ ಬಗೆಯಾದ ಜಗ್ಗಾಟಗಳಿಂದ ಸಮಾಜಕ್ಕೆ ವಿಘಾತವೇ ಹೊರತು ಎಳ್ಳಷ್ಟು ಉಪಕಾರವಾಗಲಾರದು. ಹೀಗಾಗಿ ಆಚಾರ್ಯರನ್ನೂ ಶರಣರನ್ನೂ ಬೇರ್ಪಡಿಸಿ ಕೆಲವರು ಬರೀ ಆಚಾರ್ಯರನ್ನೂ ಕೆಲವರು ಬರೀ ಶರಣರನ್ನೂ ಮುಂದುಮಾಡಿ ನಮ್ಮ ಪಕ್ಷವನ್ನು ಸಾಧಿಸಿದೆವು, ಆ ಪಕ್ಷದವರ ಮೋರೆಗೆ ಮಸಿ ತಿಕ್ಕಿದೆವೆಂದು ಆನಂದದಿಂದ ಹಾರಾಡುತ್ತಿದ್ದಾರೆ. ಆದರೆ ಆ ಹಾರಾಟಕ್ಕೆ ಮೊದಲು ಮೋರೆಗೆ ಮಸಿ ತಿಕ್ಕಿದ ತಮ್ಮ ಕೈಗೆ ಮಸಿ ಎಷ್ಟರಮಟ್ಟಿಗೆ ಹತ್ತಿದೆಯೆಂಬುದನ್ನಾದರೂ ಲಕ್ಷಿಸಬೇಕು. ಅಂದರೆ ಮಾತ್ರ ನಾವು ಮಾಡುವ ಈ ಕೃತಿಯಿಂದ ನಮಗೇನೇ ಅಪಮಾನವೆಂಬುದು ಹೊಳೆಯದಿರದು. ಈವಿಧವಾದ ಅಜ್ಞಾನವು ಜಗತ್ತಿನಿಂದ ದೂರಾಗುವುದಕ್ಕೆ ಬದಲಾಗಿ ಬೆಳೆಯುತ್ತಿರುವದು ಪರಮಾಶ್ಚರ್ಯಕರವಾದ ಸಂಗತಿಯು. ಸರ್ವಸಮಾಜವೇ ಒಂದಾಗಲು ಅಸಾಧ್ಯವಲ್ಲ, ಆದರೆ ಅವುಗಳನ್ನು ಕೂಡಿಸುವವರಿಲ್ಲ. ಅಥವಾ ಈಗಿನ ಬಾಯಿದ್ದ ದೇವರುಗಳೇ ಕೂಡಿಸಿದರೂ ಕೂಡಲಿಕ್ಕೊಪ್ಪುವುದಿಲ್ಲವೆಂದಮೇಲೆ ಬಾಯಿಲ್ಲದ ದೇವರುಗಳು ನಾವು ಕೂಡಿ

ಸದೇ ಕೊಡುವುದಕ್ಕೆ ಸಂಭವವನೇ ಇಲ್ಲ. ಈ ಉಭಯ ದೇವಾತ್ಮರಲ್ಲಿ ತಾತ್ವಿಕ ಭೇದವೇನಾದರೂ ಇದೆಯೇ ಎಂಬುದನ್ನಷ್ಟು ಪರಾಮರ್ಶಿಸಿದರೆ ಆಚಾರ್ಯ ವೃಂದವು ಪೂರ್ವ ಯುಗದ ದೇವರು, ಅವರು ವೇದಾಗಮ ಸಾರಗಳಿಂದ ಜಗತ್ತಿನ ಜೀವಾತ್ಮರನ್ನೆಲ್ಲಾ ಒಮ್ಮೆ ಉದ್ಧಾರ ಮಾಡಿಹೋದರೆ ತನೆಯದಾದ ಶಿವಶರಣ ವೃಂದವು ಆ ಹಳೆಯ ದೇವರ ಶಿಷ್ಯತ್ವವನ್ನು ವಹಿಸಿ ಆ ದೇವರ ಒಗುನಾದ ಉಪದೇಶವನ್ನೇ ಸರಳವಾದ ಕನ್ನಡದಲ್ಲಿ ಬೀರಿ ತತ್ವ ಪ್ರಧಾನವಾಗಿ ಜೀವಾತ್ಮರನ್ನು ಉದ್ಧಾರಗೊಳಿಸಿತು. ಇಂತಾಗಿ ಒಂದು ತೀರ ಹಳೆಯದು, ಒಂದು ತೀರ ಹೊಸದು. ಎಂಬುದಿಷ್ಟು ಮಾತ್ರ ನಾಮನಿರ್ದೇಶದಲ್ಲಿ ಕಂಡುಬರುವ ವ್ಯತ್ಯಾಸವೇ ಹೊರತು ಬೇರೆ ಏನೂ ಇಲ್ಲ. ಈ ಹಳೆಯ ಹೊಸದೆಂಬ ವಾದವಾದರೂ ಇಂದಿನದಲ್ಲ. ವೇದಪುರುಷನೂ:—

" ನವೋ ನವೋ ಭವತಿ ಜಾಯಮಾನಃ " ।

ಎಂದುಕೊಂಡಿರುವುದರಿಂದ ಹಳೆಯದರಿಂದಲೇ ಹೊಸದಾದವು ಹುಟ್ಟಿ ಆ ಹೊಸದೂ ಹಳೆಯದಾಗುವುದು ಸ್ವಾಭಾವಿಕ. ಇಷ್ಟನ್ನರಿಯದೆ ಪುರಾಣವಾದ, ನವಮತವಾದ ಎಂಬ ಭಿನ್ನಭಾವಕ್ಕೆ ಬುದ್ಧಿಯನ್ನಂಟಿಸಿ ಸಮಾಜಕ್ಕೆ ದ್ರೋಹವನ್ನೆಸಗುವುದು ಬುದ್ಧಿವಂತರ ಲಕ್ಷಣವಲ್ಲವೆಂಬುದನ್ನು ಇಲ್ಲಿ ಬರೆಯಬೇಕಾಗಿಲ್ಲ. ಒಟ್ಟಿನ ಮೇಲೆ ಹಿಂದಿನದೂ - ಇಂದಿನದೂ, ಹಿಂದಿನವರೂ - ಇಂದಿನವರೂ ಎಲ್ಲಾ ಒಂದೇನೇ. ಆದರೆ ನಾಮ ರೂಪ ಬೇರೆ ಅಷ್ಟೆ.



# ಧರ್ಮರಾಜ್ಯವು ತಡವಾಗಿ ಹೊರಟುದೇಕೆ ?

[ ಲೇ— ಸಂಪಾದಕ ]

ವಾಚಕ ವೃಂದವೇ ! ನಿಮ್ಮ ಧರ್ಮರಾಜ್ಯವು ಈಗ ೧ ವರ್ಷದಿಂದ ಅವಿಚ್ಛಿನ್ನವಾಗಿ ಸಾಹಿತ್ಯ ಸೇವೆಯನ್ನು ಮಾಡಿದೆ ಎಂಬುದು ತಮಗೆಲ್ಲಾ ತಿಳಿದ ಸಂಗತಿಯಾಗಿದೆ. ಇತ್ತೀಚೆಗೆ ಯುದ್ಧದ ಗಲಾಟೆಯಲ್ಲಿ ಕಾಗದದ ಬೆಲೆ ೧ಕ್ಕೆ ೪ರಷ್ಟು ಏರಿಹೋಗಿ ಸಮಯಕ್ಕೆ ಸಿಗದಂತಾಗಿದೆ. ಮುಂಚೆ ಕಾಗದವನ್ನು ಸಂಗ್ರಹಿಸದಿದ್ದುದರ ಪರಿಣಾಮವಾಗಿ ಅನೇಕ ಪತ್ರಿಕೆಗಳು ಶಯನಾವಸ್ಥೆಯಲ್ಲಿರುವವು- ಆಶ್ವಯುಜ ಸಂಚಿಕೆಯಿಂದ ನಮ್ಮ ಧರ್ಮರಾಜ್ಯಕ್ಕೂ ಅದೇ ಗಾಳಿಯು ಬೀಸಿ ಚೇತರಿಸಿಕೊಳ್ಳಲು ಶಕ್ತಿ ಸಾಲದೆ ಹೋಯಿತು. ಕಾಗದದ ಬೆಲೆ ಏರಿದರೂ ಪತ್ರಿಕೆಯ ಚಂದಾ ಇದುವರೆಗೂ ಏರಿಸಿಲ್ಲ. ಹಾಗೆ ಏರಿಸಿದರೆ ಜನಗಳು ಭಿನ್ನಾಭಿಪ್ರಾಯಪಡಲೂ ಬಹುದಾಗಿ ನಷ್ಟವನ್ನು ಸಹಿಸಿಕೊಂಡು ಪುಟಸಂಖ್ಯೆಯನ್ನು ಕಡಿಮೆ ಮಾಡಿ ಎರಡು ಸಂಚಿಕೆಗಳನ್ನು ಒಂದರಲ್ಲಿ ಸೇರಿಸಿ ಪ್ರಕಟಿಸಿದ್ದಾಗಿದೆ.

ಇಲ್ಲಿಗೆ ಹಳೆ ಚಂದಾದಾರರ ೧೨ ಸಂಚಿಕೆಗಳು ಮುಗಿದು ೨ನೆಯ ವರ್ಷದ ೧ನೆಯ ಸಂಚಿಕೆ ಆರಂಭವಾಯಿತು. ಈ ಸಂಚಿಕೆ ಮುಟ್ಟಿದೊಡನೆಯೇ ಹಳೆ ಚಂದಾದಾರರೆಲ್ಲರೂ ಮುಂದೆ ೨ನೆಯ ವರ್ಷದ ಚಂದಾಹಣ ೧—೪—೦ ಒಂದು ರೂಪಾಯಿ ನಾಲ್ಕಾಣೆಯನ್ನು ಆದಷ್ಟು ತೀವ್ರವಾಗಿ ಮ್ಯಾನೇಜರ್ "ಧರ್ಮರಾಜ್ಯ" ಧರ್ಮರಾಜ್ಯ ಪ್ರೆಸ್ ಹರಿಹರ. ಈ ಅಡ್ರೆಸ್ಸಿಗೆ ಮನಿಯಾರ್ಡರ ಮಾಡಬೇಕು. ೨ನೆಯ ವರ್ಷದಿಂದ ಹೊಸದಾಗಿ ಚಂದಾದಾರರಾಗತಕ್ಕವರು ಆದಷ್ಟು ತೀವ್ರವಾಗಿ ತಮ್ಮ ಹೆಸರೂ ಮುಂತಾದುದನ್ನು ಸ್ಪಷ್ಟವಾಗಿ ಬರೆದು ಕಳುಹಿಸಿದಲ್ಲಿ ಮುಂದೆ ಪತ್ರಿಕೆಗಳನ್ನು ಎಷ್ಟು ಹೊರಡಿಸಬೇಕೆಂಬುದು ಒಂದು ನಿರ್ಧಾರವಾಗುವುದು. ಹಾಗೆ ತಿಳುಹಿಸದಿದ್ದರೆ ಬಹಳ ನಷ್ಟವಾಗುವುದು. ಸನ್ಮಾನ್ಯ ಗ್ರಾಹಕರು

ಧರ್ಮರಾಜ್ಯದಮೇಲೆ ಎಂದಿನಂತೆ ಪ್ರೇಮಾದರಗಳನ್ನಿಟ್ಟು ಸಹಾಯಕರಾಗಿ ಪತ್ರಿಕೆಯನ್ನು ಸ್ಥಿರವಾಗಿ ಉಳಿಸುವುದು ಪ್ರಧಾನ ಕಾರ್ಯವಾಗಿದೆ.

ಈ ಹಿಂದೆ ಪೋಷಕ - ಸಹಾಯಕರಾದವರಿಗೆ ಪದ್ಧತಿಪ್ರಕಾರ ನಮ್ಮ ಸಂಸ್ಥೆಯ ಸಹಾಯದಿಂದ ಹೊರಡಲಿರುವ "ಪಂಚಾಚಾರ್ಯರೂ, ಪಂಚವಕ್ತ್ರ ಗಣೇಶ್ವರರೂ," ಎಂಬ ಪುಸ್ತಕಗಳನ್ನು ಕಳುಹಿಸುವ ಯತ್ನದಲ್ಲಿದ್ದೇವೆ. ಮುಂದೆ ಧರ್ಮರಾಜ್ಯವು ಪ್ರತಿತಿಂಗಳು ಕಾಗದದ ಬೆಲೆ ಇಳಿಯುವವರೆಗೂ ೧೫ ಪುಟಗಳಷ್ಟು ಮಾತ್ರ ಹೊರಡುವುದು ವಾಚಕರು ಭಿನ್ನಾಭಿಪ್ರಾಯ ಪಡದೆ ಧರ್ಮರಾಜ್ಯವನ್ನು ಸ್ವಾಗತಿಸಿ ಅದರ ಅಭ್ಯುನ್ನತಿಯಲ್ಲಿ ಭಾಗವಹಿಸಬೇಕಾಗಿ ಕೋರಿಕೆ.

ಸಂಪಾದಕ, "ಧರ್ಮರಾಜ್ಯ."

---

## ವೀರಶೈವ ಧರ್ಮಾಲಯಕ್ಕೆ ಉದಾರ ದಾನ

ಮುದೇನೂರು ಮಠಾಧೀಶರಾದ, ಶ್ರೀ ವಾಗೀಶ ಶಿವಾಚಾರ್ಯರು ಮುದೇನೂರ ತಮ್ಮ ಮಠದಲ್ಲಿ "ವೀರಶೈವ ಧರ್ಮಾಲಯ" ವನ್ನು ಸ್ಥಾಪಿಸಿ ಈ ಪ್ರಸ್ತಾಪಿತ ಸಂವತ್ಸರದ ಕಾರ್ತೀಕ ಶು॥ ೧ ಕ್ಕೆ ಒಂದು ವರ್ಷ ಪೂರ್ತಿಯಾಯಿತು. ಈ ಮಧ್ಯದಲ್ಲಿ ವೀರಶೈವ ಧರ್ಮಾಲಯದ ಕಾರ್ಯಪ್ರಚಾರಕ್ಕೆ ಹರಿಹರದಲ್ಲಿ ಒಂದು ಬ್ರ್ಯಾಂಚನ್ನು ಸ್ಥಾಪಿಸಬೇಕೆಂದು ಸಂಕಲ್ಪಿಸಿ ಕೆಲವು ಸ್ಥಳಗಳನ್ನು ಪರಾಮರ್ಶಿಸುತ್ತಲಿದ್ದುದು ಸರ್ವರಿಗೂ ಮೊದಲೇ ಗೊತ್ತಾಗಿದ್ದಿತು. ಇದೇ ಕಳೆದ ಶ್ರಾವಣ ಮಾಸದಲ್ಲಿ ಪ್ರೆಸ್ಸಿನ ಖರೀದಿಗೆಂದು ಶ್ರೀಗಳವರು ರಾಣೇಬೆನ್ನೂರಿಗೆ ದಯಮಾಡಿಸಿ ಅಲ್ಲಿಯ ಸುಪ್ರಸಿದ್ಧರಾದ, ಹಿರೇಮಠದ ವೇ॥ ವೀರಯ್ಯನವರ ಮಠದಲ್ಲಿ ವಾಸ

ಮಾಡಿ ಶ್ರಾವಣ ಮಾಸದ ಪೂಜಾದಿಗಳನ್ನು ಉಪವಾಸವ್ರತದೊಡನೆ ಸಾಂಗಗೊಳಿಸಿದರು. ಅದೇ ಸಮಯದಲ್ಲಿ ರಾಣೇಬೆನ್ನೂರಿನ ಸುಪ್ರಸಿದ್ಧರಾದ ತಜ್ಞ ಒಡೆಯರಮಠದ ವೇ|| ರೇವಣಪ್ಪಯ್ಯನವರು ಶ್ರೀಗಳವರಿಗೆ ಬಿನ್ನಹಮಾಡಿ ತಮ್ಮ ಮಠಕ್ಕೆ ಕರೆದುಕೊಂಡು ಹೋಗಿ ಶ್ರೀಗಳವರ ಸಮಾಜ ಸೇವಾದಿ ಸಕಲ ಗುಣಾವಳಿಯನ್ನು ತಿಳಿದು ಸಂತುಷ್ಟರಾಗಿ ಹುಬ್ಬರದಲ್ಲಿ ತಮ್ಮ ಪಿತೃ ಪಿತಾಮಹಾದಿಗಳಿಂದ ಸಾಗಿಬಂದಿರುವ ಮಠವನ್ನು ಬೈಲುಪ್ರದೇಶ ಸಹಿತವಾಗಿ ದಾನ ಮಾಡುವುದಾಗಿಯೂ ಅಲ್ಲಿಯೇ ತಮ್ಮ ಬ್ರಾಂಚ್‌ನ್ನು ಸ್ಥಾಪಿಸಿ ಕಾರ್ಯಗಳನ್ನು ನಡೆಸಬೇಕಾಗಿಯೂ ವಾಗ್ದಾನವನ್ನು ಮಾಡಿ ತಮ್ಮ ಸಮೀಪ ಸಂಬಂಧಿಗಳಾದ ರಾಣೇಬೆನ್ನೂರು ಹೂಲಿಕಂತೆ ಮಠದ ವೇ|| ಕರಿಸಿದ್ದಯ್ಯನವರೊಡನೆಯೂ, ವೇ|| ವೀರಯ್ಯನವರೊಡನೆಯೂ ಅಲ್ಲಿಯ ಗುರುಭಕ್ತರಾದ ಶ್ರೀಮಾನ್ ಮರಿಯಾನೆ ರೇವಣಸಿದ್ದಪ್ಪನವರು ಶ್ರೀಮಾನ್ ಬಾದಾಮಿ ಬಸಪ್ಪನವರು ಇವರೇ ಮುಂತಾದವರೊಡನೆಯೂ ಪ್ರಸ್ತಾಪಿಸಿ 'ಶುಭಸ್ಯ ಶೀಘ್ರಂ' ಎಂಬ ಆರ್ಯೋಕ್ತಿಯನ್ನು ನೆನೆದು ಸ್ವತಃ ದಾವಣಗೇರೆಗೆ ಬಂದು ವಕೀಲರ ಸಲಹೆಗಳನ್ನು ಪಡೆದು ಮುಂದೆ ಯಾವ ಕಾಲಕ್ಕೂ ಶ್ರೀಗಳವರಿಗೂ ಶ್ರೀಗಳ ಸತ್ಕಾರ್ಯದಲ್ಲಿಯೂ ತೊಂದರೆ ಬಾರದಂತೆ ದಾನಪತ್ರವನ್ನು ಬರೆದು ತಾ. ೧೪—೯—೩೭ ನೆಯ ದಿನ ದಾನಪತ್ರವನ್ನು ಶ್ರೀಗಳ ಹೆಸರಿಗೆ ರಜಿಸ್ಟರ್ ಮಾಡಿಸಿ ಹರಿಹರಕ್ಕೆ ಹೂಲಿಕಂತೆ ಮಠದ ವೇ|| ಕರಿಸಿದ್ದಯ್ಯನವರು ಮತ್ತು ಶ್ರೀಮಾನ್ ಮರಿಯಾನೆ ರೇವಣಸಿದ್ದಪ್ಪನವರೂ ಇವರೊಡನೆ ಬಂದು ಮಡೇನೂರು ಮಠಾಧೀಶರಾದ ಶ್ರೀ ವಾಗೀಶ ಶಿವಾಚಾರ್ಯರ ಪಾದಾರವಿಂದಗಳಲ್ಲಿ ತಮ್ಮ ಪುರಾತನ ಮಠವನ್ನು ಆತ್ಮ ಸಂತೋಷದಿಂದ ಒಪ್ಪಿಸಿ ಅಖಂಡ ಕೀರ್ತಿಗೆ ಪಾತ್ರರಾದರು. ನಿರಪೇಕ್ಷಿತವಾಗಿ ಉಂಟಾದ ಇಂತಹ ದಾನವೇ ನಿಜವಾದ ದಾನವೆನಿಸುವುದು. ಇಂತಹ ಉದಾರ ದಾನಿಗಳು ಸಮಾಜದಲ್ಲಿ ದೊರೆಯುವುದು ತೀರ ಅಪರೂಪ. ಇವರಿಗೆ ಜಗದೀಶ್ವರನೂ, ಜಗದ್ಗುರು ಪಂಚಾಚಾರ್ಯರೂ ನಿತ್ಯ ಸುಖ-ಸಂಪತ್ತುಗಳನ್ನಿತ್ತು ಕಾಪಾಡಲೆಂದು ಹರಸುವೆನು.

ಸದ್ಯಃ ಶ್ರೀಗಳವರು ಈ ಪುರಾತನ ಮಠವನ್ನು ವಿಶೇಷವಾದ ಧನವ್ಯಯದಿಂದ ರಿಪೇರಿ ಮಾಡಿಸಿ ಕಳೆದ ವಿಜಯಾ ದಶಮಿಗೆ ಇಲ್ಲಿಯೇ ಧರ್ಮರಾಜ್ಯ ಪ್ರೆಸ್ಸನ್ನು ಸ್ಥಾಪಿಸಿ "ಧರ್ಮರಾಜ್ಯ" ಪತ್ರಿಕೆಯು ಹೊರಡುವಂತೆ ವ್ಯವಸ್ಥೆಮಾಡಿದ್ದಾರೆ.

ಮುಂದೆ ಕೆಲದಿನಗಳಲ್ಲಿಯೇ "ವಿದ್ಯಾಪೀಠ"ವನ್ನೂ ಸ್ಥಾಪಿಸಿ ವಿದ್ಯಾರ್ಥಿಗಳಿಗೆ ಉಚಿತವಾಗಿ ಭೋಜನದ ವ್ಯವಸ್ಥೆಯನ್ನೂ ಮಾಡಬೇಕೆಂದು ಸಂಕಲ್ಪಿಸಿದ್ದಾರೆ. ಶ್ರೀಗಳವರ ಘನ ಸಂಕಲ್ಪವು ನೆರವೇರಬೇಕಾದರೆ ಸದರಿ ಮಠದ ಬಾಂಧವರೂ ಒಮ್ಮನಸ್ಸಿನಿಂದ ಸಹಾಯಕರಾಗಬೇಕು. ವಿದ್ಯಾರ್ಥಿ ನಿಲಯಕ್ಕೂ, ಅಧ್ಯಾಪಕರ ಅಧ್ಯಾಪನಕ್ಕೂ, ಬೋರ್ಡಿಂಗಿಗೂ ಇನ್ನೂ ಕಟ್ಟಡವು ಸಿದ್ಧವಾಗಿಲ್ಲ. ವೇ॥ ರಾಣೇಬೆನ್ನೂರಿನ ರೇವಣಸಿದ್ಧಯ್ಯನವರಂಥ ಉದಾರವಾಸಿ ಶ್ರೀಮಂತರು ಹತ್ತು ಲಕ್ಷಗೊಳ್ಳಿರೆ ಈ [illegible] ಪ್ರಾರಂಭಿಸಲ್ಪಡುವುದು, ದೇವರು ಸಿರಿವಂತರಿಗೆ ಇಂತಹ ಸದ್ಬುದ್ಧಿಯನ್ನು ಶೀಘ್ರವಾಗಿ ದಯಪಾಲಿಸಿ ಶ್ರೀಗಳವರ ಸಂಕಲ್ಪವು ಪೂರ್ಣವಾಗುವಂತೆ ಮಾಡಲೆಂದು ಪ್ರಾರ್ಥಿಸುತ್ತೇನೆ.

ತಮ್ಮ
ಸೆಕ್ರೆಟರಿ
ಶ್ರೀ ವೀರಶೈವ ಧರ್ಮಾಲಯ,
ಧರ್ಮರಾಜ್ಯ ಪ್ರೆಸ್. ಹರಿಹರ.

---

## —] ಶ್ರೇಷ್ಠವಾದ ಗ್ರಂಥಗಳು [—

—][—

ಎಲ್ಲಾ ವೈದಿಕ ಮತಗಳೂ ಪ್ರಸ್ಥಾನತ್ರಯ ಭಾಷ್ಯದಿಂದ ಅಲಂಕರಿಸಲ್ಪಟ್ಟಿರುವವು. ಉಪನಿಷತ್ತು - ಬ್ರಹ್ಮಸೂತ್ರ - ಭಗವದ್ಗೀತೆಗಳೆಂಬ ಪ್ರಸ್ಥಾನತ್ರಯಕ್ಕೆ ಭಾಷ್ಯವಿಲ್ಲದಿರುವ ಮತಗಳು ವೈದಿಕ ಮತಗಳಲ್ಲಿ ಗಣನೆಯಾಗಲಾರವು. ಶ್ರೀಕರ ಭಾಷ್ಯದಿಂದ ವೀರಶೈವವು ವೇದಸಿದ್ಧಾಂತಿತವಾದ ಮತವೆಂಬುದು ಸುಪ್ರಸಿದ್ಧವಾಗಿ

ಉಪಯೋಗವೂ ಇದೆ. ಸಿದ್ಧಾಂತವನ್ನು ಸುಲಭ ಸರಣಿಯಿಂದ ಹೇಳುವ ಭಾಷ್ಯರಚನೆಯ ಅವಶ್ಯಕತೆಯು ವಿಶೇಷವಾಗಿದೆ. ಎಂಬುದನ್ನು ಎಲ್ಲರೂ ಬಲ್ಲರು. ಇಂತಹ ಭಾಷ್ಯ ರಚನಾ ಸಾಮರ್ಥ್ಯವನ್ನು ಸಂಪಾದಿಸಿದವರು ಪಂಡಿತರಲ್ಲಿ ಹೆಚ್ಚಾಗಿ ದೊರೆಯುವುದು ಕಷ್ಟವಾದರೂ ಉಪನಿಷತ್ತು ಮೊದಲಾದವುಗಳ ಭಾಷ್ಯಗಳನ್ನು ರಚಿಸಿ ಆ ಅಪವಾದವನ್ನು ಆಸ್ಥಾನ ವಿದ್ವಾನ್ ಧರ್ಮರತ್ನ ಪಂ|| ವೇ|| ಶಂಕರಶಾಸ್ತ್ರಿಗಳವರು ಹೋಗಲಾಡಿಸಿರುವುದು ಸರ್ವ ಶ್ರುತಿಯಾಗಿದೆ. ಅವರು ರಚಿಸಿರುವ ಶ್ರೇಷ್ಠ ಗ್ರಂಥಗಳು ೧ ರೂ. ಗೆ ೪ ಅಣೆಯಂತೆ ಕಮಿಶನ್‌ದಂತೆ ಸಿಗುವ ವ್ಯವಸ್ಥೆ ಮಾಡಿದೆ.

| | | |
|---|---|---|
| ಈಶಾವಾಶ್ಯೋಪನಿಷತ್ತು | (ಶಾಂಕರೀ) | ಬೆಲೆ ೧—೦—೦ |
| ಕೇನೋಪನಿಷತ್ತು | (ಶಾಂಕರೀ) | ೮—೦—೦ |
| ಸಿದ್ಧಾಂತಶಿಖೋಪನಿಷತ್ತು | (ವೀರಶೈವ ಭಾಷ್ಯ) | ೧—೦—೦ |
| ವೀರಶೈವ ಸಿದ್ಧಾಂತ ಸುಧಾಕರ | | ೨—೦—೦ |

ಗ್ರಂಥಗಳನ್ನು ತರಿಸುವವರು ಈ ವಿಳಾಸಗಳಿಗೆ ಬರೆಯಬೇಕು.

(೧) ವ್ಯಾ. ವೀರಶೈವ ಧರ್ಮಾಲಯ
ಧರ್ಮರಾಜ್ಯ ಪ್ರೆಸ್
ಹರಿಹರ

(೨) ಆಸ್ಥಾನ ವಿದ್ವಾನ್, ಪಂ|| ಶಂಕರ
ಶಾಸ್ತ್ರಿಗಳು ಹರಿಹರ

---

# ವರಕವಿ ವಾಗೀಶನಿಗೆ
# ವಂದಿಸುವುದೇಕೆ?

ಕವಿಃ—ಕಮಲಾಪುರದ ಕೆ. ಕೊಟ್ರಪ್ಪ ಸ್ಕೂಲ್‌ಮಾಷ್ಟರ್
ಹನಗೋಡಿ. ಹರಿಹರ ಸಬ್‌ತಾಲೂಕು

—:o:—

ಶ್ರೀಪರಮ ಗುರುವಂಶದವತರ|
ಸೀ ಪೊಡವಿ ಕರ್ನಾಟಕದೇಶದಿ|
ದೀಪಿಸಿರುವಾಮುದಿಯನೂರಿನ ಮಠವೊಡೆಯನೆನಿಸಿ||
ತಾಪಸೇಂದ್ರರ ಮಾರ್ಗದೊಳು ತಾಂ|
ಲೋಪ ಬರದಂದದಲಿ ನಡೆಯುವ|
ಸೀ ಪರಮ ವಾಗೀಶನದರಿಂ ನಮಿಪೆನನವರತಾ| ||೧||

ವಸುಧೆಯೊಳಗತ್ಯಧಿಕವಾಗಿಹ |
ಪಶುಪತಿಯ ತತ್ವವವನು ಜನಗಳಿ |
ಗುಸುರುತಗಪರಿಸಲ್ಕೆ ಯುದ್ಭವಿಸುತ್ತ ಸಂತಸದಿ||
ವಿಸುಸಿತೇಜದ ದೇಹಕೊಂದಗುಣ |
ಕಸವಿಸಯು ಲೆಕ್ಕಿಸದ ಮಹಿಮನು |
ಹಸನಮನದಲಿಯವಗೆ ನಾಂ ನಮಿಸುವೆನು ಯನವರತಾ.. ||೨||

ರವಿಸುತಘನದತತ್ವವನು ಜಗ |
ದ ಮಿತಶಾಂತಿಯು ನೆಲೆಗೊಳಿಸಲತಿ|
ಮಮತೆಗೊಂಡುರು ಧರ್ಮರಾಜ್ಯದಿ ಧರ್ಮಲೇಖಿಗಳ||
ಸುಮನಸರಮನವೊಪ್ಪುವಂದದಿ|
ಅಮಮ ಮಿಂಚೊಲು ಬರೆಪನದಱಿಂ|
ನಮಿಸುವೆನು ನೆನೆನೆನೆದು ಜಿಹ್ವೆನಲಿ ಸಕಲ ಕಾಲದೊಳ್|| ||೩||

ಕನ್ನಡದೊಳಳಿದಿರ್ದ ಧರ್ಮಗ|
ಳುನ್ನತಿಯ ಕೈಗೊಂಡು ದಾಸ್ಯದಿ|
ಮುನ್ನ ತಿಳುಹಲು ಮುಂದೆ ಬಂದರುಧರ್ಮ[illegible]|

ಚಿನ್ನ ತಿಳಿಗನ್ನಡದಿ ಕೋರುತ ।
ತನ್ನ ಸುಖ ದುಃಖಗಳ ಲೆಕ್ಕಿಸ ।
ದನ್ನ ತಿಳಿಸು ನಾಗೀಶನಡದಿಂ ನಮಿಸೆ ನಾಂ ಮುದದಿ ॥ ॥ ೪ ॥

ವಿವರದೊಳು ಐತಿಹಾಸ ಶೋಧದ ।
ನವಿರತಂ ಮಾಡುತ್ತ ಕನ್ನಡ ।
ಕವಿಸಮುದಯದಿಂ ಧರ್ಮರಾಜ್ಯದಿ ಬರೆಯುತನವರತಾ ॥
ಕವಿಗಳೊರೆಯುವ ದರವು ಬರದದ ।
ಕವನಗಳಿಗಾಶ್ರಯದ ಕೊಟ್ಟಿಹ ।
ಕವಿವರಂ ನಾಗೀಶನಡದಿಂ ನಮಿಸೆ ಸಂತಸದಿ ॥ ೫ ॥

ವಾಸ್ತವದ ಉಕ್ತಿಗಳ ಸತತಂ ।
ಶಿಸ್ತಿನಿಂದಾಡುತಲಿ ಸೊಗಸಿನ ।
ಹಸ್ತಗಳಿಂ ಜಗವನುದ್ಧರಿಪುವನು ಬಿಗಿದೆಡೆದೂ ॥
ಸ್ವಸ್ಥಚಿತ್ತದಿ ಸಕಲರೆದೆಯೊಳು ।
ಆಸ್ತಿಕ್ಯ ಬುದ್ಧಿಯ ಇಟ್ಟಿಹ ।
ಮಸ್ತಕದಿ ನಮಿಸುವ ಮುದದಿಂ ಸರ್ವಕಾಲದಲೀ ॥ ೬ ॥

ಗೀಳುಮೇಲೆಂಬುದನು ಮನದಲಿ ।
ತಾಳದಲೆ ಸಮನೋಟದಿಂ ಜಗ ।
ದೇಳಿಗೆಯ ನೆನೆಯುತ್ತ ಮತಿಶಯ ಹರುಷದಿಂ ಕೂಡಿ ।
ಸೀಳುತತ್ವಗಳೆಲ್ಲವನು ತಾಂ ।
ಮೇಳವಿಸಿ ನಾಗೀಶಮನುಜರ ।
ಜಾಳದಲಿ ಬಿತ್ತರಿಪನದರಿಂ ಪಾದಕಭಿನಮಿಪೆ ॥ ೭ ॥

ಶ್ರವಣದಿಂ ಮನನೆಯಗೊಳ್ಳುತ ।
ನರರನುದ್ಧರಿಸುತಲಿ ಸತತಂ ।
ಗುರುಗಳಲಿ ಗುರುವೆನಿಸಿ ಜಗದೊಳು ಮೆರೆಯುತನವರತಾ ॥
ವರನನೆನೆವನು ಮನದಿ ಗೈಯುತ ।
ಶಿರದ ಗುರು ನಾಗೀಶನಡಿದಾ ।
ವರಗಳಿಗೆ ನಮಿಸುವೆನು ಮುದದಿಂ ಭಕ್ತಿಭಾವದೊಳೂ ॥ ೮ ॥

[ಅಷ್ಟಾಕ್ಷರೀ ನಮಸ್ಕಾರ ಪೂರ್ಣಂ]

# ಧರ್ಮರಾಜ್ಯ

| ಸಂಪುಟ ೨ | ವಿಕ್ರಮನಾಮ ಸಂವತ್ಸರ ಚೈತ್ರ | ಸಂಚಿಕೆ ೧ |
| --- | --- | --- |

## “ ವರಕವಿ-ವಾಗೀಶ ”

[ ಬರೆದವ— ಕಮಲಾಪುರದ ಕೆ. ಕೊಟ್ರಪ್ಪ ಸ್ಕೂಲ್ ಮಾಸ್ಟರ್ ಕೂಸಗಾವಿ ]

—★—

ವಾಗೀಶ ವರಕವಿಯು ।
ಆಗಮದ ಪರಿಯರಿತ ।
ರಾಗದೂರನು ಕುಕವಿವ್ರಸ್ತನು ॥
ಭೋಗಮೋಕ್ಷದ ಮಾರ್ಗ ।
ಕೂಗಿ ತೋರಿದ ಬುಧನು ।
ಯೋಗತತ್ವಾಗ್ರಣಿಯು ಸುಗುಣಮಣಿಯು ॥ ೧ ॥

ಜಗದಿ ಸಂಚರಿಸುತ ।
ಮಿಗಿಲಾದ ತತ್ವವನು ।
ಪೊಗಳುವನು ಜನರೆದೆಯೊಳತಿಸುಲಭದಿ ॥
ನಿಗಮ ನಿಜವನುಮನದಿ ।
ಸೊಗಸಾಗಿಯರಿತವನು ।
ಬಗೆ ಬಗೆಯ ರೀತಿಯಲಿ ಬೋಧಿಸುವವ ॥ ೨ ॥

ಲಿಂಗಸಂಗನ [illegible] ।
ಜಂಗಮ[illegible]ಯೊಡನೆ ।
ಸಿಂಗರದಿ [illegible]ನೆಡೆನು ಶಿವಲಾಂಛಿತ ॥

ತುಂಗಭದ್ರೆಯ ತೀರ।
ಸಂಗದಲಿ ನೆಲೆಸಿರ್ಪ।
ಮಂಗಳದ ಮುಡಿಯನೂರಾತನೀತಾ ॥ ೩ ॥

ಶೈವಧರ್ಮವ ಬಲ್ಲ।
ದೇವಸಹುಪಲೆ ಈತ।
ಜಾವದೊಳು ನಾಸ್ತಿಕರ ಜಯಿಸಬಲ್ಲಾ ॥
ಭಾವಿಸಲು ಸುರಯಕ್ಷ।
ದೇವ ಮಹಪ್ರೇವಾದಿ।
ನೋವಾಗುವಂದದಲಿ ಶಿರದೂಗುತಿಹರೊ ॥ ೪ ॥

ಈತನೀಗುಣಕೆ ಜಗ।
ಸೋತು ಸೇವಿಸುತಿಹುದು।
ಜಾತಿ ಮತವಳಿದಖಿಳಜನವರ್ಗವೂ ॥
ಮಾತು ಮಾತಿನೊಳೆಲ್ಲ।
ನೀತಿಯನು ಪೊಳಗೊಂಡ।
ಮಾತನಾಡುವ ಸಾರಸುಜ್ಞಾನಿಯೂ ॥ ೫ ॥

ಕಲ್ಲು ಕಟ್ಟಿಗೆ ಮಣ್ಣು।
ಹುಲ್ಲು ಹೂಗಿಡಮರಗ।
ಳೆಲ್ಲ ಜೀವಿಗಳನ್ನು ನೋಡಿದೊಡನೇ ॥
ಬಲ್ಲ ಬುಧರೊಪ್ಪುವೊಲು।
ಸೊಲ್ಲಿಸುವ ಕವಿತೆಯನು।
ಬಲ್ಲಿದರ ದೊರೆಯಹುದು ಗುರುತಿಲಕನೂ ॥ ೬ ॥

ಕಳವು ಪುಸಿಮಾರ್ದವು।
ಕೊಲೆಗಡುಕತನ ಕಪಟ।
ಛಲ ನಿಂದ್ಯ ಮೋಹ ಮದ ಮಾತ್ಸರ್ಯದಿ ॥
ತಿಳುವಿಲ್ಲವೀತಂಗೆ।
ತಿಳಿಸಬೇಕೆನೆ ಬುದ್ಧಿ।
ಬಲುಮಂದವಿಘಟಿತಿರ್ಪುದೀಗುಣದಲೀ ॥ ೭ ॥

ಗೀರ್ವಾಣ ಭಾಷೆಯೊಳು ।
ತೋರ್ವ ಶಾಸ್ತ್ರದ ಮರ್ಮ ।
ಊರ್ವಿಯೊಳು ತೆರೆದಿಡಲು ಮನದಿ ನೆನೆಮ ॥
ಸರ್ವ ರಾಷ್ಟ್ರದಿ ಸೊಗಸ ॥
ಬೀರ್ವ ಕರ್ನಾಟಕದಿ ।
ಸಾರ್ವದಕೆ ಹೊರಡಿಸಿದ ಧರ್ಮರಾಜ್ಯ ॥ ೮ ॥

ಧರ್ಮರಾಜ್ಯವು ಜಗದಿ ।
ಪೇರ್ಮೆಯಿಂ ಮೆರೆಯಲಮ ।
ಧಾರ್ಮಿಕದ ಗುಣಗಳಿಂ ಪ್ರಕಟಮದೊನಿಗೂ ॥
ನಿರ್ಮಲದ ವಾಗೀಶ ।
ಧರ್ಮರಾಜ್ಯವ ಸತತ ।
ನಿರ್ಮಿಸುತ ಬಾಳಿರಲಿ ನಮಗೋಸುಗಾ । ॥ ೯ ॥

---

# ಆಧುನಿಕ ಶಿಕ್ಷಣದಿಂದ ಧರ್ಮ ಹಾಗೂ ರಾಷ್ಟ್ರಕ್ಕಾಗುವ ದುಷ್ಪರಿಣಾಮ.

[ ಲೇಖಕ— ಪುಟ್ಟಯ್ಯ ಸ್ವಾಮಿ ತೆಲಿಗಿಮಠ ]

ಜಗತ್ತಿನಲ್ಲಿಯ ಪ್ರಾಣಿವರ್ಗಗಳಲ್ಲಿ ಮನುಷ್ಯ ವರ್ಗವು ಅತಿ ಶ್ರೇಷ್ಠ ತರಗತಿಯದಿರುವದು. ತಮ್ಮೆಲ್ಲರಿಗೆ ವಿದಿತವಾದ ಸಂಗತಿಯಷ್ಟೆ ? ಆದರೆ ಹೀಗಾಗಲು ಯಾವ ಕಾರಣವಿರಬಹುದೆಂದು ಯಾರಾದರೂ ಪ್ರಶ್ನಿಸಿದರೆ ಆ ಪ್ರಾಣಿಯಲ್ಲಿ ಜ್ಞಾನವೆಂಬ ಉತ್ಕೃಷ್ಟವಾದ ವಸ್ತುವು ಇರುವದರಿಂದ ಎಂಬ ಸಮುತ್ತರವನ್ನು ಕೊಡಬಹುದಲ್ಲವೆ ? ಪರಂತು ಈ ಜ್ಞಾನವು ಆ ಪ್ರಾಣಿಯಲ್ಲಿ ಬೀಜ

ರೂಪವಾಗುತ್ತವೆ. ಅವನ್ನು ಸುಶೀಲಪೂರ್ಣವಾಗಿ ಮಾಡಲಿಕ್ಕೆ ಬೇಕಾಗುವ ಅನೇಕ ಸಾಧನಗಳಿಂದ ಬಿತ್ತಿ ಬೆಳೆದರೆ ಮಾತ್ರ ಅದು ಮುಂದೆ ಮಧುರವಾದ ಫಲಗಳನ್ನು ಕೊಡಬಲ್ಲವು! ಇಲ್ಲವಾದರೆ ಮಾತ್ರ ಅಲಕ್ಷ್ಯೋನ್ಮುಖನಾದ ಒಕ್ಕಲಿಗನೋಪಾದಿಯಲ್ಲಿ ಎಲ್ಲಾ ವ್ಯರ್ಥವೇ ಸರಿ.

ಮನುಷ್ಯ ಪ್ರಾಣಿಯು ಹುಟ್ಟಿದ ಕೂಡಲೇ ಅತೀ ಅವಶ್ಯವಾದ ವಿಷಯವೆಂದರೆ ಗೃಹ ಶಿಕ್ಷಣ. ಗೋಡೆಯು ತರವು ಅತೀ ಉತ್ತಮವಾಗಿ ಬಿದ್ದರೆ ಗೃಹವು ಹೇಗೆ ಬಹು ದಿವಸ ತಾಳುವದೋ ಅದರಂತೆ ಮಾನವನಿಗೆ ಅವತರಿಸಿದೊಡನೆಯೇ ಗೃಹ ಶಿಕ್ಷಣದ ಅವಶ್ಯಕತೆಯು ವಿಶೇಷವಿರುವದು. ಆದರೆ ಇದು ಮಾತ್ರ ಕೇವಲ ದಂತಕತೆಯಲ್ಲ. ಸ್ವಾತಂತ್ರ್ಯ ಸ್ವಧರ್ಮಾಭಿಮಾನಿಗಳಾಗಿ ಹೋದ ವೀರ ಅಭಿಮನ್ಯು, ಛತ್ರಪತಿ ಮಹಾರಾಜ ಶಿವಾಜಿ, ಧೋರ್ಬಿದಾಸ, ಚೀಲಾಳ ಮುಂತಾದ ಇನ್ನೂ ಅನೇಕ ಮಹಾತ್ಮರ ಉದಾಹರಣೆಗಳಿಗನುಸರಿಸಿದ ಈ ಗೃಹಶಿಕ್ಷಣದಲ್ಲಿ ಪ್ರತಿಯೊಬ್ಬ ಮಾನವನ ಮಾತಾಪಿತೃಗಳು ಅತಿ ಜಾಗರೂಕರಾಗಿರುವದು ಘಂಟಾಘೋಷವಾಗಿ ಹೇಳುವ ಮಾತಾಗಿದೆ.

ಆದರೆ ಈಗಿನ ಶಿಕ್ಷಣಕ್ಕೂ ಪ್ರಾಚೀನ ಕಾಲದಲ್ಲಿ ಕೊಡಲ್ಪಡುತ್ತಿದ್ದ ಶಿಕ್ಷಣಕ್ಕೂ ಭೂಮ್ಯಾಕಾಶಗಳಷ್ಟು ವ್ಯತ್ಯಾಸವು ಕಂಡು ಬರುವದು. ಯಾಕೆಂದರೆ ಆಗಿನ ನಮ್ಮ ಸ್ವತಂತ್ರ ಭಾರತ ಭೂಮಿಯಲ್ಲಿ ಅವತರಿಸಿದ ಪ್ರತಿಯೊಬ್ಬ ಮಾನವನು ಭಾರತ ಮಾತೆಯ ಸೇವೆ ಮಾಡಿ ತನ್ನ ಕೀರ್ತಿಯನ್ನು ಅಜರಾಮರವಾಗಿ ಉಳಿಸುವದಕ್ಕೆ ಪ್ರಯತ್ನ ಮಾಡುತ್ತಿದ್ದನಲ್ಲದೇ ತನ್ನ ಪೀಳಿಗೆಗಳನ್ನೂ ಕೂಡ ಹಾಗೆ ಆಚರಣೆಯಲ್ಲಿ ತರಲು ತನ್ನ ಬೋಧಾಮೃತದ ಪಾನ ಮಾಡಿಸಿ ತನ್ನ ಜನ್ಮ ಸಾಫಲ್ಯ ಮಾಡಿಕೊಳ್ಳುತ್ತಿದ್ದನು. ಆದರೆ ಈಗಿನ ಗುಲಾಮಗಿರಿಯ ಭಾರತದಲ್ಲಿ ತಾವು ಗುಲಾಮಗಿರಿಯ ವೃತ್ತಿಯನ್ನು ತಲೆಯಲ್ಲಿ ಹಾಕಿಕೊಂಡು ಅದರಂತೆಯೇ ತಮ್ಮ ಪಿಂಡಗಳಲ್ಲಿಯೂ ಕೂಡ ಅದೇ ತರಹದ ಶಿಕ್ಷಣ ಪ್ರಸಾರ ಮಾಡಲು ತೊಡಗಿರುವುದನ್ನು ನೋಡಿದರೆ ಯಾರ ಮನಸ್ಸು ವಿಷಾದಗೊಳ್ಳಲಿಕ್ಕಿಲ್ಲ!

ಕಂಡ ಧನಸಣ್ಣೆಂದು ಬಿಗಿದರು ನೆಕ್ಟಾಯಿ ।
ಹೊಂಟ್ರಷ್ಟು ನೌಕರಿಗೆ ಬಿಟ್ಟು ಬಿಟ್ಟು ಬಾಯಿ ।
ಎಲ್ಲೆಲ್ಲಿ ಹೋದರೂ ಆಗಲಿಲ್ರಿ ಸೋಯಿ ।
ಇಂಗ್ಲೀಷು ಸಾಕಷ್ಟು ನನಗೆ ಗುಡ್‌ನೈಟು ॥ ೩ ॥

ಹಣವೆಲ್ಲ ಹೋಯಿತು ಮಾಡಿದರು ಮೋಸು ।
ಉಳಿಲಿಲ್ರಿ ಬದಜನಕ ವಿಷಕೊಂಡು ಕಾಸು ।
ತಿಳಿದೀಗ ಬಿಡಿರಷ್ಟು ನೀವೆಲ್ಲ ಸೋಸು ।
ಇಂಗ್ಲೀಷು ಸಾಕಷ್ಟು ಮೆನಿ ಮೆನಿ ಥ್ಯಾಂಕ್ಸ್ ॥ ೪ ॥

ಈ ಮೇಲಿನ ೪ ನುಡಿಯ ಡಂಗುರವು ನಮ್ಮ ಗುಲಾಮೀ ಬಂಧುಗಳ ಕಿವಿಗೆ ಇನ್ನೂ ಕೇಳಿಸಿರುವ ಹಾಗೆ ಕಾಣುವದಿಲ್ಲವೆಂದು ತಿಳಿದು ನಮ್ಮ ರಾಷ್ಟ್ರೋದ್ಧಾರಕರಾದ ಕನ್ನಡ ಕವಿಗಳು ಕೆಳಗಿನಂತೆ ಹಾಡಿದರು.

ಆಖುಲೇಲು ಅಘಟಿತ ಘಟನಾ । ತವದಯಾಘನಾ । ಘಟನಾ
ತವದಯಾಘನಾ । ॥ ಎಂಬಂತೆ ॥

ಈ ಕಲಿಯು ಕಾಲದೊಳೀಗ ಉಳಿವುದೆಂತು ತಾ । ಧರ್ಮ ಉಳಿವುದೆಂತು ತಾ ॥ ಪಲ್ಲ ॥ ಗುರುವು ಹಿರಿಯ ರಾಜ್ಞೆಯು ಬೇಡ । ತಂದೆ ತಾಯ್ಗಳಾಜ್ಞೆಯು ಬೇಡಾ । ಪುರುಷ ಕೇಳೆ ನಾರಿ ಬೇಡಾ । ಉಳಿವುದೆಂತು ತಾ । ಧರ್ಮ ಉಳಿವುದೆಂತು ತಾ ॥ ೧ ॥ ಶುಭಗನಾದ ಕುಂಕುಮ ಭಸ್ಮ । ಅಬಲವಾದ ಅಬಲೆಯರೀಗ । ಪ್ರಬಲವಾದ ಪೌಡರ ಹಚ್ಚೀ ಮೆರೆದ ಶಿಕ್ಷಣ । ದೇವಾ ಮರೆವರೀಕ್ಷಣಾ ॥ ೨ ॥ ಮೊದಲು ಇದ್ದ ದಿರಿಸುಗಳನ್ನೀಗ । ಫ್ರೆಂಚ್ ಕಟ್ಟ ದಿರಿಸುಗಳಾಗಿ । ಮಿರಿ ಮಿಂಚುತಿರುವ ನಡೆ ನುಡಿ । ಇಂಚು ಉಳಿದಾವು । ಅರ್ಧ ಇಂಚು ಉಳಿದಾವು ॥ ೩ ॥ ನಡೆ ನಡುವೆ ಜೈತಲೆ ಇತ್ತು । ಬಿಟ್ಟು ಅಡ್ಡದಾರಿಯ ಹಿಡಿತ್ತು । ಕಟ್ಟಿ ನಡೆ ಹೋಯಿತು ಸತ್ಯ । ಉಳಿವುದೆಂತು ತಾ । ಧರ್ಮ ಉಳಿವುದೆಂತು ತಾ ॥ ೪ ॥

ಹೀಗೆ ಅನೇಕ ರೀತಿಯಿಂದ ಬೋಧಾತ್ಮಕವಾದ ಹಾಡುಗಳನ್ನು ಹಾಡಿದರೂ ಈ ನಮ್ಮ ಭಾರತದ ಬಂಧುಗಳಿಗೆ ಬುದ್ಧಿ ಬರದೇ ಇದ್ದದ್ದು ಆಧುನಿಕ ಶಿಕ್ಷಣದ ದುಷ್ಪರಿಣಾಮವೆಂದೇ ಹೇಳಲು ಯಾವ ಸಂದೇಹವಿಲ್ಲ. ಆದರೆ ಇತ್ತೀಚೆಗೆ ಹಲಕೆಲವು ಸುಧಾ

ತ್ಮರು ತಮ್ಮ ಸದಾಚಾರ ಹಾಗೂ ಸದ್ಬೋಧೆಯಿಂದ ಈ ಅಧರ್ಮಿಗಳನ್ನು ಎಚ್ಚರಿಸಲು ಸಾಧುವು ಮಾಡಿರುವದೆಂದರೆ ಕೇವಲ ನಮ್ಮ ಧರ್ಮ ಹಾಗೂ ರಾಷ್ಟ್ರೋದ್ಧಾರದ ಉನ್ನತಿಯೆಂದೇ ಹೇಳಬಹುದು.

ಸರ್ವೇ ಜನಾಃ ಸುಖಿನೋಭವಂತು ॥

---

# ಕನ್ನಡದ ಪ್ರಾಚೀನತೆ

ಕನ್ನಡ ಭಾಷೆಯು ಬಹು ಪ್ರಾಚೀನಕಾಲದಿಂದ ಬಂದದ್ದು. ಕನ್ನಡದಷ್ಟು ಮೃದು ಭಾಷೆಯು ಜಗತ್ತಿನಲ್ಲಿ ಬೇರೊಂದಿಲ್ಲವೆಂದರೆ ಅತಿಶಯೋಕ್ತಿಯಾಗಲಾರದು. ಈ ನಮ್ಮ ತಾಯ್ನುಡಿಯು ಅತಿ ಕಡಿಮೆಯೆಂದರೆ ೨ ನೆಯ ಶತಮಾನಕ್ಕಿಂತ ಹಿಂದಿನದೆನ್ನುವದರಲ್ಲಿ ಸಂದೇಹವಿಲ್ಲ. ಯಾಕೆಂದರೆ ೯ ಶತಮಾನದ ಸುಮಾರಕ್ಕೆ ನಮ್ಮ ಕನ್ನಡದ ಅರಸನಾದ ನೃಪತುಂಗನೆಂಬವನು "ಕವಿರಾಜಮಾರ್ಗ" ಎಂಬ ಉತ್ಕೃಷ್ಟವಾದ ಅತಿ ಸರಳವಾಗಿಯೂ, ಎಲ್ಲ ಕವಿಗಳಿಗೆ ಮಾರ್ಗ ತೋರಿಸತಕ್ಕದ್ದನ್ನಾಗಿಯೂ ಬರೆದನು. ಇದರಿಂದ ಹಿಂದಿನ ಅರಸರಲ್ಲಿ ಕನ್ನಡ ಭಾಷೆಯ ಹೆಮ್ಮೆಯು (ಅಭಿಮಾನವು) ಎಷ್ಟೆಂಬದು ವ್ಯಕ್ತವಾಗುತ್ತದೆ. 'ಕವಿರಾಜಮಾರ್ಗ' ವೆಂಬ ಗ್ರಂಥವು ಕವಿಗಳ ಮಾರ್ಗದರ್ಶಕವೆಂದಮೇಲೆ ಅದರಲ್ಲಿ ಕವಿಗಳು ಮಾಡತಕ್ಕ ತಪ್ಪುಗಳು ಅಡಕವಾಗಿರಲಿಕ್ಕೆಬೇಕು. ಅಂದಮೇಲೆ ಕಾವ್ಯವು ಈ ಮುಂಚೆಯೇ ಇತ್ತು. ಅದನ್ನು ಈ ರಾಜನು ಸುಧಾರಿಸಿದನೆಂದು ಸಿದ್ಧವಾಗುತ್ತದೆ. ಇನ್ನು ಕಾವ್ಯಗಳು ಹುಟ್ಟಬೇಕಾದರೆ ಸಾಮಾನ್ಯವೇ? ಒಮ್ಮಿಂದೊಮ್ಮೆಗೆ ರಾಶಿಯಾಯಿತೆಂದರೆ ಅದೆಂತ ಅಸಾಧ್ಯವಾದ ಮಾತು. ಕಾಳಿಗೆ ಕಾಳು ಕೂಡಿ ರಾಶಿಯಾಗಬೇಕಲ್ಲವೇ? ಅದರಂತೆಯೇ ಕಾವ್ಯಗಳು ರಚಿಸಲ್ಪಡಬೇಕಾದರೆ ಅನೇಕ ಶಬ್ದಸಂಗ್ರಹಗಳಾ

ಭಾಷಾಶೈಲಿಯೂ, ಇನ್ನೂ ಅನೇಕ ಸಲಹೆಗಳೂ ಬೇಕಾಗುವವು. ಅಂದಮೇಲೆ ಕನ್ನಡ ಭಾಷೆಯು ಇನ್ನೂ ಹಿಂದಿನದಾಗಿರಲಿಕ್ಕೆಬೇಕು. ಭಾಷೆಯಾದರೂ ಹೇಗೆ ಹುಟ್ಟುವದು? ಅದಾದರೂ ಮೇಲಿನ ಉದಾಹರಣೆಯಂತಲ್ಲವೇ? ಯಾವದೊಂದು ಭಾಷೆಯು ಹುಟ್ಟಬೇಕಾದರೆ ಕ್ರಮಪ್ರದಿಂದ ಹುಟ್ಟನಲ್ಲವೇ ? ಹೇಗಂದರೆ ಕೂಸುಗಳು ಮೊದಲು ತಮ್ಮ ಮನೆಯೊಳಗಿನ ಜನರನ್ನು ಕರೆಯಲಿಕ್ಕೆ ಪ್ರಾರಂಭಿಸುತ್ತವೆ. ನಂತರ ಪದಾರ್ಥಜ್ಞಾನ ಮಾಡಿಕೊಳ್ಳುತ್ತವೆ. ಹೀಗೆ ಒಂದರ ಹಿಂದೊಂದು ಸುಧಾರಿಸುತ್ತಹೋಗಿ ಭಾಷೆಯು ಹುಟ್ಟಬೇಕಾದರೆ ನಮ್ಮ ಕನ್ನಡವು ಇನ್ನೂ ಹಿಂದಿನದೆನ್ನಲಿಕ್ಕೆ ಏನೂ ಆತಂಕ ಬರಲಾರದು. ಹೀಗೆ "ಕವಿರಾಜಮಾರ್ಗ" ವು ಬರೆಯುವದಕ್ಕಿಂತ ಮುಂಚೆ ಸಾಧಾರಣ ೭೦೦ ವರ್ಷಗಳ ಹಿಂದೆ ನಮ್ಮ ಶಿರಿಗನ್ನಡವಿತ್ತೆಂದು ಸ್ಪಷ್ಟವಾಗುತ್ತದೆ. ೩-೪ ನೆಯ ಶತಮಾನಗಳಲ್ಲಿ ಏನೂ ಸುಧಾರಣೆಯಾಗಲಿಲ್ಲ. ಮುಂದೆ ಒಂದೆರಡು ಶತಮಾನಗಳ ನಂತರ ತಾಮ್ರಪಟಗಳ ಮೇಲೆಯೂ, ಕಲ್ಲುಗಳ ಮೇಲೆಯೂ ಬರೆದಿಡಲು ಪ್ರಾರಂಭಿಸಿದರೂ ೬ ನೆಯ ಶತಮಾನದಲ್ಲಿ ಕಾವ್ಯಗಳು ಆರಂಭವಾದವು. ೯-೧೦ ನೆಯ ಶತಮಾನದಲ್ಲಿ ಈಗ ಜಾರಿಯಲ್ಲಿ ಬಂದಿರುವ ಹಳೆಗನ್ನಡವು ಇತ್ತು. ಈ ಕಾಲಕ್ಕೆ ಪಂಪ, ಹೊನ್ನ, ರನ್ನ, ಮುಂತಾದ ಪ್ರಸಿದ್ಧ ಜೈನ ಕವಿಗಳು ಆಗಿಹೋದರು. ಆಶಾ ಯುಗವು ಸುವರ್ಣಯುಗವಾಗಿತ್ತೆನ್ನುವದು ಯೋಗ್ಯವಾದದ್ದು. ಹಿಂದಿನ ಕಾಲದಲ್ಲಿ ಜೈನರೂ ಕೂಡ ಕನ್ನಡದ ಸೇವೆಯನ್ನು ಮಾಡಿರುವರೆಂದ ಮೇಲೆ ಆಗಿನ ಕಾಲದಲ್ಲಿ ಮತಭೇದವಿದ್ದಿಲ್ಲೆಂದು ಸಿದ್ಧವಾಗುತ್ತದೆ. ತದನಂತರ ಕನ್ನಡಾಂಬೆಯ ಸೇವೆಯನ್ನು ಬಸವಣ್ಣನವರು ಕೈಕೊಂಡರು. ಇವರ ಕಾಲದಲ್ಲಿ ಆಗಲೇ ಕನ್ನಡಾಂಬೆಯು ತೂರಿದ ಕಲ್ಲು ಸ್ವಲ್ಪ ವೇಳೆಯಲ್ಲಿ ಹೇಗೆ ನೆಲಕ್ಕೆ ಬೀಳುವದೋ ಹಾಗೆ ಅವನತಿಗೆ ಕಾರಣಳಾಗಿದ್ದಳು. ಇಂಥ ಸಮಯದಲ್ಲಿಯೆ ಬಸವಣ್ಣನವರ ಸಹಾಯವು ವತ್ತವಾದದ್ದು. ಇವರ ಕಾಲದಲ್ಲಿ ದೊಡ್ಡದೊಡ್ಡ ಗ್ರಂಥಗಳು ಸಾಮಾನ್ಯತರಗತಿಯಲ್ಲಿ ಎಂದರೆ ಎಲ್ಲರಿಗೂ ತಿಳಿಯುವ ರೀತಿಯಲ್ಲಿ ವಚನಗಳೆಂಬ ರೀತಿಯಲ್ಲಿ ಬರೆಯಲ್ಪಟ್ಟವು.

ಇತ್ತಿತ್ತಲಾಗಿ ಕನ್ನಡವು ಅನೇಕ ಭಾಷೆಗಳ ನಡುವೆ ಸಿಕ್ಕು ಜೀತ ಸಿಸಿಕೊಳ್ಳಲಾರದೆ ಬಳಲುತ್ತಿರುವದು. ಇಂಥ ಸಮಯದಲ್ಲಿ ನಮ್ಮ ಮಾತೆಯು ಪಾರತಂತ್ರ್ಯದಿಂದ ಪರಾಙ್ಮುಖವನ್ನು ಹೊಂದಿದರೆ ಎಲ್ಲ ದಕ್ಕೂ ಅನುಕೂಲವಾಗುವದು. ನೋಡಿರಿ! ತಿಳಿದು ನೋಡಿರಿ! ನೀರು ಹಾಕಿ ಬೆಳೆಸಿದ ಬಳ್ಳಿಯು ಯಾವದೇ ಒಂದು ಕುಡಿಯು ಮುರಿದರೆ ಎಷ್ಟು ದುಃಖವಾಗುವದೋ ಅಷ್ಟೇ ದುಃಖವು ನಮ್ಮ ಮಾತೆಯು ಪರಾಧೀನಳಾಗಿರುವದರಿಂದ ಉಂಟಾಗುತ್ತದೆ. ಇದೊಂ ದೇ ನಮ್ಮ ಕನ್ನಡದ ಕೊರತೆ ಆದ್ದರಿಂದ ಏಳಿರಿ! ಬೇಗನೆ ಏಳಿರಿ! ಸ್ವಾತಂತ್ರ್ಯದ ಸಲುವಾಗಿ ಬಿಸಿರಕ್ತದ ತರುಣರೆಲ್ಲರೂ ಟೊಂಕ ಕಟ್ಟಿರಿ।

ಜಿ. ಡಿ. ಮಠದ ಮುನೇನೂರು.

---

## ಹುಡುಕು

(ವರಕವಿ- ಶ್ರೀ ವಾಗೀಶ)

ದೇವನೆಲ್ಲಿಹನೊ ನೀನೆಲ್ಲಿಂದ ಬಂದೆಯೋ ?
ಆವುದೀ ಕಪಟನಾಟಕ ಮೂಲವು ?
ಹಾವಭಾವಗಳಿಂದ ಸುಖ ದುಃಖಗಳ ತೋರಿ
ಜೀವಿಸುವುದೆಂತಿದೆನು ನೀನೆ ಹುಡುಕು ! ॥ ೧ ॥

ಇರುಳು ಹಗಲಿಲ್ಲದಿರೆ ಶಶಿ ಸೂರ್ಯರಿಲ್ಲದಿರೆ
ಧರೆಯಾದಿ ಪಂಚಭೂತಂಗಳಿಲ್ಲದಿರೆ
ಮೆರೆಯುವುದು ಜ್ಯೋತಿಯದು ಕಾಣಿಸದು ಕಣ್ಣಿಗೆ
ಅರಿವೆಂಬ ಶಕ್ತಿಯೊಡನಿಹುದು ಹುಡುಕು! ॥ ೨ ॥

ಏಕಮೇವಾದ್ವಿತೀಯಂ ಬ್ರಹ್ಮವಾಗಿಯೂ
ಸಾಕಾರದೊಳು ಬಂದ ಪರಿಯದೆಂತೋ ?
ಬೇಕಾದ ಜೀವಿಗಳ ಆಕಾರ ತಾಳಿಹುದು
ಜೋಕೆಯಿಂದಿದರರಿವನರಿದು ಹುಡುಕು! ॥ ೩ ॥

ದೇವನಂಶವ ಪೊರಗೆ ತರುವುದಾಯಿತು ಶಕ್ತಿ
ಜೀವನಂಶದ ಶಕ್ತಿ ಮಾಯೆಯಾಯ್ತು

ಸೇವಿಸಲು ಷಡ್ರಸದ ಜೀವಿ ಮಾಯಾವಶನು
ಭಾವನೆಯದೆಂತೊ ಫಲವಂತೆ ಹುಡುಕು ! ॥ ೪ ॥

ಪಶುಗಳೆಂದವದೆ ನೀನು ರಸಧಾತು ಕಟ್ಟಿರಲು
ಪಶುಪತಿಯು ನಿನ್ನೆಡೆಗೆ ಬರುತಿರುವನೆ ?
ಶಿಶುವೆ ! ಪಶುಪತಿಯವನು ಭಕ್ತಿಪಶನಾಗಿಹನು
ಕುಶಲಮತಿಯಿಂ ಭಕ್ತಿಯೊಡನೆ ಹುಡುಕು ! ॥ ೫ ॥

ಎಲ್ಲಿಹುದೊ ಸಂಸಾರವಲ್ಲಿಯೇ ನಿಸ್ಸಾರ
ಎಲ್ಲಿಯನುರಾಗವಲ್ಲಲ್ಲೆ ವೈರಾಗ್ಯ
ಎಲ್ಲಿಹುದೊ ಅಜ್ಞಾನವಲ್ಲಿಯೇ ವಿಜ್ಞಾನ
ನಿಲ್ಲು ! ನಿಶ್ಚಂಚಲ ಮನದೆ ಹುಡುಕು ! ॥ ೬ ॥

ಶಿವಶಕ್ತಿಯರು ತಾವು ಜೀವಮಾಯೆಗಳಾಗಿ
ಭವದಿ ತೋರಿಹರಾಗಿ ನೀನು ಭವಿಯು
ಸುವಿವೇಕಿ ! ನಿನ್ನಾಶೆ ಮುಗಿಸಿ ಕೈಲಾಸವನು
ಶಿವನಡಿಯು ವಾಗೀಶನೊಡನೆ ಹುಡುಕು ! ॥ ೭ ॥

---

## ೧೮೬೨ ನೆಯ ವಿಕ್ರಮನಾಮಸಂವತ್ಸರದ ಮಳೆ-ಬೆಳೆ ತೇಜಿ-ಮಂದಿ ಭವಿಷ್ಯ

---

ಗುರು ಶನಿ, ಮೇಷರಾಸಿಯಲ್ಲಿರುವುದರಿಂದ [ ಯದಾ ಸುರ ಗುರು ರ್ಮೇಷೆ ಸುಖಂ ಸರ್ವಜನೇಷು ಚ । ಸುಭಿಕ್ಷಂ ಕ್ಷೇಮಮಾರೋಗ್ಯಂ ಸುಖಿನೀ ಮೇದಿನೀ ಭವೇತ್ ॥ ] ಎನ್ನುವಂತೆ ಜನರು ಸೌಖ್ಯದಿಂದ ಇರುವರು. ಸುಭಿಕ್ಷವಾಗುವದು. ದೇಶ ಮಧ್ಯದಲ್ಲಿ ಕ್ಷೇಮವೂ ಆರೋಗ್ಯವೂ ನೆಲಸಿರುವದು. ೮ ತಿಂಗಳ ವರೆಗೂ ಧಾನ್ಯದ ಧಾರಣೆ ತೇಜಿಯು. ಮಳೆ ಚೈತ್ರ ವೈಶಾಖದಲ್ಲಿ ಆರಂಭವಾಗಿ ಕೆಲವೆಡೆ ಅತಿವೃಷ್ಟಿಯಾಗುವದು. ಜೇಷ್ಠ ಮಾಸಗಳಲ್ಲಿ ಬಹುಕಡೆ ಅನಾನುಕೂಲವಾದ ವೃಷ್ಟಿಯಾಗುವದು- ಖಂಡ ವೃಷ್ಟಿಯೋಗ ಕೂಡ ಇರುವದು. ಶ್ರಾವಣ ಭಾದ್ರಪದ ಅಶ್ವೀಜ ಕಾರ್ತಿಕ ಮಾಸಗಳಲ್ಲಿ ಕೆಲವೆಡೆ ಅತಿವೃಷ್ಟಿ. ಕೆಲಕಡೆ ಖಂಡವೃಷ್ಟಿಯಾಗುವದು. ಹತ್ತಾಣೆ ಭಾಗ ಬೆಳೆಬರುವದು. ವಿಶೇಷ ಫಲವನ್ನು ಮಾಸಭವಿಷ್ಯದಲ್ಲಿ ನೋಡಿಕೊಳ್ಳಿರಿ.

# ವರ್ಷ - ಭವಿಷ್ಯ

ಲೇಖಕರು— ವೇ ಹೊಳಗುಂದಿ ಹಿರೇಮಠದ ಸಿದ್ಧಾಂತಿ, ಶಿವರುದ್ರಶಾಸ್ತ್ರಿ
ಗಳು ಹಿರೇ ಪ್ಯಾಟಿಗಳಗೇರಿ. ತಾ. ಹರಪನಹಳ್ಳಿ,
ಪೋಷ್ಟು, ತೆಲಿಗಿ.

—ಂ—

ವಿಕ್ರಮ ಸಂ॥ ದ ಪ್ರತಿಯೊಬ್ಬರ ಭವಿಷ್ಯ, ಮಳೆಭವಿಷ್ಯ, ತೇಜೀ-ಮಂದಿ ಭವಿಷ್ಯ ಸಹಿತ ಒಂದು ವರ್ಷ ಪೂರ್ತಿ.

—:ಂ:—

**ಮೇಷ —** ಮನುಷ್ಯನ ಸ್ಥಿತಿಗಳು ಮೇಲಿಂದ ಮೇಲೆ ಬದಲಾಯಿಸುವವು. ಅವುಗಳು ಅನುಕೂಲವಿದ್ದರೆ, ಎಲ್ಲಾ ಕಾರ್ಯಗಳು ಸಿದ್ಧಿಯಾಗುವವು. ಕೆಟ್ಟ ಕಾಲಗಳಲ್ಲಿ ಆ ತರದ ಜನರ ಸಹವಾಸವೇ ದೊರೆಯುವುದು. ನಿಮ್ಮ ರಾಶಿಯಲ್ಲಿ ಗುರು ಶನಿಮಹಾರಾಜರು ವಾಸವಾಗಿರುವುದರಿಂದ ಶಾರೀರಿಕ ಮತ್ತು ಪ್ರಾಪಂಚಿಕ ಮಾನಸಿಕ ಸುಖವು ದೊರೆಯಲಾರದು. ದೇಹದಲ್ಲಿ ಒಂದಿಲ್ಲೊಂದು ವಿಧದ ರೋಗ ಪ್ರಾಪ್ತಿ. ಶೀತವಾತದಿಂದ ಆಕಸ್ಮಾತ್ ದೇಹಪೀಡೆ. ಸ್ಥಾನ ಚಲನವು, ಅಕಾಲ ಭೋಜನ, ನಿದ್ರಾಭಂಗ ಮಾಡುವ ಉದ್ಯೋಗ - ವ್ಯವಹಾರಗಳಿಂದ ಅಲ್ಪ ಸುಖ, ಮತ್ತು ಅಲ್ಪ ಲಾಭ, ಪಶು ನಷ್ಟ, ಬಂಧುಗಳಲ್ಲಿ ಕಲಹ, ಮಿತ್ರರಲ್ಲಿ ವಿರೋಧ ಮಾತೃ ವರ್ಗದವರಲ್ಲಿ ಹಾನಿ. ಜಲಸಂಬಂಧವಾದ ಕಾರ್ಯದಿಂದ ನಷ್ಟ. ಈ ವರ್ಷ ಯಾವ ಕಾರ್ಯಮಾಡಿದರೂ ಹುಷಾರಿಯಿಂದ ಮಾಡಿರಿ. ಭಾತೃ ವರ್ಗದವರಿಂದ ಸುಖವೆನ್ನಬಹುದು. ವಿದ್ಯಾರ್ಥಿ ವಿದ್ಯಾರ್ಥಿನಿಯರಿಗೆ ಅನುಕೂಲ.

**ವೃಷಭ —** ನಿಮ್ಮ ನಡೆಯಂತೆ ನಿಮಗೆ ಫಲ ದೊರೆಯುವದು, ಹೀಗೆ ಜಗತ್ತಿನ ನೇಮವಿರುವದು. ಈ ವರ್ಷ ನಿಮ್ಮ ಸ್ವಭಾವವು ಕೋಪವುಳ್ಳದ್ದಾಗಿರುವದು. ಈ ಸ್ವಭಾವದ ಮೂಲಕ ನಿಮ್ಮ

ಸ್ನೇಹಿತರು ನಿಮ್ಮಲ್ಲಿ ಕ್ರೋಪವನ್ನುಂಟುಮಾಡಿಕೊಳ್ಳುವರು. ನಿಮ್ಮ ರಾಶಿಯಲ್ಲಿ ಮಂಗಳನು ವಾಸವಾಗಿರುವದರಿಂದ ಆದಿಯಲ್ಲಿ ಎರಡು ತಿಂಗಳು ನಿಮಗೆ ಬಹಳವಾಗಿ ಉಷ್ಣ ಆಧಿಕದಿಂದ ಆಯಾಸವಾಗುವದು. ಮನೆಯಲ್ಲಿ ಶುಭ ಕಾರ್ಯಗಳ ಪ್ರಯತ್ನವು. ಪ್ರಯಾಣದಿಂದ ತೊಂದರೆಯು. ಅಕಾಲ ಭೋಜನವು, ಖರ್ಚುಬಹಳ. ಗೃಹಕೃತ್ಯದ ಮೂಲಕ ವ್ಯಸನವು. ಪ್ರಾಪಂಚಿಕ, ಮಾನಸಿಕ ಸುಖ ಕಡಿಮೆ. ವ್ಯವಹಾರ ಉದ್ಯೋಗಗಳ ಮೂಲಕ ಅಲ್ಪ ಲಾಭವು, ಅಲ್ಪ ಸುಖವು. ಬಿಳುಪು, ರಸವಸ್ತುಗಳಿಂದಲೂ ಲಾಭ. ಹೊಸ ಹೊಸ ಕಾರ್ಯಗಳ ಅನುಕೂಲತೆಯು, ಸರಕಾರಿ ಮೂಲಕ ವ್ಯಸನವು. ಪಶು ನಷ್ಟತೆಯು. ಭೂಮಿಯ ಮೂಲಕ ವ್ಯಸನವು. ಶುಭ–ಅಶುಭದಿಂದ ಕೂಡಿದ ಮಿಶ್ರ ಫಲ ನಡೆಯುತ್ತವೆ. ವಿದ್ಯಾರ್ಥಿ-ವಿದ್ಯಾರ್ಥಿನಿಯರಿಗೆ ತೊಂದರೆಯು. ಅಕಾಲ ಭೋಜನವು.

ಮಿಥುನ — ಈ ವರ್ಷದಲ್ಲಿ ನಿಮ್ಮ ಶರೀರಾರೋಗ್ಯವು ಚನ್ನಾಗಿ ಉಳಿಯುವದು. ನಿಮ್ಮ ಮನೋವೃತ್ತಿಯು ಉಲ್ಲಾಸ ಭರಿತವಾಗುವದು. ಈ ವರ್ಷದಲ್ಲಿ ನಿಮ್ಮ ಮನೆತನದ ವಿಷಯದಲ್ಲಿ ಅನುಕೂಲವಾಗುವದು, ಮನೆಯಲ್ಲಿ ಎಲ್ಲಾ ಜನರು ಒಂದೆ ಮನಿಸ್ಸಿನಿಂದ ನಡೆದುಕೊಂಡು, ನಿಮ್ಮ ಜೀವನದಲ್ಲಿ ಆನಂದವನ್ನು ಹುಟ್ಟಿಸುವರು. ಧರ್ಮ ಕಾರ್ಯಗಳು ಯಥಾ ಸಾಂಗವಾಗಿ ನೆರವೇರುವವು, ಸಮಾಜದಲ್ಲಿ ಮಾನ ಸನ್ಮಾನ ಲಭಿಸುವದು, ಮೊಕದಮ್ಮೆಗಳ ತೀರ್ಪು ಅನುಕೂಲವಾಗುವದು. ಶತೃಗಳು ಮಿತ್ರರಾಗುವರು. ಪ್ರವಾಸದ ಇಚ್ಛೆಯು ನಿರ್ವಿಘ್ನದಿಂದ ಕೊನೆಗಾಣುವದು. ನೌಕರಿ-ದಂಧೆಗಳಲ್ಲಿ ಪ್ರಗತಿಯಾಗುವದು. ಸ್ತ್ರೀ - ಸೌಖ್ಯ ಚನ್ನಾಗಿ ಲಭಿಸುವದು, ಭೂಮೂಲಕವಿಂದಲೂ ಮಾಡುವ ಉದ್ಯೋಗದಿಂದ ಲಾಭದಾಯಕವೆನಿಸುವದು.

ಕರ್ಕ — ಸಂಸಾರಕ್ಕೆ ಹೆದರಿದರೆ ಹೇಗೆ. ಧೈರ್ಯ ತಾಳಿ ಮುಂದೆ ಸಂಸಾರ ಸಾಗಿಸಿರಿ. ಹೀಗೆ ಹೆದರಿದರೆ ಸಂಸಾರವು ಹೇಗ ನಡಿಯುವದು ? ಧೈರ್ಯದಿಂದ ಸಂಸಾರ ರಥವನ್ನು ಮುಂದಕ್ಕೆ ಸಾಗಿಸಿರಿ. ಈ ವರ್ಷದಲ್ಲಿ ನಿಮ್ಮ ಕಾರ್ಯಸ್ಥಾನದಲ್ಲಿ ಗುರು ಮಹಾರಾ

ಜನು ಬರುವವರಿಂದ ಶತ್ರುಗಳ ಪ್ರಯತ್ನವು ನಿಷ್ಫಲವಾಗುವದು. ಈ ವರ್ಷ ನಿಮ್ಮ ಆರೋಗ್ಯವು ಚನ್ನಾಗಿ ಉಳಿಯುವದು. ದುಡ್ಡಿನ ವಿಚಾರ ಸಮಾಧಾನಕರವಿರುವದು. ಮನೆಯಲ್ಲಿ ಮಂಗಳ ಕಾರ್ಯಗಳು ಜರಗುವವು. ನೌಕರಿ-ಧಂಧೆಗಳ ವಿಷಯದಲ್ಲಿ ಮನಸ್ಸು ಶಾಂತವಿರುವದು. ವಿದ್ವಾಂಸರ ಮತ್ತು ಸಜ್ಜನರ ಸಹವಾಸದಿಂದ ಮನಸ್ಸು ಆನಂದ ಭರಿತವಾಗುವದು. ಬಾಲಕರ ಆರೋಗ್ಯ ಸುಧಾರಿಸುವದು. ವಿದ್ಯಾರ್ಥಿ-ವಿದ್ಯಾರ್ಥಿನಿಯರಿಗೆ ವಿದ್ಯಾಭ್ಯಾಸದ ದೃಷ್ಟಿಯಿಂದ ಈ ವಾರವು ಪ್ರಗತಿಯದಾಗಿರುವದು, ವಧೂ-ವರರ ಮಾತುಕತೆಗಳು ಪೂರ್ಣವಾಗುವವು ಕಿಂಚಿತ್ ಬಂಧುಗಳಲ್ಲಿ ಕಲಹಯೋಗವಿರುವದು. ಪಾಲಿನ ವ್ಯಾಪಾರದಿಂದ ಕಲಹಯೋಗವಿರುವದು ಹುಷಾರಿ।

ಸಿಂಹ — ನಿಮ್ಮ ರಾಶಿಯು ಕ್ಷತ್ರಿಯ ವರ್ಣದ ರಾಶಿಯಾಗಿದೆ. ಮತ್ತು ಅಗ್ನಿ ತತ್ವದ್ದಾಗಿದೆ. ನೀವು ದೆವಲುವವರಲ್ಲ. ನಿಮ್ಮ ಸ್ವಭಾವವು ವೀರಸ್ವಭಾವದಂತಿರುವದು. ಈ ವರ್ಷ ನಿಮ್ಮ ಮನೆಯಲ್ಲಿ ಶುಭ ಶೋಭನ ಕಾರ್ಯಗಳು ನಡಿಯುತ್ತವೆ. ಶತ್ರುಗಳು ನಿಮ್ಮ ಎದುರಿಗೆ ನಿಲ್ಲಲಾರರು. ಮಾಡುವ ಉದ್ಯೋಗದಿಂದಲೂ ಭೂ ಮೂಲಕದಿಂದಲೂ ಅನುಕೂಲತೆ. ಪ್ರಯಾಣವು ಪಿತೃವರ್ಗದವಲ್ಲಿ ತೊಂದರೆಯು. ಸರಕಾರಿ ಮೂಲಕ ಅನುಕೂಲತೆಯು. ವಿಷಮ-ಜ್ವರ ಪೀಡೆಯು- ಪ್ರಾಪಂಚಿಕ ಸುಖ ಉತ್ತಮ. ಪರರ ಕೆಲಸಕ್ಕೆ ಪೇಚಾಟ ಬೀಳುವಿಕೆಯು. ಪುಣ್ಯಕ್ಷೇತ್ರ ದರುಶನವು, ವಾಹನ ಸಂಗ್ರಹವು. ಸ್ನೇಹಿತರಿಂದ ಆನಂದವು ಧೈರ್ಯವನ್ನು ತಾಳಿರಿ. ಸಂಕಟಗಳಿಗೆ ಹೆದರಬೇಡಿರಿ. ವಿದ್ಯಾರ್ಥಿ-ವಿದ್ಯಾರ್ಥಿನಿಯರಿಗೆ ಸರಕಾರಿ ನೌಕರಿಗೆ ಅನುಕೂಲತೆಯು.

ಕನ್ಯಾ — ನಿಮ್ಮ ಜೀವನಸ್ಥಾನವಾದ ಅಷ್ಟಮಸ್ಥಾನದಲ್ಲಿ ಗುರು ಶನಿಮಹಾರಾಜರಿರುವದರಿಂದ ಈ ವರ್ಷ ನೀವು ದೊಡ್ಡ ದೊಡ್ಡ ವಿಚಾರಗಳಿಗೆ ಕೈ ಹಾಕುವಿರಿ. ಆ ವಿಚಾರದಂತೆ ಕಾರ್ಯಗಳು ನಡಿಯುವದಿಲ್ಲಾ. ಇರಲಿ ಈ ವರ್ಷ ನಿಮ್ಮ ಆರೋಗ್ಯಕ್ಕೆ ಅನುಕೂಲವಾಗಿರುವದಿಲ್ಲ. ಈ ವರ್ಷದಲ್ಲಿ ನಿಮ್ಮ ಮುಖದ

ವೇಕ್ರೆ ಉತ್ಸಾಹೀನತೆಯು ಕಂಡು ಬರುವದು. ಬಹಳ ಚಿಂತೆಗೊಳ ಗಾಗುವಿರಿ. ಮಾಡಿದ ಕೆಲಸಕ್ಕೆ ವಿಘ್ನವಾಗುವದು. ಹೀಗಾಯಿತಲ್ಲಾ ಎಂದು ವ್ಯಸನ ಮಾಡುವಿರಿ. ನಿಮಗೆ ಗ್ರಹಚಾರ ಚನ್ನಾಗಿಲ್ಲ. ಕಾಲ ಮಾನವನ್ನು ನೋಡಿಕೊಂಡು ಕೆಲಸ ಮಾಡುವದು ಒಳ್ಳೇದು. ಈ ವರ್ಷ ನೌಕರಿ ದಂಧೆಗಳ ಸ್ಥಿತಿಯು ಚನ್ನಾಗಿಲ್ಲಾ. ಖರ್ಚು ಬಹಳ. ಭೂ ಮೂಲಕದಿಂದಲೂ ತೊಂದರೆ. ವಿಷಮಜ್ವರ ಪೀಡೆ. ಕಳ ತ್ರವಿಗೆ ತೊಂದರೆ, ಗರ್ಭ ಪೀಡೆ, ಪುತ್ರ ಪೀಡೆ, ಅಕಾಲ ಭೋಜನ ಗುರು ಶನಿ ಜಪವನ್ನು ಮಾಡಿರಿ.

ತುಲಾ — ಮಾನವ ಜೀವನ ಬರೀ ಜೀವನ ಧಾರಣ ಮಾಡಲು ಉಪ್ಪವಿಸಿರುವದಿಲ್ಲ. ಕಷ್ಟ ಪಟ್ಟು ಮುಂದೆ ಬಂದು ಹೆಸರುವಾಸಿ ಯಾಗಲು ಶ್ರಮಿಸುವದಾಗಿದೆ. ಈ ವಾಕ್ಯವನ್ನು ನೀವು ನೆನಪಿ ನಲ್ಲಿಟ್ಟರೆ ನಿಮಗೆ ಅನುಕೂಲವಾಗುವದು. ದೈವಕ್ಕೆ ಪ್ರಯತ್ನದ ಅವಶ್ಯಕತೆ ಹೆಚ್ಚು ಇರುವದು. ಸದ್ಯಕ್ಕೆ ಶುಭ ಕಾರ್ಯಗಳಲ್ಲಿ ಮ- ನಸ್ಸು ಹಾಕುವಿರಿ, ಮನೆಯಲ್ಲಿ ಶೋಭನ ಕಾರ್ಯಗಳು ನಡೆಯುತ್ತವೆ. ಕಳತ್ರ ಕಲಹ, ವಾತ ಶೂಲೆಯಿಂದಲೂ ಉಷ್ಣ ವಿಕಾರದಿಂದಲೂ ಕಾಡುವದು. ಆದಾಯ ಕಡಿಮೆ, ವ್ಯಯ ಅಧಿಕ. ಪದೇ ಪದೇ ಗೃಹ ಕೃತ್ಯದ ಚಿಂತೆಗಳು ಬಂದೊದಗುತ್ತವೆ, ಭೂ ಮೂಲಕದಿಂದಲೂ ಅಲ್ಪ ಲಾಭ, ಗ್ರಹಪೀಡೆಯು ಚಿಂತೆ ಅಧಿಕ. ಎಲ್ಲರನ್ನು ಸಂತೋ ಷ ಪಡಿಸುವದಕ್ಕೆ ಸಾಧ್ಯವಿಲ್ಲ.

ವೃಶ್ಚಿಕ — ನೀವು ನಿಮ್ಮ ಉದ್ಯೋಗದಲ್ಲಿ ನಿರುತರರಾಗಿರು ವುದು ಮುಖ್ಯ ಕರ್ತವ್ಯ. ನೀವು ನಿರುದ್ಯೋಗಿಗಳಾಗಿ ಆಲಸ್ಯದಿಂದ ಕಾಲಹರಣಮಾಡುವದು ಶುದ್ಧ ತಪ್ಪು. ಈ ವರ್ಷದಿಂದ ನಿಮಗೆ ಉದ್ಯೋಗದಿಂದಲೂ ಭೂ ಮೂಲಕದಿಂದಲೂ ತಕ್ಕಮಟ್ಟಿಗೆ ಸುಖವು- ನಿಮಗೆ ತುಸು ಆನಂದವೆನಿಸುವದು. ಪ್ರಕೃತಿಯು ಚನ್ನಾಗಿ ಉಳಿ ಯುವದು. ಶೀತವಾತದಿಂದ ತುಸು ಆಯಾಸವೆನಿಸುವದು. ಉಷ್ಣ ವಿಕಾರದಿಂದ ಕಾಡುವುದು. ವ್ರಣಭಯವುಂಟಾಗುವುದು. ಶುಭಕಾರ್ಯ ಗಳಲ್ಲಿ ವಿಘ್ನಗಳು ಒದಗುವವು. ಕ್ಷೇತ್ರ ದರ್ಶನವಾಗುವುದು. ಆದಾಯ

ದಷ್ಟು ಖರ್ಚುಬರುವದು. ಗೃಹಕೃತ್ಯದಮೂಲಕ ಮಧ್ಯ ಮಧ್ಯ ವಿಘ್ನಗಳು ಒದಗುವವು. ಅಕಾಲಭೋಜನವು. ವಿದ್ಯಾರ್ಥಿ ವಿದ್ಯಾರ್ಥಿನಿಯರಿಗೆ ಅನುಕೂಲತೆಯು, ಸರ್ಕಾರದಲ್ಲಿ ಮರ್ಯಾದೆಯು. ಖರ್ಚು ವೆಚ್ಚ ಸಮ.

ಧನುಸ್ಸು —ಧನು ಎಂದರೆ ಯುದ್ಧ ಮಾಡಲು ಉಪಯೋಗಿಸುವ ಆಯುಧ. ಅದು ಆಟದ ಸಾಮಾನವಲ್ಲ. ಅದು ಪ್ರೇಮವೀರರ ಶಸ್ತ್ರವಲ್ಲ. ಮತ್ತು ಧರ್ಮವೀರರ ವಸ್ತ್ರವಲ್ಲ. ಅದು ಶೂರ ಯೋಧರ ಧೈರ್ಯದಿಂದ ಸಿಕಾರಿಮಾಡುವ ವೀರರ ಧೈರ್ಯಶಾಲಿಗಳಾಗಿ ರಣರಂಗದಲ್ಲಿ ಹೋರಾಡುವ ವೀರರು ಧರಿಸುವ ಭೂಷಣವಾದ ವಸ್ತುವು ಧನಸ್ಸು.

ಇಂತಹ ರಾಸಿಯಲ್ಲಿ ನೀವು ಜನಿಸಿದಲು ನನಗೆ ಏತರ ಭಯ ಅನ್ನುವಂತಹ ಧೈರ್ಯವನ್ನು ತಾಳಿರಿ. ಸಂಕಟಗಳಿಗೆ ಹೆದರಬೇಡಿರಿ ಈ ವರ್ಷದಲ್ಲಿ ನಿಮ್ಮ ಶರೀರ ಪ್ರಕೃತಿಯ ವಿಷಯವಾಗಿ ತೊಂದರೆಯಾಗುವ ಸಂಭವ. ದುಡ್ಡಿನ ಅಡಚಣೆ ಬಹಳವಾಗುವದು. ಪುತ್ರ ಪುತ್ರಿಯರ ವ್ಯಸನ. ಅಕಾಲ ಭೋಜನವು, ನೇತ್ರಪೀಡೆಯು. ಉದ್ಯೋಗ ವ್ಯವಹಾರದಿಂದ ಸಾಧಾರಣ ಸುಖವು. ನೌಕರಿ ಧಂದೆಗಳಲ್ಲಿ ವಾದವಿವಾದಗಳಾಗುವವು. ಗೃಹದಲ್ಲಿ ಶುಭಕಾರ್ಯಗಳಾಗುವವು.

ಮಕರ —ಪ್ರಸಂಗವು ಈಹೊತ್ತು ಇದ್ದರೆ ನಾಳೆಯಿರುವದಿಲ್ಲ. ಎಂಥಾ ಪ್ರಸಂಗಗಳೇ ಬರಲಿ ಅವುಗಳನ್ನು ಧೈರ್ಯದಿಂದ ಸಹಿಸುವವನೇ ಧೀರನು. ಈ ವರ್ಷದಲ್ಲಿ ಗುರು ಶನಿಗಳು ನಿಮ್ಮ ಸುಖಸ್ಥಾನದಲ್ಲಿ ವಾಸವಾಗಿರುವದರಿಂದ ಸ್ವಜನ ಪರಜನರಿಂದ ಕಲಹ. ವ್ಯವಹಾರದಲ್ಲಿ ಹಾನಿಯು. ಮನಸ್ಸಿಗೆ ವಿಶೇಷ ವ್ಯಸನವು. ಗೃಹದಲ್ಲಿ ಚಿಂತೆಗಳು. ಸಾಲದ ತೊಂದರೆ. ಖರ್ಚು ಬಹಳ. ನೌಕರಿ ಧಂದೆಗಳ ವಿಷಯದಲ್ಲಿ ನಿಮಗೆ ಚಿಂತೆಗಳು ಉದ್ಭವಿಸುವವು. ಚಿತ್ತಭ್ರಾಂತಿಯು ಕೈಕೊಂಡ ಕಾರ್ಯಗಳಲ್ಲಿ ಆಲಸ್ಯಉಂಟಾಗುವದು. ಪುತ್ರಯೋಗಕ್ಕೆ ಭಂಗವಿರುವದು. ಹೊಟ್ಟೆಶೂಲೆಯಿಂದ ಬಳಲಬೇ

ಕಾಗುವದು. ಮಾಡುವ ಉದ್ಯೋಗದಲ್ಲಿ ಸಾಧಾರಣ ಸುಖವಿರುವದು ವಾಹನ ಭಯವು. ಮಾತೃವರ್ಗದಲ್ಲಿ ಕಷ್ಟವು.

ಕುಂಭ— ಈ ವರ್ಷವಲ್ಲಿ ನಿಮ್ಮ ಶರೀರದ ಆರೋಗ್ಯವು ಚನ್ನಾಗಿ ಉಳಿದು ನಿಮ್ಮ ಮನಸ್ಸು ನೆಮ್ಮದಿಯಾಗಿರುವದು. ಈ ವರ್ಷ ನಿಮ್ಮ ಮನೆತನದ ವಿಷಯವಾಗಿ ಅನುಕೂಲವಾಗುವದು. ಮನೆತನದಲ್ಲಿ ಎಲ್ಲ ಜನರು ಒಂದೇ ಮನಸ್ಸಿನಿಂದ ನಡೆದುಕೊಂಡು ನಿಮಗೆ ಆನಂದ ವನ್ನು ಹುಟ್ಟಿಸುವರು. ಸಹೋದರ ಸಹೋದರಿಯರಿಗೆ ಕಷ್ಟವಿ ರುವದು. ವಾದ ವಿವಾದಗಳಲ್ಲಿ ಜಯವಿರುವದು. ಮನೆಯಲ್ಲಿ ಶುಭಕಾರ್ಯಗಳ ಆಲೋಚನೆ ನಡೆಯುವದು. ವ್ಯಾಪಾರ ಉದ್ಯೋಗ ಗಳಲ್ಲಿ ಸಾಧಾರಣ ಸುಖವಿರುವದು. ಮಿತ್ರವರ್ಗದಲ್ಲಿ ಕಲಹಯೋ ಗವಿರುವದು. ಕೆಟ್ಟ ಕಾರ್ಯಕ್ಕೆ ಮನಸ್ಸು ಕುತೂಹಲಪಡುವದು. ಅಕಾಲ ಭೋಜನವು. ನಿದ್ರಾಭಂಗವು. ಪದೇ ಪದೇ ಖರ್ಚು ಸ್ವಲ್ಪ ಸುಭಯೋಗವಿರುವದು. ಭೂಮಿಯಿಂದ ಅನುಕೂಲತೆ.

ಮೀನ — ನೀವು ಈ ವರ್ಷ ಪದೇ ಪದೇ ಸಂಚಾರಮಾಡ ಬೇಕಾಗುವದು. ಅದನ್ನು ಬಹಳಮಟ್ಟಿಗೆ ದೂರಮಾಡಿರಿ. ಖರ್ಚಿನ ಸಂಭವವಿದೆ. ಗುರು ದೇವತಾ ಕಾರ್ಯಗಳು ನಡೆಯುವವು. ಉದ್ಯೋ ಗ ಧಂದೆಗಳಲ್ಲಿ ಅನುಕೂಲತೆಯಿರುವದು ಭೂಮೂಲಕ ಸಾಧಾರಣ ಸುಖವಾಗುವದು. ನೇತ್ರಶೂಲೆಯಾಗುವದು. ಮೃಷ್ಟಾನ್ನಭೋಜನ ವಾಗುವದು. ಕುಟುಂಬದಲ್ಲಿ ವ್ಯಸನ. ಪ್ರಯಾಣದಲ್ಲಿ ಕಲಹದ ಯೋಗವಿರುವದು. ವಿಷಮಜ್ವರಪೀಡೆಯುಂಟಾಗುವದು. ಗುರುದರ್ಶ ನವು. ಉತ್ತರದಿಕ್ಕಿನ ಪ್ರಯಾಣ. ವ್ಯಾಪಾರಮೂಲಕ ಧನಧಾನ್ಯ ಲಾಭ. ಶುಭಕಾರ್ಯಗಳ ಪ್ರಯತ್ನ- ಖರ್ಚು ಹೆಚ್ಚು ಬರುವ ಸಂಭವವಿದೆ. ಕುಟುಂಬ ವರ್ಗದಲ್ಲಿ ಕಲಹ- ಆನಂದಕಾಲ. ಬಂಧು ಕಲಹವಾಗುವ ಸಂಭವವಿದೆ.

[ ೧೦ ನೇ ಪುಟದಲ್ಲಿ ನೋಡಿರಿ ].

---

# ಧರ್ಮರಾಜ್ಯ

ವೈಶಾಖ — ಜ್ಯೇಷ್ಠ

ಈ ಎರಡೂ ಸಂಚಿಕೆ ಸೇರಿವೆ.



ಕೃತದೊಳಾ ತ್ರೇತೆಯೊಳು ದ್ವಾಪಾರದೊಳುಂ ಕ್ರಮದೆ ।
ಮತಿಯುಕ್ತ " ನಲ-ರಾಮ-ಧರ್ಮ " ನೃಪರಿಂ ॥
ಅತಿಯಶವನಾಂತು ಬಾಳಿದ ತೆರದೊಳೀ " ಕೃಷ್ಣ - ।
ಕ್ಷಿತಿಪಾಲನಿಂ " ಬಾಳು " ಧರ್ಮರಾಜ್ಯ " ! ॥

ವರಕವಿ ಶ್ರೀ ವಾಗೀಶ.

ಸುವರ್ಣಕ್ಕೂ ಅಲಂಕಾರಕ್ಕೂ ಭೇದವುಂಟೇನಯ್ಯಾ! ದೀಪಕ್ಕೂ ಜ್ಯೋತಿಗೂ ಭೇದವುಂಟೇನಯ್ಯಾ! ನೂಲಿಗೂ ವಸ್ತ್ರಕ್ಕೂ ಭೇದವುಂಟೇನಯ್ಯಾ! ಗುರುನಾಥಾ ನಿನಗೂ ನಿನ್ನ ಶರಣನಿಗೂ ಭೇದವಿಲ್ಲ [illegible] ಹೇಳು ಮರುಳಸಿದ್ಧೇಶ್ವರಾ!

[ಪ್ರಸ್ನಣಾಚಾರ್ಯ]

## ವಿಷಯಾನುಕ್ರಮಣಿಕೆ.



## ಇತ್ತ ಲಕ್ಷ್ಯಿಸಿರಿ!

ನಮ್ಮ ಧರ್ಮರಾಜ್ಯದಲ್ಲಿ ಇನ್ನು ಮುಂದೆ ಅಮೂಲ್ಯವಾದ ನಾನಾ ವಿಷಯ ಪ್ರತಿಪಾದಕಗಳಾದ ಗ್ರಂಥಗಳು ಕ್ರಮವಾಗಿ ಪ್ರಕಟವಾಗುವವು ಈತಿಂಗಳಲ್ಲಿ ಶಂಭುದೇವಾಂಗ ಪುರಾಣವು ಪ್ರಾರಂಭವಾಗಿದೆ. ಆದುದರಿಂದ ಚಂದಾದಾರರೆಲ್ಲರೂ ಎಲ್ಲಾ ಸಂಚಿಕೆಗಳನ್ನು ಕಾದಿಟ್ಟು ಕೊನೆಗೆ ಆಯಾಗ್ರಂಥಗಳ ಪುಟಸಂಖ್ಯೆಯಂತೆ ಜೋಡಿಸಿ ಬೈಂಡುಮಾಡಿಸಿದರೆ ಗ್ರಂಥವು ಸಿದ್ಧವಾಗುವುದು, ಸಂಚಿಕೆಯನ್ನು ಕಳಕೊಂಡರೆ ಮತ್ತೆ ಸಂಗ್ರಹಿಸುವುದು ಕಷ್ಟವಾಗುವುದು. ಅಲ್ಪ ವ್ರಯದಲ್ಲಿ ಬೆಲೆಬಾಳುವ ಉದ್ಗ್ರಂಥಗಳನ್ನು ಸಂಗ್ರಹಿಸುವುದನ್ನು ಯಾರು ಬಯಸುವವದಿಲ್ಲ?

ಆದುದರಿಂದ ಸರ್ವರೂ ತಮ್ಮ ತಮ್ಮ ಮಿತ್ರರಲ್ಲಿ ಪ್ರೋತ್ಸಾಹಿಸಿ ಈ ಪತ್ರಿಕೆಗೆ ಚಂದಾರನ್ನೂ ಮಾಡಿಸುವಿರಾಗಿ ಆಶಿಸುತ್ತೇವೆ.

ವಿನೀತ ಸಂಪಾದಕ